# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೧ - ಭಾಗ ೧



## ಶ್ರೀ ಶ್ರೀದವಿಠಲರು
## ಮತ್ತು ಧಾರವಾಡ ಪ್ರದೇಶದ
## ಇತರ ಹರಿದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೧ - ಭಾಗ ೧

# ಶ್ರೀ ಶ್ರೀದವಿಠಲರು ಮತ್ತು ಧಾರವಾಡ ಪ್ರದೇಶದ ಇತರ ಹರಿದಾಸರ ಕೀರ್ತನೆಗಳು

## ಭಾಗ ೧


*ಸಂಪಾದಕರು*

ಡಾ. ಶ್ರೀನಿವಾಸ ಹಾವನೂರ

ಶ್ರೀಮತಿ ನಳಿನಿ ವೆಂಕಟೇಶ



ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

**SAMAGRA DASA SAHITYA VOLUME - 21 Part 1** :
*Shri Shridavitalaru Mattu Dharwada Pradeshada Ithara Haridasara Hadugalu.* Edited by Dr. Shrinivas Havanur and Smt. Nalini Venkatesh. Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 51 + ೩೭೪


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨

**ಮುದ್ರಕರು :**
ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯಮಯ ವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್.ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ.ಎಂ.ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖಿತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ–ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ–ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು– ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವಕ್ಕೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ. ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ. ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ. ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ. ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ.ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ಡಾ. ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾಲ್ಡಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಧಾರವಾಡ ಪ್ರದೇಶದ ಹರಿದಾಸ ಪರಂಪರೆ

ಧಾರವಾಡ ಪ್ರದೇಶದ ಹರಿದಾಸರಿಗೆಂದಿರುವ, ಈ ೨೧ನೆಯ ಸಂಪುಟದಲ್ಲಿ ೨೫ ಜನ ಹರಿದಾಸರು ಸಮಾವೇಶಗೊಂಡಿದ್ದಾರೆ ಇತರ ಯಾವುದೇ ಸಂಪುಟದಲ್ಲಿ ಇಷ್ಟೊಂದು ಜನ ಕಾಣಸಿಗರು. ಎಂತಲೇ ಎರಡು ಭಾಗಗಳಾಗಿ ಈ ಸಂಪುಟ ರೂಪುಗೊಂಡಿದೆ.

ಧಾರವಾಡ ಪ್ರದೇಶವೆಂಬುದರಲ್ಲಿ ಗದಗ, ಹಾವೇರಿ ಮತ್ತು ಮುನ್ನಿನ ಧಾರವಾಡ–ಈ ಮೂರು ಜಿಲ್ಲೆಗಳು ಸೇರಿವೆ. ಇಲ್ಲಿ ತುಸು ತಡವಾಗಿ ದಾಸಸಾಹಿತ್ಯ ಪರಂಪರೆ ಕಾಣಿಸಿಕೊಂಡಿತೆನ್ನಬಹುದು. ಮೊದಲ ಘಟ್ಟದ ಶ್ರೀ ವ್ಯಾಸರಾಯರು, ಪುರಂದರ, ಕನಕ ದಾಸರುಗಳು ಹಾಗೂ ಪ್ರಸನ್ನವೆಂಕಟರು ಇವರುಗಳ ಹಾಡುಗಳು ಜನರ ಬಾಯಿಯಲ್ಲಿ ಕೇಳಬರುತ್ತಿದ್ದುವೇನೊ ನಿಜ. ಈ ಪ್ರದೇಶದ ಬಾಡ, ಕಾಗಿನೆಲೆಗಳಲ್ಲಿದ್ದ ಕನಕದಾಸರನ್ನು ಬಿಟ್ಟರೆ ಬೇರಾವ, ಮೊದಲ ಘಟ್ಟದ ದಾಸರು ಇಲ್ಲಿ ಬಾಳಿದಂತೆ ಕಾಣುವುದಿಲ್ಲ. ಯಾವಾಗ ತಿರುಪತಿ ಮತ್ತು ಮಂತ್ರಾಲಯಗಳಿಗೆ ಇಲ್ಲಿಯ ಭಾವುಕರು ಓಡಾಡತೊಡಗಿದರೊ, ಇತರ ದಾಸವರ್ಯರೊ. ಸಂಪರ್ಕ ಬಂದು ಸ್ವಯಂ ಕೃತಿರಚನೆಗೆ ಚಾಲನೆ ದೊರೆತಂತೆ ಕಾಣುತ್ತದೆ. ಜೊತೆಗೆ ಜಗನ್ನಾಥದಾಸರಂತಹ ಒಬ್ಬಿಬ್ಬರು ಇಲ್ಲಿಯ ಹಲವಾರು ಊರುಗಳನ್ನು ಸಂದರ್ಶಿಸುತ್ತಿದ್ದ ಕಾರಣವೂ ಇದೆ.

ಆದರೆ ಮಾಧ್ವಸಂಪ್ರದಾಯದ ಮನೆತನಗಳು ಈಗ ಹಳ್ಳಿಗಳಾಗಿ ಪರಿಗಣಿತವಾಗಿರುವ ಕರ್ಜಗಿ, ರಿತ್ತಿ, ಕಡಕೊಳ ಮುಂತಾದ ಊರುಗಳಲ್ಲಿ ಪ್ರಬಲವಾಗಿಯೇ ಇದ್ದುವು. ಇವರುಗಳಿಗೆ ಗಟ್ಟಿಮುಟ್ಟಾದ ಆಶ್ರಯವನ್ನು

ಒದಗಿಸಿದವರು ಉತ್ತರಾದಿಮಠದ ಶ್ರೀ ಸತ್ಯಬೋಧಸ್ವಾಮಿಗಳು. ಅವರು ಈ ಜಿಲ್ಲೆಯ ಸವಣೂರಿನಲ್ಲಿಯೇ ನೆಲೆನಿಂತದ್ದು ಮತ್ತು ಹರಿದಾಸ ವರ್ಗದವರನ್ನು ಸೌಹಾರ್ದದಿಂದ ಕಾಣುತ್ತಿದ್ದದ್ದು ದಾಸಸಾಹಿತ್ಯ ಪರಂಪರೆಗೆ ಪೋಷಕವಾಗಿ ಪರಿಣಮಿಸಿತು. ಈ ಸ್ವಾಮಿಗಳವರನ್ನು ಕಾಣಬೇಕೆನ್ನುವ ಕಾರಣದಿಂದ ಶ್ರೀ ಜಗನ್ನಾಥದಾಸರು ಈ ಭಾಗದಲ್ಲಿ ಸಂಚರಿಸುತ್ತಿದ್ದರೆನ್ನಬಹುದು.

ಮಾಧ್ವ ಪರಂಪರೆಯಲ್ಲಿ ಶ್ರೀ ಸತ್ಯಬೋಧರಿಗಿದ್ದ ಸ್ಥಾನ-ಮಾನ ಜೊತೆಗೆ ಹರಿದಾಸರ ಕುರಿತ ಸದ್ಭಾವ ಇವುಗಳಿಂದಾಗಿ, ಅನೇಕ ಹರಿದಾಸರು, ಅವರು ವೃಂದಾವನಸ್ಥರಾದ ಅನಂತರವೂ, ಸ್ತುತಿಪರ ಹಾಡುಗಳನ್ನು ರಚಿಸಿ ಅವರಿಗೆ ನಮನ ಸಲ್ಲಿಸಿದ್ದಾರೆ. ಮಾಧ್ವಯತಿಗಳಲ್ಲಿ ಶ್ರೀ ಜಯತೀರ್ಥರು ಮತ್ತು ಶ್ರೀ ರಾಘವೇಂದ್ರರು ಇವರನ್ನುಳಿದು, ಹೆಚ್ಚಿನ ಕೀರ್ತನೆಗಳು ಶ್ರೀ ಸತ್ಯಬೋಧರನ್ನು ಕುರಿತೇ ಇವೆ. ತಾತ್ಪರ್ಯವೆಂದರೆ ಶ್ರೀ ಸತ್ಯಬೋಧರ, ಅದರಂತೆ ಆ ಮುಂದಿನ ಕೆಲವು ಪೀಠಾಧಿಪತಿಗಳ ಪ್ರೇರಣೆಯಿಂದ ದಾಸಸಾಹಿತ್ಯ ಇಲ್ಲಿ ಪಲ್ಲವಿಸಿತು.

ಶ್ರೀ ಸತ್ಯಬೋಧರು(೧೭೪೪-೧೭೮೪) ಮತ್ತು ಜಗನ್ನಾಥದಾಸರು (೧೭೨೮-೧೮೦೯) ಇವರುಗಳು ಆದ್ಯಪ್ರೇರಕರಾದ ಕಾರಣದಿಂದ ಧಾರವಾಡ ಪ್ರದೇಶದಲ್ಲಿ ದಾಸಸಾಹಿತ್ಯ ರಚನೆ ೧೮ನೆಯ ಶತಮಾನದ ಮಧ್ಯದಿಂದ ಆರಂಭವಾಯಿತೆಂದು ಇಟ್ಟುಕೊಳ್ಳಬಹುದು. ಹಾಗೆ ಆರಂಭಿಸಿದವರು ಕರ್ಜಗಿಯ ಶ್ರೀದವಿಠಲರು ಮತ್ತು ಕದರಮಂಡಲಗಿರಿಯ ಭೀಮಾಚಾರ್ಯರು. ಇವರ ಮನೆತನದ ಕೆಲವರು ಹಾಗೂ ಬೇರೆಡೆ ದಾಸದೀಕ್ಷೆಯನ್ನು ಪಡೆದು ಬಂದ ಸುಮಾರು ೨೫ ಜನ ಹರಿದಾಸರ ಹಾಡುಗಳು ಈ ಸಂಪುಟದಲ್ಲಿ ಅಡಕವಾಗಿವೆ.

ಹರಿದಾಸ ಪರಂಪರೆಯೆನ್ನುವುದು ಹರಿ ಕೀರ್ತನೆ, ಭಜನೆ, ಪ್ರವಚನೆಗಳ ಮೂಲಕ ಪ್ರತಿಯೊಂದು ಊರಿನಲ್ಲಿ ಸಾಗಿಬಂದಿತೆನ್ನುವುದು ಮಹತ್ವದ್ದು. ಜೊತೆಗೆ ಕರ್ನಾಟಕ ಮಟ್ಟದ ಹರಿದಾಸರ ಬಗ್ಗೆ ಮಾಹಿತಿ ಹಾಗೂ, ಹಾಡುಗಳ ಸಂಗ್ರಹ ಕಾರ್ಯ, ಪ್ರಕಟನೆ, ಹಾಗೂ ಪ್ರಸಾರ ಕಾರ್ಯ ಸದ್ದಿಲ್ಲದೆ ನಡೆದುಕೊಂಡು ಬಂದಿತು. ಹೇಳಬೇಕಾದ ಮೊದಲ ಹೆಸರು ಶ್ರೀ ಕಲಮದಾನಿ ನಾರಾಯಣರಾ-ಯರದು. ಅವರು ಸಂಗ್ರಹಿಸಿದ್ದ ಮಾಹಿತಿಯಿಂದಾಗಿ, 'ಹರಿದಾಸರ ಕಥೆಗಳು'

ಹಾಗೂ Mystic Teachings of Haridasas of Karnataka' ಗ್ರಂಥಗಳು ಬೆಳಕಿಗೆ ಬಂದುವು. ಇನ್ನೊಬ್ಬ ವ್ಯಕ್ತಿ ಕೌಜಲಗಿ ಬಂಡೆಪ್ಪ ಅವರು; ಪ್ರಸನ್ನ ವೆಂಕಟದಾಸರ ಹಾಡುಗಳನ್ನು,ಹಾಗೇನೆ ಹರಪನಹಳ್ಳಿ ಭೀಮವ್ವ ಅವರ ರಚನೆಗಳನ್ನು ಮೊದಲಿಗೆ ಎಂದರೆ ೧೯೨೦ರ ದಶಕದಲ್ಲಿ ಪ್ರಕಟಿಸಿದ ಹಿರಿಮೆ ಅವರದು. ಆ ಮುಂದೆ ದಾಸಸಾಹಿತ್ಯದ ಪ್ರಸರಣ, ಪ್ರಕಾಶನ ಮತ್ತು ವಿತರಣಕಾರರಾಗಿ ಸರ್ವಶ್ರೀ ಬೆಟಗೇರಿ ಕೃಷ್ಣಶರ್ಮ, ಹುಚ್ಚರಾವ್ ಬೆಂಗೇರಿ, ಕಾಂತರಾವ ಕಮಲಾಪೂರ, ನಾಮಸೇವಿ (ಶ್ರೀಕೃಷ್ಣ ಪುಸ್ತಕಾಲಯದವರು), ಫಾಣೇಕರ (ಸಮಾಜ ಪುಸ್ತಕಾಲಯ) ಮುಂತಾದ ಈ ಭಾಗದವರನ್ನು ವಿಶೇಷವಾಗಿ ನೆನೆಯತಕ್ಕದ್ದು.

ಇನ್ನೀಗ ಒಬ್ಬೊಬ್ಬ ಹರಿದಾಸರ ಜೀವನ ಮತ್ತು ಕಾರ್ಯವನ್ನು ಪರಿಶೀಲಿಸೋಣ.

## ಶ್ರೀದವಿಠಲರು

ಈಗಿನ ಹಾವೇರಿ ಜಿಲ್ಲೆಯ ಕರ್ಜಗಿ ಗ್ರಾಮವು ಇವರು ಹುಟ್ಟಿ ಬೆಳೆದ ಸ್ಥಳ. ಊರಲ್ಲಿ ವಿಠ್ಠಲದೇವರ ಗುಡಿ ಇದೆ. ವರದಾನದಿಯು ಬದಿಯಲ್ಲಿಯೇ ಹರಿಯುತ್ತಿದೆ. ೧೮ನೆಯ ಶತಮಾನದಲ್ಲಿ ಈ ಗ್ರಾಮವು ಪಂಡಿತ ಮನೆತನಗಳಿಂದ, ಶಾಸ್ತ್ರವೇತ್ತರಿಂದ ಕೂಡಿದ್ದಿತು.

ಈ ದಾಸರ ಮನೆತನ ಕರಣಿಕ ವೃತ್ತಿಯದು. ಇವರು ಹುಟ್ಟಿದ ವರ್ಷ ತಿಳಿಯದು. ಕ್ರಿ.ಶ. ೧೭೪೦ರ ಒಳಗೆ ಜನಿಸಿದರೆಂದು ಸ್ಥೂಲವಾಗಿ ಹೇಳಬಹುದು. ಮಗುವಿಗೆ 'ದಾಸಪ್ಪ' ಎಂದು ಹೆಸರಿಟ್ಟರು. ಮನೆಯಲ್ಲಿ ಧಾರ್ಮಿಕ ವಾತಾವರಣವಿದ್ದು ಸ್ವಂತಕ್ಕೆ ಸಂಸ್ಕೃತಮೂಲಕವಾದ ಶಾಸ್ತ್ರಾಭ್ಯಾಸ ತುಸುಮಟ್ಟಿಗೆ. ತರುಣ ದಾಸಪ್ಪನ ಒಲವೆಲ್ಲ ಲೌಕಿಕ ಸುಖದ ಕಡೆಗೇ ಇದ್ದಿತು. ನೆರೆಯಲ್ಲಿಯ ವಿಠ್ಠಲ ಮಂದಿರಕ್ಕೆ ಹೋಗುವ ಒಲವನ್ನೂ ತೋರಿದವನಲ್ಲ. 'ಗುಂಡಮ್ಮ' ಎಂಬವಳೊಡನೆ ಮದುವೆಯೂ ಆಯಿತು ; ಆದಾಗ್ಯೂ ವೇಶ್ಯಾಗಮನದತ್ತ ವಾಲಿದ್ದ. ಹಳೆಯ ಕಾಲದ ಗೃಹಿಣಿಯಾದ ಗುಂಡಮ್ಮ ತಾಳ್ಮೆಯಿಂದ ಸಹಿಸಿಕೊಂಡಿದ್ದಳು.

ಇಂಥದೊಂದು ದಿನ ಶ್ರೀ ಜಗನ್ನಾಥದಾಸರು ಕರ್ಜಗಿಗೆ ಆಗಮಿಸಿದರು. ಜೊತೆಯಲ್ಲಿ ಅವರ ಹೆಸರಾಂತ ಶಿಷ್ಯ ಪ್ರಾಣೇಶದಾಸರಿದ್ದರು. ದಾಸಪ್ಪನ ಮನೆಯಲ್ಲೇ ಅವರಿಗೆ ಬಿಡಾರ. ಔಪಚಾರಿಕವಾಗಿ ಎಷ್ಟೋ ಅಷ್ಟು ಆತಿಥ್ಯ ಸಂದಮೇಲೆ ಸಂಜೆ ಎನ್ನುವಾಗ ವೇಶ್ಯೆಯ ಮನೆಗೆ ಹೋದ. ಇತ್ತ ಊರವರು ದಾಸದ್ವಯದ ಪ್ರವಚನದ ವ್ಯವಸ್ಥೆ ಮಾಡಿದರು. ಅಲ್ಲಿಗೆ ಹೊರಟಿದ್ದಾಗ ಜಗನ್ನಾಥದಾಸರು ಗುಂಡಮ್ಮನಿಗೆ "ನಿನ್ನ ಪತಿಯನ್ನು ಕರೆದುಕೊಂಡು ಬಾ"ಎಂದು ಹೇಳಿದರು.

ಇದರಿಂದ ಅಧೀರಳಾದ ಗುಂಡಮ್ಮ ಆ ವೇಶ್ಯೆಯ ಮನೆ ಬಾಗಿಲಿಗೆ ಹೋಗಲೇಬೇಕಾಯಿತು. ಹೋದಳು. ದಾಸರ ಅಪೇಕ್ಷೆಯನ್ನು ಅಳುಕುತ್ತ ತಿಳಿಸಿದಳು. ಆ ದಿನ ಪ್ರವಚನ-ಕೀರ್ತನೆಗಳನ್ನು ಕೇಳಿಸಿಕೊಂಡ ದಾಸಪ್ಪನಲ್ಲಿ ಪರಿವರ್ತನೆಯಾಯಿತು. ಜಗನ್ನಾಥದಾಸರೇ ಅವರಿಗೆ 'ಶ್ರೀದವಿಠಲ' ಎಂಬ ಅಂಕಿತವಿತ್ತು ಅನುಗ್ರಹಿಸಿದರು. ಆ ಮುಂದೆ ವ್ಯಾಸಂಗದತ್ತ ಮನಗೊಟ್ಟರು. ಭಗವದ್ಭಕ್ತಿಯನ್ನು ಬೆಳೆಸಿಕೊಂಡರು. ಅದೇ ವಿಠ್ಠಲನ ಗುಡಿಯಲ್ಲಿಯ ಒಂದು ಕಂಬಕ್ಕೊರಗಿ ಕೀರ್ತನೆಗಳನ್ನು ರಚಿಸಿ ಹಾಡುತ್ತ ಇದ್ದರು.

ಇತ್ತ ಶ್ರೀದವಿಠಲರಿಗೆ ಶ್ರೀ ಸತ್ಯಬೋಧರ ಹಾಗೂ ಶ್ರೀ ಜಗನ್ನಾಥದಾಸ-ರೊಡನೆಯ ಸಂಪರ್ಕವೂ ಬೆಳೆಯಿತು. ಸಾಧನೆಯ ಮಾರ್ಗದಲ್ಲಿ ಬಹು ದೂರ ಸಾಗಿದರು. ಜಗನ್ನಾಥದಾಸರ ಮೇರು ಕಾವ್ಯ "ಹರಿಕಥಾಮೃತಸಾರ"ವನ್ನು ಮನನಮಾಡಿದರು. ಅದರ ವಿಚಾರಗಳನ್ನು ಅರಗಿಸಿಕೊಂಡವರಲ್ಲಿ ಶ್ರೀದವಿಠಲರು ಆದ್ಯರೆನ್ನಬಹುದು. ಪರಿಣಾಮವಾಗಿ ಆ ಮಹಾ ಕಾವ್ಯದ ಫಲಶ್ರುತಿ ಬರೆಯುವ ಕೆಲಸವನ್ನು ಕರ್ತೃ ಜಗನ್ನಾಥದಾಸರು ಶ್ರೀದವಿಠಲರಿಗೆ ಒಪ್ಪಿಸಿದರು. ಆಗ ಅವರು ರಚಿಸಿದ ನುಡಿಗಳ ಫಲಶ್ರುತಿ ಸಂಧಿ, ಈ ಕರ್ಜಗಿ ದಾಸರ ದೊಡ್ಡ ಸಾಧನೆಯೆಂದು ತಿಳಿಯಲಾಗುತ್ತದೆ.

ಶ್ರೀದವಿಠಲರು ತಮ್ಮ ಉತ್ತರಾರ್ಧದ ಬದುಕನ್ನು ಭಗವಚ್ಚಿಂತನೆಯಲ್ಲಿ, ದಾಸ ಪರಿಚರ್ಯೆಯಲ್ಲಿ ಕಳೆದರು. ಮಂತ್ರಾಲಯದ ಶ್ರೀರಾಯರನ್ನು ಬಹುವಾಗಿ ನಂಬಿದ್ದರು. ಕ್ರಿ.ಶ. ೧೮೨೦ರಲ್ಲಿ ಗತಿಸಿದರು. ಅವರು ನೂರಾರು ಹಾಡುಗಳನ್ನು ರಚಿಸಿರಬಹುದಾಗಿದೆ. ದೊರೆತದ್ದು ೬೪ ಮಾತ್ರ.

## ಸುಖನಿಧಿವಿಠಲರು

ಶ್ರೀದವಿಠಲರಿಗೆ ಓರ್ವ ಸೋದರಿ ಇದ್ದರು. ಮದುವೆಯಾಗಿ ಹೋದ ಮೇಲೆ ಅವರಿಗೆ ಜನಸಿದ್ದ ಮಕ್ಕಳಲ್ಲಿ ಇಬ್ಬರು ಹರಿದಾಸವೃತ್ತಿಯನ್ನು ಕೈಕೊಂಡರು. ಒಬ್ಬರ ಹೆಸರು ಏರಿ ನಾರಾಯಣಾಚಾರ್ಯ. ತಾರುಣ್ಯದಲ್ಲಿ ಅಂಗಸಾಧನೆ, ಕುಸ್ತಿಗಳಲ್ಲಿ ಒಲವು ಜಾಸ್ತಿ. ಒಮ್ಮೆ ತಿರುಪತಿಗೆ ಹೋದಾಗ ಪ್ರಾಣೇಶದಾಸರ ಭೆಟ್ಟಿಯಾಯಿತು. ಅವರಿಂದ ಸುಖನಿಧಿವಿಠ್ಠಲ–ಎಂಬ ಅಂಕಿತವನ್ನು ಪಡೆದು, ಕರ್ಜಗಿಯಲ್ಲಿಯೆ ನೆಲೆನಿಂತರು. ಶ್ರೀದವಿಠಲರಿಗೆ ಈ ಸೋದರಳಿಯನ ಮೇಲೆಯೇ ವಿಶೇಷ ವಾತ್ಸಲ್ಯವೆಂದು ಕಾಣುತ್ತದೆ. ಮರಣಾನಂತರ ತಮ್ಮ ತಾಳ ತಂಬೂರಿಗಳು ಇವರಿಗೇ ಸಲ್ಲಬೇಕೆಂದು ಅಪೇಕ್ಷಿಸಿದ್ದರಂತೆ.

ಸುಖನಿಧಿವಿಠಲರು ವೈರಾಗ್ಯಪರರಾಗಿ ಬಾಳಿದರು. ಪ್ರತಿವರ್ಷ ಪುರಂದರದಾಸರ ಪುಣ್ಯತಿಥಿಯನ್ನು ವೈಭವದಿಂದ ಆಚರಿಸುತ್ತಿದ್ದರು. 'ಹರಿಕಥಾಮೃತಸಾರ'ವನ್ನು ಚೆನ್ನಾಗಿ ಅಭ್ಯಾಸಮಾಡಿ, ಅದರ ಬಗ್ಗೆ ಪ್ರವಚನ ನೀಡುತ್ತಿದ್ದರು. ಇವರಿಗೆ ಹಲವಾರು ಜನ ದಾಸ ಶಿಷ್ಯರಿದ್ದರು.

ಸ್ವಯಂ ಕೀರ್ತನೆಗಳನ್ನು ರಚಿಸಿದ್ದರೇನೊ ನಿಜ. ಸದ್ಯ ನಮಗೆ ದೊರೆತದ್ದು ಇದೊಂದೇ :

ಒಂದೇ ಬೇಡುವೆ ನಿನ್ನ
ಇಂದಿರಾಪತಿ ಕೃಷ್ಣಾ
ನಂದತೀರ್ಥ ದ್ವಾರ
ಸಂದರುಶನ ಸುಖ ॥ ಪ

ತಾಯಿತಂದೆಗಳೊಲ್ಲೆ ಮಾಯದ ಸತಿಸುತ
ನೋಯಿಸ ಭವಬಂಧ ಮೊದಲೊಲ್ಲೆನು
ಸಾವು ಹುಟ್ಟುಗಳನು ಎಷ್ಟೂ ಬಲ್ಲೆನು ಮಹಾ
ವಾಯುಮತದ ದಿವ್ಯಜ್ಞಾನ ಭಕ್ತಿಭಾಗ್ಯ ॥ ೧

ತಿರುತಿರುಗಿ ಉದರಭರಣ ವೃತ್ತಿಯನೊಲ್ಲೆ
ಧರೆ ಧನ ಗೃಹಾದ್ಯಷ್ಟಭೋಗ ವೊಲ್ಲೆ
ಶರೀರ ಚಲ್ವಿಕೆಯೊಲ್ಲೆ ಮರವು ನಿನ್ನದು ವೊಲ್ಲೆ
ತರತಮಭೇದ ಸರ್ವೋತ್ತಮ ತವಧ್ಯಾನ ೨

ದುರುಳ ವಿಷಯಾಸಕ್ತಿ ಕರಣಮನಗಳನೊಲ್ಲೆ
ಹರಿದಾಸ್ಯ ರಹಿತ ನರಸಂಗ ಒಲ್ಲೆ
ಸ್ಮರಣೆ ಸರ್ವದಾ ಕಲಿಸಿ ಕಲಿಸಿ ನಿನ್ನಪರೋಕ್ಷ
ಕರೆಸು ವೈಕುಂಠಕ್ಕೆ ಸುಖನಿಧಿವಿಠ್ಠಲಾ ೩

## ಶ್ರೀನಿಧಿವಿಠಲರು

ಧಾರವಾಡ ಊರಿನವರೇ ಆದ ಇವರ ನಿಜ ಹೆಸರು ದೀಪದ ಅಣ್ಣಯ್ಯಾಚಾರ್ಯ ಎಂಬುದು. ಮನೆತನದಲ್ಲಿ ಮೊದಲಿನಿಂದಲೂ ಆಸ್ತಿಕ ವಾತಾವರಣ ಇದ್ದಿತು. ಅಣ್ಣಯ್ಯ ದೊಡ್ಡವರಾದಾಗ ತಿರುಪತಿಯ ತಿಮ್ಮಪ್ಪನ ಮೇಲಿನ ಭಕ್ತಿ ಇಮ್ಮಡಿಸಿತು. ತಿರುಪತಿಯಲ್ಲಿ ದೀಪಾರಾಧನ ಕಾರ್ಯವನ್ನು ವಿಶೇಷವಾಗಿ ನಡೆಸುತ್ತಿದ್ದರೆಂಬ ಕಾರಣದಿಂದ 'ದೀಪದ' ಎಂಬ ಉಪಾಧಿ ಅವರ ಹೆಸರಿಗೆ ಸೇರಿತು. ಅವರು ತಿರುಪತಿಯಲ್ಲಿ ದೀಪ ಹೊತ್ತಿಸಿಕೊಂಡು ಕಾಲ್ನಡಿಗೆಯಲ್ಲಿ ಧಾರವಾಡದ ತನಕ ಅದನ್ನು ನಂದಾದೀಪವಾಗಿಸಿ ತಂದರೆಂಬ ಪ್ರತೀತಿ ಇದೆ.

ಅವರಿಗೆ ದಾಸದೀಕ್ಷೆಯನ್ನು ಕೊಟ್ಟವರು ಹರಪನಹಳ್ಳಿಯ ವೆಂಕಟದಾಸರು. ದೊರೆತ ಅಂಕಿತ 'ಶ್ರೀನಿಧಿವಿಠಲ' ಎಂಬುದು. ಆ ಮುಂದೆ ಅಣ್ಣಯ್ಯ ಅವರು ಜಿಲ್ಲೆಯ ಇತರ ಊರುಗಳಿಗೆ ಶಿಷ್ಯಸಮೇತ ಹೋಗುತ್ತಿದ್ದರು. ಕೀರ್ತನ ಪ್ರವಚನಗಳನ್ನು ಪರಿಣಾಮಕಾರಿಯಾಗಿ ಕೈಗೊಳ್ಳುತ್ತಿದ್ದುದರಿಂದ ಅವರ ಹೆಸರು ಮತ್ತು ಹಾಡುಗಳು ಸಾಕಷ್ಟು ಜನಜನಿತವಾದವು.

ಇವರ ಇಬ್ಬರು ಮಕ್ಕಳಲ್ಲಿ ಗೋವಿಂದಾಚಾರ್ಯರು ತಂದೆಯ ಪರಂಪರೆಯನ್ನು ಮುಂದುವರಿಸಿದರು. ಬ್ರಹ್ಮಚಾರಿ ಇದ್ದುಕೊಂಡೇ, 'ತಂದೆ

ಹನುಮೇಶನಲ್ಲಿ ಅವರ ಭಕ್ತಿ ಶುದ್ಧಾಂಗವಾದದ್ದು. ೧೭೭೫ರ ಸುಮಾರಿಗೆ ಅವನ ಪೂರ್ವಾರ್ಧದ ಪೂಜೆಯ ಜವಾಬ್ದಾರಿ ಬಿದ್ದ ಮೇಲಂತೂ ಅನ್ಯ ಯೋಚನೆಯೇ ಇಲ್ಲದಂತಾಯಿತು. ಭೀಮಾಚಾರ್ಯರ ಪ್ರಸಿದ್ಧಿ ಎಷ್ಟರ ಮಟ್ಟಿಗೆ ಹರಡಿತ್ತೆಂದರೆ, ಹೊರ ಊರಿನ ಕೆಲವರು ಜಮೀನುಗಳನ್ನು ದತ್ತಿ ಬಿಟ್ಟರು. ಎತ್ತಿನಹಳ್ಳಿಯ ರಾಮಪ್ಪ (೧೭೭೮) ಮೋಟೆಬೆನ್ನೂರಿನ ರಾಮಚಂದ್ರ ಪಂತ, ಕೊಪ್ಪಳದ ಸರ್ ಸುಭೇದಾರನಾದ ಕೃಷ್ಣರಾವ ಇವರ ದತ್ತಿಗಳಿಗೆ ದಾಖಲೆ ಇದೆ. ವಿಶೇಷವಾಗಿ ಹೆಸರಿಸಬೇಕಾದದ್ದು ಹಾವನೂರ ಸಂಸ್ಥಾನದ ಹನಮಂತಗೌಡನದು. ತನ್ನ ಕ್ಷೇತ್ರದ ಹಳ್ಳಿಗಳಿಂದ ೧೩ ಜಮೀನುಗಳನ್ನು ಆತ ಭೀಮಾಚಾರ್ಯರ ಪ್ರಭಾವಕ್ಕೆ ಒಳಗಾಗಿ ಹನುಮೇಶನಿಗೆ ದತ್ತಿಯಾಗಿ ಕೊಟ್ಟಿದ್ದಾನೆ.

ಸಮೀಪದಲ್ಲಿಯ ಸವಣೂರಲ್ಲಿ ಶ್ರೀಸತ್ಯಬೋಧರು ನೆಲಸಿದ್ದರಷ್ಟೆ. ಭೀಮಾಚಾರ್ಯರ ಮೇಲೆ ಅವರಿಗೆ ಅನನ್ವಿತ ಪ್ರೇಮಾದರ ಇದ್ದಿತು. ಮಠಕ್ಕೆ ಹೋದರೆಂದರೆ ಅವರಿಗೇನೆ ಶ್ರೀಗಳು ತೀರ್ಥಪ್ರಸಾದ ಸಲ್ಲಿಸುತ್ತಿದ್ದುದು. ಒಂದು ಸಂಜೆ ಶ್ರೀಮಠದಲ್ಲಿ ಉತ್ಸವ ಮೂರ್ತಿಯ ತೊಟ್ಟಿಲ ಸೇವೆ ನಡೆದಾಗ, ಸ್ವಾಮಿಗಳ ಆಜ್ಞಾನುಸಾರ ಭೀಮಾಚಾರ್ಯರು ಆಶುಗೀತವೊಂದನ್ನು ರಚಿಸಿ ನರ್ತನ ಮಾಡುತ್ತ ಹಾಡಿದರಂತೆ.

ಒಮ್ಮೆ ಶ್ರೀಗಳು ಪೂಜೆ ಮುಗಿದ ಮೇಲೆ ಒಂದು ವಸ್ತುವನ್ನು ಮುಷ್ಟಿಯಲ್ಲಿ ಹಿಡಿದುಕೊಂಡು ವಿನೋದಾರ್ಥವಾಗಿ "ನನ್ನ ಮುಷ್ಟಿಯಲ್ಲಿ ಏನಿದೆ ಹೇಳಿರಿ, ನೋಡುವಾ" ಎಂದರಂತೆ. ಯಾರಿಗೂ ಹೊಳೆಯದೆ ಹೋದಾಗ ಭೀಮಾಚಾರ್ಯರು "ನರಸಿಂಹ ಚಿಹ್ನೆ ಇರುವ ಸಾಲಿಗ್ರಾಮ" ಎಂದು ಹೇಳಿದರಂತೆ. ಹೌದು. ಮುಷ್ಟಿಯಲ್ಲಿ ಅದೇ ಇದ್ದಿತು. ಆಗ ಸಹಜಸ್ಫೂರ್ತಿಯಿಂದ ಆಚಾರ್ಯರು "ಬಾಯಿ ತೆರೆದ ಬಗೆಯೇನೊ ದೇವರ ದೇವ ತೋಯಜದಳ ನೇತ್ರ.....ನರಸಿಂಹನೇ" ಎಂಬ ಹಾಡನ್ನು ರಚಿಸಿ ಹೇಳಿದರಂತೆ. ಭೀಮಾಚಾರ್ಯರ ಈ ಬಗೆಯ ಅಲೌಕಿಕ ಘಟನೆಗಳನ್ನು ಅಲ್ಲಿಯ ಜನತೆ ಆಗೀಗ ನೆನಪಿಸಿಕೊಳ್ಳುತ್ತಿದ್ದಾರೆ.

ಭೀಮಾಚಾರ್ಯರು ಅನೇಕಾನೇಕ ಕೀರ್ತನೆಗಳನ್ನು ರಚಿಸಿರಲಿಕ್ಕೆ ಸಾಕು. ಅವನ್ನು ಬರೆದಿಡುವ ಕೆಲಸ ಅವರಿಂದಂತೂ ಆಗಿರಲಿಲ್ಲ. ಬೇರೆ ಅನುವರ್ತಿಗಳಾರೂ ಮಾಡಿದಂತಿಲ್ಲ. ಹೀಗಾಗಿ ನಮಗೆ ದೊರೆತ ಹಾಡುಗಳು ಕೇವಲ ೧೪ ಮಾತ್ರ. ಹೀಗೆ ತುಂಬು ಜೀವನ ನಡೆಸಿದ ಅವರು ೧೮೪೫ರಲ್ಲಿ ಅಸುನೀಗಿದರೆಂದು ತಿಳಿಯಬರುತ್ತದೆ.

## ಮೈಸೂರು ವೆಂಕಟರಮಣದಾಸರು

ಮುಮ್ಮಡಿ ಕೃಷ್ಣರಾಜರ ಪ್ರೋತ್ಸಾಹದ ಕಾರಣದಿಂದ ಇರಬೇಕು ಭೀಮಾಚಾರ್ಯರ ಮಕ್ಕಳು ಮೈಸೂರಿಗೆ ಸ್ಥಳಾಂತರಗೊಂಡರು. ಹಾಗೆ ಅಲ್ಲಿಗೆ ಹೋದ ವೆಂಕಟರಮಣಾಚಾರ್ಯರು (೧೮೦೯–೧೮೮೪) ಹರಿದಾಸ ಕೈಂಕರ್ಯದಲ್ಲಿಯೆ ಚರಿತಾರ್ಥ ಸಾಗಿಸಿದರು. 'ಮಾನನಿಧಿವಿಠಲ' ಎಂಬ ಅಂಕಿತದಿಂದ ಹಲವಾರು ಹಾಡುಗಳನ್ನು ರಚಿಸಿದ್ದಾರೆ. ಲಭ್ಯವಾಗಿರುವವು ಕೆಲವೇ ಮಾತ್ರ.

ಇವರ ಮೊಮ್ಮಗ ದೀರೇಂದ್ರದಾಸ ಎನ್ನುವವರು. (ಜನನ ೧೮೯೨). ಇವರನ್ನು ವಿಶೇಷವಾಗಿ ಹೆಸರಿಸುವುದಕ್ಕೆ ಕಾರಣವಿದೆ. ಮಾಸ್ತಿಯವರು–೧೯೨೦ನೆಯ ದಶಕವಿರಬೇಕು–ಮೈಸೂರಲ್ಲಿ ಅಧಿಕಾರಿಗಳಿದ್ದಾಗ ತಾವು ಕಂಡ ಓರ್ವ ದಾಸರ ಚರ್ಯೆಯನ್ನು ವರ್ಣಿಸಿದ್ದಾರೆ. ಅವರು ಹರಿದಾಸರ ಉಪಕರಣಗಳೊಂದಿಗೆ ಮಕ್ಕಳು ಮಡದಿಯೊಡನೆ, ಬೀದಿಯಲ್ಲಿ ಕುಣಿಯುತ್ತ ಕೀರ್ತನೆಗಳನ್ನು ಹಾಡುತ್ತ ಬೆಳಿಗ್ಗೆ ಹೊರಟವರು ಅಖಂಡವಾಗಿ ಸುಮಾರು ಏಳು ತಾಸುಗಳವರೆಗೆ ತಿರುಗಾಡುತ್ತಿದ್ದರಂತೆ. (ಮಾಸ್ತಿಯವರಿಗೆ ಆ ದಾಸರ ಹೆಸರು ಗೊತ್ತಿರಲಿಲ್ಲವಂತೆ. ಈ ಧೀರೇಂದ್ರದಾಸರೇ ಇರಬೇಕೆಂದು ಊಹಿಸಬಹುದಾಗಿದೆ.)

ಹಿರೇ ಆಚಾರ್ಯರ ಮನೆತನದವರು ಈಗಿನ ದಿನಗಳಲ್ಲಿ ಒಳ್ಳೇ ಹೆಸರು ಮಾಡಿದ್ದಾರೆ. ಲೌಕಿಕ ಜೀವನದಲ್ಲಿ ಪ್ರಗತಿ ಹೊಂದಿದ್ದಾರೆ. ಆದರೆ ಅವರು 'ದಾಸ' ಎಂಬುದನ್ನೂ ಕೆ.(ಕದರಮಂಡಲಗಿ) ಎಂಬ initial ನ್ನೂ ಉಳಿಸಿಕೊಂಡಿದ್ದಾರೆ.

## ಹಸನ್ಮುಖವಿಠಲರು

ಇವರ ಪೂರ್ಣ ಹೆಸರು ಮುಂತಾದ ಯಾವೊಂದು ಅಂಶವೂ ತಿಳಿಯದು. ಆದರೆ ಕದರಮಂಡಲಗಿ ದಾಸ ಮನೆತನಕ್ಕೆ ಸೇರಿದವರು. ಆ ಮನೆತನಕ್ಕೆ ಸಂಬಂಧಿಸಿದ ಪರಿಚಯ ಪುಸ್ತಕದಲ್ಲಿ ಈ ಮುದ್ರಿಕೆಯ ಎರಡು ಹಾಡುಗಳು ಸೇರಿವೆ. ಇತರರ ಜೀವನ ಚರಿತ್ರೆಯ ಕೆಲವಾದರೂ ಅಂಶಗಳಿವೆ; ಈ ಹೆಸರಿನದು ಇಲ್ಲ. ಆದ್ದರಿಂದ ಮಾನನಿಧಿವಿಠಲಾಂಕಿತ ಹಾಡುಗಳ ಜೊತೆಗೇ ಅವೆರಡು ಹಾಡುಗಳನ್ನು ಸೇರಿಸಲಾಗಿದೆ.

## ಕದರುಂಡಲಗೀಶರು

ಇವರು ಭೀಮಾಚಾರ್ಯರ ವಂಶಜರೇನೂ ಅಲ್ಲ. ಹೆಸರು ಶ್ರೀನಿವಾಸದಾಸ ಎಂಬುದು. ಮೂಲತಃ ಕಿನ್ನಾಳದವರು. ಅಲ್ಲಿ ಗೊಂಬೆಯಾಟ ಮಾಡಿಸುತ್ತಿದ್ದರು. ಒಮ್ಮೆ ಕದರಮಂಡಲಗಿಗೆ ಬಂದವರು ಸ್ಥಳ ಮಹಾತ್ಮೆಯಿಂದ ಅಲ್ಲಿಯೇ ಉಳಿದರು. ಕಾಲಮಾನದಿಂದ ಭೀಮಾಚಾರ್ಯರಿಗಿಂತ ೪೦–೫೦ ವರ್ಷದಷ್ಟು ಈಚಿನವರು. ಉತ್ತರಾದಿಮಠದ ಶ್ರೀ ಸತ್ಯಪರಾಯಣರ ಕಾಲದಲ್ಲಿ (೧೮೪೨–೧೮೬೩) ಇದ್ದರು.

ಹನುಮೇಶನ ಮುದ್ರಿಕೆಯನ್ನೇ ಇಟ್ಟುಕೊಂಡು ಹಾಡುಗಳನ್ನು ರಚಿಸಿದ್ದಾರೆ. ನಮಗೆ ದೊರೆತದ್ದು ಕಡಿಮೆಯೇ.

## ನರಸಿಂಹವಿಠಲರು

ಇವರ ಹಾಡುಗಳ ಪ್ರತಿಯನ್ನು ಅವರ ಮಗಳ ಮಗ ರಾಮರಾವ ಕುಲಕರ್ಣಿಯವರಿಂದ ಪಡೆಯಲಾಯಿತು. ಈ ಸಂಪುಟದ ಅತಿ ದೊಡ್ಡ ಸಂಖ್ಯೆಯ ಹಾಡುಗಳು ಅವರಿಂದಲೇ ರಚಿತವಾದವುಗಳು. ಪೂರ್ಣ ಹೆಸರು ಕುಂಚೂರ ಹನುಮಂತಾಚಾರ್ಯ ಎಂಬುದು. ಅವರ ಮೊಮ್ಮಗನಿಗೆ ತಮ್ಮ ಅಜ್ಜನ ವಿಷಯ ಹೆಚ್ಚೇನೂ ತಿಳಿಯದು. ಹಾವೇರಿಯಲ್ಲಿಯೊ ಮತ್ತೆಲ್ಲಿಯೊ ಶಿಕ್ಷಣ ಖಾತೆಯಲ್ಲಿದ್ದರೆಂಬುದು ಮಾತ್ರ ಗೊತ್ತು. ಅವರ ಬಗ್ಗೆ ಮಾಹಿತಿ ಗೊತ್ತಿರುವವರು ತಿಳಿಸಬೇಕೆಂದು ಪತ್ರಿಕಾ ಪ್ರಕಟನೆಯನ್ನು ಕೊಡಲಾಯಿತು. ಪ್ರಯೋಜನವಾಗಲಿಲ್ಲ.

ಅವರ ಹಾಡುಗಳಲ್ಲಿಯೇ ಅಷ್ಟಿಷ್ಟು ವಿವರಗಳು ದೊರೆಯುತ್ತವೆ. ಹಿರೇಕೇರೂರ ತಾಲೂಕಿನ ಕುಂಚೂರು ಅವರ ಮೂಲಸ್ಥಳವೆಂಬುದರ ಪ್ರಸ್ತಾಪವಿದೆ. 'ಶಿಷ್ಟ ಹೆಂಡತಿಯ ನೀಗಿ...ಇಷ್ಟ ಪುತ್ರರ ಕೂಡಿ ಬಂದು' ಎಂಬ ಮಾತಿರುವುದರಿಂದ ಮಧ್ಯವಯಸ್ಸಿನಲ್ಲಿ ಅವರ ಪತ್ನಿ ತೀರಿರಬೇಕು.

## ಹನುಮೇಶವಿಠಲರು

ಹಾವನೂರ ಗ್ರಾಮದಲ್ಲಿ ಚಿನಿವಾಲಿಕೆ ಮುಖ್ಯ ವೃತ್ತಿಯಾಗಿದ್ದ 'ಬುರ್ಲಿ ನಾಯಕರು' ಎಂಬ ಹೆಸರಿನ ಮನೆತನ ಇತ್ತು. ಈ ಹರಿದಾಸರು ಆ ಮನೆತನಕ್ಕೆ ಸೇರಿದವರು. ಪೂರ್ಣ ಹೆಸರು ಹನುಮಂತ ರಂಗರಾವ ಬುರ್ಲಿ. ಜನನ ೧೮೫೪. ಹಾವೇರಿಯ ಕೋರ್ಟಿನಲ್ಲಿ ನಾಝರ ಎಂಬ ಅಧಿಕಾರದಲ್ಲಿದ್ದು ನಿವೃತ್ತರಾದರು. ಭಕ್ತಿಭಾವದ ಹಾಡುಗಾರಿಕೆ ಈ ಮನೆತನದ ಪರಂಪರೆಯೇ ಆಗಿದ್ದಿತು. ಹನುಮಂತನಾಯಕರು ಸಂಸಾರ–ಸರಕಾರೀ ನೌಕರಿಗಳಲ್ಲಿದ್ದುಕೊಂಡೇ ಹರಿದಾಸ ಪಂಥಕ್ಕೆ ಮನಸೋತರು. ಮಂತ್ರಾಲಯದ ರಾಯರ ಭಕ್ತರಂತೂ ಸರಿಯೇ.

ಹಾವನೂರಿನ ಹತ್ತಿರ ಹಳ್ಳಳ್ಳಿ ಎಂಬ ಗ್ರಾಮವಿದ್ದು ಅದೂ ಕೂಡ ತುಂಗಭದ್ರಾ ನದಿಯ ತೀರದಲ್ಲಿದೆ. ಆ ನದಿಯಲ್ಲಿ ರಾಘವೇಂದ್ರರ ಮೃತ್ತಿಕ ವೃಂದಾವನವಿದೆ–ಯೆಂದು ದೃಷ್ಟಾಂತವಾದ ಪ್ರಕಾರ ಆ ವೃಂದಾವನವನ್ನು ಹುಡುಕಿ ಗುತ್ತಲದಲ್ಲಿ ಪ್ರತಿಷ್ಠಾಪಿಸಿದ ಶ್ರೇಯಸ್ಸು ಹನುಮೇಶವಿಠಲರಿಗೆ ಸಲ್ಲಬೇಕು. ಕೀರ್ತನೆ, ಪ್ರವಚನಗಳಿಂದ ತಮಗೆ ಬಂದ 'ದಕ್ಷಿಣೆ'ಯನ್ನು ಮಠದ ಪೂಜೆ, ಆರಾಧನೆಗಳಿಗೆ ವೆಚ್ಚಮಾಡುತ್ತಿದ್ದರು. ಸಾತೇನಹಳ್ಳಿ 'ಹನುಮೇಶ ವಿಠಲ' ಎಂಬ ಮುದ್ರಿಕೆಯು ಉತ್ತರಾದಿಮಠದ ಶ್ರೀ ಸತ್ಯಜ್ಞಾನರಿಂದ ಲಭಿಸಿತು. ಅದನ್ನು ಒಂದು ಕೀರ್ತನೆಯಲ್ಲಿ ಹನುಮೇಶವಿಠಲರೇ ಕಾಣಿಸಿದ್ದಾರೆ.

ಇನ್ನಿವರ ಕೃತಿರಚನೆ : ನಮ್ಮ ಸದ್ದೈವಕ್ಕೆ ಅವರು ಹಾಡುಗಳನ್ನು ಒಂದು ವಹಿಯಲ್ಲಿ ಬರೆದಿಟ್ಟಿದ್ದಾರೆ. ಕಾವ್ಯರಚನೆಯಲ್ಲಿಯೂ ಅವರಿಗೆ ವಿಶೇಷ ಒಲವು ಇದ್ದಿತು. ರಾಮಾಯಣದ ಸುಂದರಕಾಂಡವನ್ನು ಕನ್ನಡದಲ್ಲಿ ಪದ್ಯರೂಪಕ್ಕೆ ಇಳಿಸಿದ್ದಾರೆ. 'ಅನುಭವಾಮೃತ ಸಾರ' ಎಂಬ ಕಾವ್ಯವೂ ಇದೆ. (ಅದರ ವಸ್ತು

ಏನೆಂದು ಸ್ಪಷ್ಟವಾಗಿಲ್ಲ.) ಹರಿಕಥಾಮೃತಸಾರಕ್ಕೆ ವಿಸ್ತೃತ ಟೀಕೆಯನ್ನೂ ಬರೆದಿದ್ದಾರೆ. ಇವಾವವೂ ಪ್ರಕಟವಾಗಿಲ್ಲ.

ಹನುಮೇಶವಿಠಲರು ೧೯೪೧ರಲ್ಲಿ ತೀರಿಕೊಂಡರು. ಅವರ ಮಗ ಗುರುರಾಯರು ಧಾರ್ಮಿಕ ಸಂಗೀತದ ಪರಂಪರೆಯನ್ನು ಮುಂದವರಿಸಿದರಾದರೆ ಅವರ ಮಗ ವೆಂಕಟೇಶ ಬುರ್ಲಿಯವರು ಶಾಸ್ತ್ರೀಯ ಸಂಗೀತದಲ್ಲಿ ಪಳಗಿದ್ದರು. ಮಹಾರಾಷ್ಟ್ರದಲ್ಲಿಯ ತಮ್ಮ ನೌಕರಿಯಿಂದ ನಿವೃತ್ತರಾಗಿ ಧಾರವಾಡದಲ್ಲಿ ನೆಲಸಿದಾಗ ತಮ್ಮ ಅಜ್ಜನ ಆ ಹಸ್ತಪ್ರತಿಯನ್ನು ಪ್ರಕಟನೆಗೆ ಅಣಿಗೊಳಿಸಿ, ಶ್ರೀ. ಅ. ರಾ. ಪಂಚಮುಖಿಯವರ ನೆರವು ಪಡೆದು ಅವೆಲ್ಲ ಕೀರ್ತನೆಗಳನ್ನು ಪ್ರಕಟಿಸಿದ್ದಾರೆ.

ಮೇಲ್ಕಾಣಿಸಿದ ಹರಿದಾಸರ ಹಾಡುಗಳು ಈ ಸಂಪುಟದಲ್ಲಿ ಸೇರ್ಪಡೆ-ಯಾಗಿವೆಯಷ್ಟೆ. ಇನ್ನು ಕೆಲವು ಹರಿದಾಸರ ಹಾಡುಗಳು ದೊರೆತಿಲ್ಲ. ಒಂದಷ್ಟು ಜೀವನ ವಿವರಗಳು ಅಲ್ಲಿ ಇಲ್ಲಿ ಎಂಬಂತೆ ಲಭ್ಯವಾಗಿವೆ. ಅವನ್ನಿಲ್ಲಿ ದಾಖಲಿಸಬಯಸಿದೆ. ಇವರೆಲ್ಲ ೧೯ನೆಯ ಶತಮಾನದ ಉತ್ತರಾರ್ಧದವರು.

(೧) ಪ್ರಸನ್ನವಿಠಲರು: ಪೂರ್ಣಹೆಸರು-ನಾಡಿಗ ತಿಮ್ಮಪ್ಪ, ಧಾರವಾಡದವರು.

(೨) ಗೋಪತಿಕೃಷ್ಣವಿಠಲರು - ನಿಜನಾಮ ಸುಬ್ಬಣ್ಣಾಚಾರ್ಯ ಎಂಬುದು. ಮೂಲತಃ ಸುರಪುರದವರು. ಆದರೆ ಧಾರವಾಡ ಜಿಲ್ಲೆಯ ಹೊಳೆಆನವೇರಿ ಎಂಬಲ್ಲಿ ಇರುವ ಸಂಗಮೇಶ್ವರನ ಗುಡಿಯಲ್ಲಿ (ತುಂಗಭದ್ರಾ-ಕುಮದ್ವತಿ ಸಂಗಮಗಳ ಸ್ಥಳ) ತಪಸ್ಸಿಗೆ ನಿಂತರು. ಹತ್ತಿರದ ಮುದೇನೂರಿಗೆ ಬಂದು ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದರು. ಹೀಗಾಗಿ ಅವರಿಗೆ ಮುದೇನೂರ ಆಚಾರ್ಯರೆಂದೇ ಜನಜನಿತವಾಯಿತು. ಕೀರ್ತನೆಗಳನ್ನು ರಚಿಸಿದರೆಂಬ ವದಂತಿಯೂ ಇದೆ. ಆದರೆ ದೊರೆತದ್ದು ಇದೊಂದೇ. (ಹರಿದಾಸರ ಕಥೆಗಳು. ಪು.೨೪೩)

ಪಾಲಿಸೊ ಪಾರ್ವತಿರಮಣಾ । ನಿನ್ನ
ಪಾಲಿಗೆ ಬಂದೆನೊ ಪಾಲಿಸೆನ್ನುವೆ.
ವೇದ ವೇದಾಂತ ಪುರಾಣಗಳೆಲ್ಲ

ನೀ ದಯಾಳುವೆಂದು ಪೊಗಳು । ತಿರೆ
ಹಾದಿಬೀದಿ ದೇವತೆಗಳಿಗೆರಗಿ । ನಾ
ಖೇದಬಟ್ಟು ನಿನ್ನ ಮೊರೆ ಹೊಕ್ಕೆ ಮಹದೇವಾ ೧

ತುಂಗಾ ಕುಮದ್ವತಿ ಸಂಗಮೇಶ್ವರ ನಿನ್ನ
ಕಂಗಳಿಂದಲಿ ನೋಡೊ ಕರುಣದಿಂದ
ಕಂಗೆಟ್ಟು ಕಳವಳಿಸುತಿರೆ ನೀ ನೋಡಿ
ಭಂಗಪಡಿಸಿದರೇನು ಭಾಗ್ಯ ಬರುವೋದು ೨

ಆಪತ್ತು ಕಳೆದು ಸಂಪತ್ತು ನೀಡಿ ನಿನ್ನ
ರೂಪವ ತೋರಿಸೊ ತ್ವರಿತದಲಿ
ಗೋಪತಿಕೃಷ್ಣವಿಠಲನೆಲ್ಲ ಲೋಕವ
ವ್ಯಾಪಿಸಿರಲು ಸಂದೇಹವ್ಯಾತಕಯ್ಯಾ ೩

## ಶ್ರೀವರವಿಠಲರು

ಇವರ ನಿಜ ಹೆಸರು ಸವದಿ ರಾಮಚಂದ್ರಪ್ಪ ಎಂಬುದು. ಬೆಳಗಾಂವಿ ಜಿಲ್ಲೆಯ ಸವದಿ ಗ್ರಾಮದವರು. ಆದರೆ ಧಾರವಾಡದಲ್ಲಿ ನೆಲೆಸಿದರು. ಅಲ್ಲಿಯ ದೀಪದ ಅಣ್ಣಯ್ಯಾಚಾರ್ಯ-ಶ್ರೀನಿಧಿವಿಠಲರ ಪರಿಚಯವಾಯಿತು. ಅವರಿಂದ ದಾಸದೀಕ್ಷೆ ಪಡೆದರು. 'ಶಿಷಾದಿಚ್ಛೇತ್ ಪರಾಜಯಂ' ಎಂಬಂತೆ ಶ್ರೀವರವಿಠಲರ ಅಧ್ಯಾತ್ಮಪ್ರಗತಿ ಕೌತುಕಪ್ರದವಾಯಿತು.

ತಮ್ಮ ಹರಿದಾಸ ವೃತ್ತಿಯಿಂದಾಗಿ ಒಮ್ಮೆ ಶ್ರೀವರವಿಠಲರು ಚಿಪ್ಪಗಿರಿಗೆ ಹೋದರು. ಪರಿಣಾಮಕಾರಿಯೆನಿಸುವಂತೆ ಒಂದು ಕಥಾಕಾಲಕ್ಷೇಪ ನಡೆಸಿದರು. ಅಂದಿನ ಸಭಿಕರಲ್ಲಿ ದೊಡ್ಡಬಳ್ಳಾಪುರದಿಂದ ಬಂದ ರಾಘಣ್ಣ ಎನ್ನುವವರಿದ್ದರು. ಶ್ರೀವರರಿಗೆ ಶರಣುಹೋಗಿ ತಮಗೆ ದಾಸದೀಕ್ಷೆ ಕೊಡಬೇಕೆಂದು ವಿನಂತಿಸಿದರು. ಶ್ರೀವರವಿಠಲರು ಅವರಿಗೆ 'ಮುದ್ದುಮೋಹನ ವಿಠಲ' ಎಂಬ ಅಂಕಿತವಿತ್ತು ಈ ಕೆಳಗಿನ ಹಾಡನ್ನು ರಚಿಸಿದರು :

ಮುದ್ದುಮೋಹನ ವಿಟ್ಠಲ ಸಲಹೊ ಇವನನು ಪ

ಸಿರಿಮನೋಹರ ನಿನ್ನ ಪ್ರಾರ್ಥಿಸುವೆ ನಿರುತ ಅ.ಪ.

ಶಿರಿಬೊಮ್ಮ ಮೊದಲಾದ ಸುರರಿಂದ ಸೇವಿತನೆ
ಪರಮ ಕರುಣಾಳು ಹರಿ ಕರಿವರದನೇ
ನಿರುತದಲಿ ನಿಮ್ಮ ನಾಮಸ್ಮರಣೆಯನಿತ್ತು
ಕರುಣದಲಿ ರಕ್ಷಿಸೋ ಪರಮ ಪಾವನನೇ ೧

ಗುರುಹಿರಿಯಲಿ ಭಕುತಿ ವಿಷಯದಲಿ ವಿರಕುತಿ
ಪಿರಿದಾದ ಪಂಚಭೇದವನು ಅರುಪೀ
ಕರಿವರದನೇ ನಿನ್ನ ನಾಮಾಮೃತಸಾರ ಉಣಿಸೀ
ದುರಿತಗಳ ಪರಿಹರಿಸೊ ಪರಮಪಾವನನೇ ೨

ನಾನು ನನ್ನದು ಎಂಬ ದುರಭಿಮಾನವನು ಬಿಡಿಸೀ
ಸಾನುರಾಗದಲಿ ತಾರತಮ್ಯಗಳ ತಿಳಿಸೋ
ಮಾನನಿಧಿ ನೀನೆ ಸರ್ವೋತ್ತಮಾನೆಂಬಂಥ
ಜ್ಞಾನದಾಯಕನಾಗೊ ಶ್ರೀವರವಿಟ್ಠಲಾ ೩

ಶ್ರೀವರವಿಠಲರು ದಿ. ೧-೮-೧೮೭೩ರಂದು ನಿಧನರಾದರು. ಅವರ ಮಗ ಸವದಿ ಅಣ್ಣಾರಾಯರು ಧಾರವಾಡದ ಟ್ರೇನಿಂಗ್ ಕಾಲೇಜಿನಲ್ಲಿ ಆದರ್ಶ ಶಿಕ್ಷಕರೆನಿಸಿಯೂ ಸಾಹಿತಿಯಾಗಿಯೂ ಹೆಸರುಮಾಡಿದ್ದಾರೆ.

ಇಂಥ ಶ್ರೀವರರ ಹಾಡುಗಳು ದೊರೆಯದೇ ಇದ್ದದ್ದು ನಮ್ಮ ದೌರ್ಭಾಗ್ಯವೇ ಸೈ. ಆದರೆ ಅವರ ಶಿಷ್ಯರಲ್ಲಿ ಒಬ್ಬರಾದ, ಪೂರ್ವೋಕ್ತ ಮುದ್ದುಮೋಹನ-ವಿಠಲರಿಂದ ಇವರ ಪೀಳಿಗೆ ದಕ್ಷಿಣ ಕರ್ನಾಟಕದಲ್ಲಿ ಹಬ್ಬಿತು. ಮುದ್ದುಮೋಹನ ವಿಠಲರ ಶಿಷ್ಯರೇ ಸುಪ್ರಸಿದ್ಧ, ಪರಮಪ್ರಿಯ ಸುಬ್ಬರಾಯದಾಸರು (ತಂದೆ ಮುದ್ದುಮೋಹನ ವಿಠಲಾಂಕಿತರು). ಈ ಮಹನೀಯರ ನೂರಾರು ಶಿಷ್ಯರಲ್ಲಿ ನೆಗಳ್ತೆವೆತ್ತ ಗುರುಗೋವಿಂದವಿಠಲದಾಸರು ಒಬ್ಬರು ೨೦ನೆಯ ಶತಮಾನದಲ್ಲಿ ಹರಿದಾಸ ಸಾಹಿತ್ಯದ ಪ್ರಸರಣಕ್ಕೆ ಹಲವಾರು ರೀತಿಯಲ್ಲಿ ಶ್ರಮಿಸಿದವರು.

# ಕೃತಿ ಸಮೀಕ್ಷೆ

ಈ ಸಂಪುಟದಲ್ಲಿ ಹಲವಾರು ಜನ ಹರಿದಾಸರ ರಚನೆಗಳಿವೆಯಷ್ಟೆ. ಅವರಲ್ಲಿ ಆದ್ಯತೆ ಶ್ರೀದವಿಠಲರಿಗೇ ಸಲ್ಲತಕ್ಕದು. ಧಾರವಾಡ ಪ್ರದೇಶದ ದಾಸಪರಂಪರೆಗೆ ಅವರು ನಿಮಿತ್ತರಾದರು ಮುಖ್ಯವಾಗಿ ಜಗನ್ನಾಥದಾಸರಿಂದ ಪರಿಪೋಷಣೆಯನ್ನು ಪಡೆದಿದ್ದರು. ಅನಂತರದ ಸ್ಥಾನ ಕದರಮಂಡಲಗಿಯವರಿಗೆ ಸೇರಬೇಕು. ಹಾಡುಗಳ ಸಂಖ್ಯೆ ಕಡಿಮೆ ಇದ್ದರೂ ದಾಸಕಾರ್ಯ ಪ್ರಸಾರದಲ್ಲಿ, ಶ್ರೀದವಿಠಲರಷ್ಟೇ ಸೇವೆಸಲ್ಲಿಸಿದವರು. ಇತ್ತ ಧಾರವಾಡ ನಗರದಲ್ಲಿಯ ಆ ಕಾರ್ಯ ಕೈಕೊಂಡಿದ್ದ ಶ್ರೀನಿಧಿವಿಠಲರು (ದೀಪದ ಅಣ್ಣಯ್ಯ) ಅವರನ್ನೂ ಈ ಸಾಲಿಗೆ ಸೇರಿಸಬೇಕು. ನರಸಿಂಹ ವಿಠಲರೂ ಹನುಮೇಶ ವಿಠಲರು ಇವರುಗಳಿಗಿಂತ ಈಚಿನವರು (೧೯/೨೦ ಶತಮಾನದವರು).

ಹೀಗೆ ವಿವಿಧ ದಾಸರುಗಳಿಂದ ರಚಿತವಾದ ಕೃತಿಗಳು ಇಲ್ಲಿ ಸಮಾವೇಶ–ಗೊಂಡಿರುವುದರಿಂದ ಸಾಕಷ್ಟು ವೈವಿಧ್ಯ ವ್ಯಕ್ತವಾಗಿದೆ. ಶ್ರೀಹರಿಯ ಸ್ತುತಿ, ಅವನು ಭಕ್ತರನೇಕರನ್ನು ಉದ್ಧರಿಸಿದ್ದರ ಪ್ರಸ್ತಾಪಗಳು ಹಾಗೂ ತಮ್ಮನ್ನು ಹಳಿದುಕೊಂಡು ಶರಣಾಗತರಾಗುವುದು–ಇವುಗಳಿಗೆ ಸಂಬಂಧಿಸಿದ ಅಂಶಗಳೇ ಇಲ್ಲಿ–ಪುನರುಕ್ತಿ ಎಂದು ಸಾಮಾನ್ಯರಿಗೆ ಅನಿಸಬಹುದಾದರೂ ಬಂದಿವೆ. ಆದರೆ ಅಲ್ಲಲ್ಲಿ ವೈವಿಧ್ಯವೂ ಇದೆ.

ಉದಾಹರಣೆಗೆಂದು ದಶಾವತಾರದ ಹಾಡುಗಳನ್ನು ಗಣಿಸಬಹುದು :

ಧೀರ ಸೋಮಕನಿರಿದು (ಮತ್ಸ್ಯಾವತಾರ)
ಮೇರು ಬೆನ್ನಲಿ ಪೊತ್ತು (ಕೂರ್ಮ)
ಘೋರ ಹಿರಣ್ಯಾಕ್ಷ ಕಶ್ಯಪರ ಶೀಳಿ (ವರಾಹ, ನರಸಿಂಹಾವತಾರಗಳು )
ಮಾರಿ ಬಲಿಯನೊತ್ತಿ (ವಾಮನಾವತಾರ )
ಕಾರ್ತವೀರ್ಯನ ಪೊಡೆದು (ಪರಶುರಾಮ)
ರಾವಣಕಂಸ ದಾನವರನಳಿದು (ರಾಮ, ಕೃಷ್ಣರು)
ಶೇರಿ ತ್ರಿಪುರರ ದಹಿಸಿ ಕ್ರೂರದುಷ್ಕರ ತರಿದು (ಬೌದ್ಧ, ಕಲ್ಕಿ ಅವತಾರಗಳು)

ಈ ಚುಟುಕು ಮಾತುಗಳಲ್ಲಿ ದಶಾವತಾರಗಳನ್ನು ತಂದ ಸಂದರ್ಭ ಶ್ರೀಹರಿಗೆ ಹೇಳುವ ಉದಯರಾಗದ್ದು, 'ಏಳಯ್ಯ ಬೆಳಗಾಯಿತು. ಇಷ್ಟೆಲ್ಲ ದುಷ್ಟ ನಿಗ್ರಹ ಮಾಡಿ ಭಾರಿ ಆಯಾಸದಲಿ ನಿದ್ರೆ ಹತ್ತಿರೆ' ಎಂಬ ಪೀಠಿಕೆ ಹಾಕುತ್ತಾರೆ ನರಸಿಂಹವಿಠಲರು. (ಪದ್ಯ ೧೭೩) ಹೆಚ್ಚಿನ ದಶಾವತಾರದ ಹಾಡುಗಳು ಅವರಿಂದಲೇ ರಚಿತವಾಗಿವೆ.

ಕೆಲವು ದೇವತಾಸ್ತ್ರೀಯರ ವರ್ಣನೆ ಬಂದಿರುವುದು ಈ ಸಂಪುಟದ ಒಂದು ವೈಶಿಷ್ಟ್ಯವಾಗಿದೆ. ರಾಧೆಯಂತೂ ಸರಿಯೇ. ತುಳಸೀ ದೇವಿಯನ್ನು ಮತ್ತು ದ್ರೌಪದಿಯನ್ನು ವರ್ಣಿಸಿದ ಹಾಡುಗಳು ಇಲ್ಲಿವೆ. ತುಳಸೀದೇವಿಯನ್ನು ಕುರಿತ ಹಾಡಿನಲ್ಲಿ ಕದರಮಂಡಲಗಿಯ ಭೀಮಾಚಾರ್ಯರು ಅವಳ ಜನ್ಮಧಾರಣೆ, ಆ ವೃಕ್ಷದ ವಿವಿಧ ಅಂಗಗಳಲ್ಲಿ ನೆಲೆಸಿರುವ ಬ್ರಹ್ಮಾದಿದೇವತೆಗಳು, ಇವನ್ನು ವಿವರಿಸಿದ್ದಾರೆ. ದ್ರೌಪದಿಯನ್ನು ನರಸಿಂಹವಿಠಲರು (ನಂ.೨೦೦) ಚಿಕ್ಕ ಚಿಕ್ಕ ಪದಗುಚ್ಛಗಳ ಮೂಲಕ ವರ್ಣಿಸಿದ್ದಾರೆ :

> ನಾನೊಬ್ಬಳ್ಭಾರತದಲ್ಲಿದ್ದೆ
> ಬಂದೆ ಬೆಂಕಿಯಿಂದೆ ನಿಂದೆ ಕನ್ಯೆಯಾಗಿ
> ಹೊಂದಿ ಐವರಿಗಾನಂದ
> ಮಾರಿ ಕೌರವರಿಗೆ ಹಾರ ಪಾಂಡವರಿಗೆ
> ಉರಿ ದುರುಳರಿಗೆ ಮರೆ (ನೆರಳು) ಶರಣಾರಿಗೆ

ಈ ಸಂಕಲನದಲ್ಲಿ ವಾಯುದೇವರ ಅವತಾರ ತ್ರಯದ – ಎಂದರೆ ಹನುಮ, ಭೀಮ, ಮಧ್ವರ ಕುರಿತ ಹಾಡುಗಳು ಒಡೆದು ತೋರುತ್ತದೆ. ವಿಶೇಷತಃ ಹನುಮಂತ ದೇವರು. ಕದರಮಂಡಲಗಿಯ ದಾಸರು ತಮ್ಮ ಗೃಹ ದೈವತವೆಂಬಂತಿದ್ದ ಅವನನ್ನು ಮನವಾರೆ ಹೊಗಳಿದ್ದು ಸಹಜವೇ ಆಗಿದೆ.

ಇಲ್ಲಿಯ ಹಾಡುಗಳ ಇನ್ನೊಂದು ಗುಂಪು ವಿವಿಧ ಮಾಧ್ವಯತಿಗಳನ್ನು ಕುರಿತದ್ದಾಗಿದೆ. ಅವರಲ್ಲಿ ವ್ಯಾಸರಾಯರಂತೂ ಸರಿಯೆ. ಆದರೆ ಅವರಿಗೆ ಗುರುಸ್ಥಾನದಲ್ಲಿದ್ದ ಬ್ರಹ್ಮಣ್ಯತೀರ್ಥರನ್ನು ಸ್ತುತಿಸಿದ್ದು ವಿಶೇಷ. ದಾಸರುಗಳಿಂದ

ಸ್ತುತ್ಯರಾದ ಇತರ ಯತಿವರ್ಯರೆಂದು ಶ್ರೀ ರಘೋತ್ತಮ ತೀರ್ಥರು, ಶ್ರೀ ವಾದಿರಾಜರು ಹಾಗೂ ಶ್ರೀ ರಾಘವೇಂದ್ರರನ್ನು ಹೆಸರಿಸಬೇಕು. ಆದರೆ ಹಿಂದಿನ ಕಾಲದ ದಾಸರಲ್ಲೆಲ್ಲೂ ಕಂಡುಬಾರದ ಅಂಶವೆಂದರೆ ೧೮-೧೯ನೆಯ ಶತಮಾನಗಳಲ್ಲಿ ಆಗಿ ಹೋದ - ಎಂದರೆ ಶ್ರೀ ಸತ್ಯಬೋಧರಿಂದ ಹಿಡಿದು ಶ್ರೀ ಸತ್ಯಜ್ಞಾನರವರೆಗಿನವರ ಸ್ತುತಿಪರ ಹಾಡುಗಳು ಈ ಸಂಕಲನದಲ್ಲಿಯೆ ಹೆಚ್ಚಾಗಿ ಕಂಡುಬರುತ್ತವೆ. ಸವಣೂರಿನ ಶ್ರೀ ಸತ್ಯಬೋಧರು ಈ ಭಾಗದ ದಾಸರಿಗೆ ಕಲ್ಪದಂತಿದ್ದರು. ಜಗನ್ನಾಥದಾಸರ ಪ್ರೇರಣೆ ಪ್ರೋತ್ಸಾಹವಂತೂ ಈ ಅನನ್ವಿತವಾಗಿದ್ದದರಿಂದ ಅವರನ್ನೇ ಸ್ತುತಿಸಿದ ಹಾಡುಗಳೂ ಎದ್ದುಕಾಣುತ್ತವೆ.

ಈ ಜಗನ್ನಾಥದಾಸರ ಮೇರುಕೃತಿಯಾದ 'ಹರಿಕಥಾಮೃತಸಾರವು' ಎಲ್ಲೆಡೆ ಗೌರವಾನ್ವಿವಾಯಿತು. ಅದಕ್ಕೆ ಫಲಶ್ರುತಿಯನ್ನು ಯಾರಾದರೂ ಬರೆಯಬೇಕು ಎಂಬ ವಿಚಾರ ಬಂದಾಗ ಆ ಕಾರ್ಯವನ್ನು ಜಗನ್ನಾಥದಾಸರು ಶ್ರೀದವಿಠಲರಿಗೆ ಒಪ್ಪಿಸಿದುದು ಹೆಗ್ಗಳಿಕೆಯ ಮಾತಾಗಿದೆ. ಅದರಲ್ಲಿ ಈ ಕೃತಿಯ ಕಾವ್ಯ ಸೌಂದರ್ಯವನ್ನು, ಛಂದೋದೋಷರಾಹಿತ್ಯವನ್ನು, ಮೊದಲಿಗೆ ಅದು ಶ್ರೀಹರಿಯ ಅನಂತಗುಣಪರಿಪೂರ್ಣತೆ ಬಂದುದನ್ನು ತಿಳಿಸಿ, ಇದನ್ನು ಪಠಿಸಿದವರಿಗೆ, ಪ್ರತಿಮಾಡಲು ಬರೆದವರಿಗೆ ಶುಭವಹುದು - ಎಂಬ ಫಲಶ್ರುತಿ ಇಲ್ಲಿ ಬಂದಿದೆ. ಹರಿಕಥಾಮೃತಸಾರವು ಪಾರಾಯಣ ಯೋಗ್ಯವಾದ ಗ್ರಂಥ. ಹಾಗೇ ಮಾಡುವವರು ಇಂದಿಗೂ ಇದ್ದಾರೆ. ಅವರು ಈ ಫಲಶ್ರುತಿಯನ್ನು ಪಠಿಸುವಷ್ಟು ಮಹತ್ವದ ಸಂಧಿಯಾಗಿದೆ.

ಈ ಸಂಕಲನದ ಕೊನೆಯಲ್ಲಿ ಪಂಢರಪುರದ ವಿಠಲನನ್ನೇ ಸ್ತುತಿಸಿದ ದೀರ್ಘ ಕವನವಿದೆ. ಬಹಳ ಸೊಗಸಾಗಿ ಷಟ್ಪದಿಯಲ್ಲಿ ಹೇಳಿದ್ದಾಗಿದೆ. ಕವಿತೆಯ ಬಂಧ ಅಚ್ಚುಕಟ್ಟಾಗಿ ರಚಿತವಾಗಿದೆ. ಆದರೆ ಕೊನೆಯಲ್ಲಿ ಮುದ್ರಿಕೆ ಇಲ್ಲ. ಹೀಗಾಗಿ ಇದನ್ನು ಯಾರು ರಚಿಸಿದ್ದೆಂದು ಹೇಳಲಾಗುವುದಿಲ್ಲ. ಈ ಹಸ್ತಪ್ರತಿ-ಧಾರವಾಡ ಜಿಲ್ಲೆಯ ಸಂಚಾರದಲ್ಲಿಯೇ ದೊರೆತಿದ್ದರಿಂದಲೂ ಪಂಢರಪುರೀಶನ ಮೇಲೆ ಪ್ರತ್ಯೇಕ ಕೃತಿಗಳು ಕಂಡುಬಾರದಿರುವುದರಿಂದಲೂ ಇಲ್ಲಿ ಸೇರಿಸಿದೆ.

ಈ ಕೀರ್ತನ ಸಮುದಾಯವನ್ನು ಇಡಿಯಾಗಿ ಗಮನದಲ್ಲಿ ತೆಗೆದುಕೊಂಡಾಗ, ಹಿಂದಿನ ಅಪರೋಕ್ಷಜ್ಞಾನಿಗಳಾದವರ - ವಿಶೇಷತಃ ಪುರಂದರದಾಸರ ಹಾಡುಗಳ

ಪ್ರಭಾವ ಸಾಕಷ್ಟು ಇದ್ದದ್ದು ಕಂಡುಬರುತ್ತದೆ. ಪುರಂದರದಾಸರ 'ಮುತ್ತೈದೆಯಾಗಿರ ಬೇಕು....' ಎಂಬ ಹಾಡಿನ ಪುರಂದರವಿಠಲ ಮುದ್ರಿಕೆಯಷ್ಟನ್ನು ಬದಲಿಸಿ, ಈಚಿನ ದಾಸರೊಬ್ಬರ ಮುದ್ರಿಕೆ ಸೇರಿಸಿದ್ದು, ಒಂದು ಹಸ್ತಪ್ರತಿ ಸಂಗ್ರಹದಲ್ಲಿ ಕಂಡಬಂತು! ಅದನ್ನು ಇಲ್ಲಿ ಕೈಬಿಟ್ಟಿದ್ದೇವೆ. ಇದಂತಿರಲಿ, ಮೌಲಿಕತೆ, ಸ್ವೋಪಜ್ಞತೆಯ ಅಂಶಗಳು ಮೊದಲ ಘಟ್ಟದ ದಾಸರಿಗೆ ಹೋಲಿಸಿದಾಗ ಕಡಿಮೆ ಎನಿಸುತ್ತದೆ. ಅಲ್ಲದೆ ಅನೇಕ ಕಡೆಗೆ ಅರ್ಥಸ್ಪಷ್ಟವಾಗುವಂತೆ ಪದ ಬಳಕೆ ಇಲ್ಲ.

## ಆಕರಗಳು

ಬಹು ಮುಖ್ಯವಾದ ಆಕರ ಗ್ರಂಥವೆಂದು, 'ಹರಿದಾಸ ಕಥೆ'ಗಳು ಈ ಕೃತಿಯನ್ನು ಹೆಸರಿಸಬೇಕು. ಅದರಲ್ಲಿ ೬೬ ಜನ ಹರಿದಾಸರ ಜೀವನವನ್ನು ತ್ರೋಟಕವಾಗಿ ಪರಿಚಯ ಮಾಡಿಕೊಡಲಾಗಿದೆ. ಈ ಕೃತಿಗೆ ಅಖಿಲ ಕರ್ನಾಟಕ ವ್ಯಾಪ್ತಿ ಇದ್ದುದಾದರೂ ಧಾರವಾಡ ಪ್ರದೇಶದ ಅಷ್ಟೊಂದು ಪ್ರಸಿದ್ಧರಲ್ಲದ ಹರಿದಾಸರ ಜೀವನ ಕಾರ್ಯವನ್ನು ಅಲ್ಲಿ ಹೇಳಲಾಗಿದೆ. ಇದರ ಮೂಲ ಸಾಮಗ್ರಿಯನ್ನು ಕಲೆಹಾಕಿದವರು ದಿವಂಗತ ಕಲಮದಾನಿ ನಾರಾಯಣರಾಯರು. ಈಗ ವಯೋವೃದ್ಧರಾಗಿರುವ ಅವರ ಮಗ ಗುರುರಾಯರು ಕೆಲವು ದಶಕಗಳ ಹಿಂದೆಯೇ ಅದನ್ನು ಪ್ರಕಟಿಸಿ ಹೆಚ್ಚಿನ ಸಂಖ್ಯೆಯ ಹರಿದಾಸರ ಜೀವನವೃತ್ತಿ ಒಂದೆಡೆ ಸಿಗುವಂತೆ ಮಾಡಿ ಉಪಕರಿಸಿದ್ದಾರೆ.

ಕರ್ಜಗಿಯ ಶ್ರೀದವಿಠಲರದು ದಕ್ಷಿಣೋತ್ತರ ಕರ್ನಾಟಕದಲ್ಲೆಲ್ಲ ಕೇಳಬರುವ ಹೆಸರು. ಅವರ ಕೃತಿ ಸಂಪದವನ್ನು ಶ್ರೀ ಕೆ. ಅಪ್ಪಣಾಚಾರ್ಯರು, ತಿರುಪತಿಯ ದೇವಸ್ಥಾನದ ವತಿಯಿಂದ ಪ್ರಕಟಿಸಿದ್ದಾರೆ (೧೯೯೭). ಅದರಲ್ಲಿದ್ದವುಗಳಲ್ಲದೆ ಇನ್ನು ಕೆಲವು ಹಾಡುಗಳು - ಹಸ್ತಪ್ರತಿರೂಪದಲ್ಲಿದ್ದವುಗಳು ದೊರೆತಿದ್ದು ಅವನ್ನು ಇಲ್ಲಿ ಸೇರಿಸಲಾಗಿದೆ.

ಶ್ರೀನಿಧಿವಿಠಲರ ಬಗ್ಗೆ (ದೀಪದ ಅಣ್ಣಯಾಚಾರ್ಯ) ಕೆಲವು ವರ್ಷಗಳ ಹಿಂದೆ ಪಂಢರಿನಾಥಾಚಾರ್ಯ ಗಲಗಲಿ ಅವರು 'ತತ್ವವಾದ'ದಲ್ಲಿ ಲೇಖ ಬರೆದಾಗ, ಅದರಲ್ಲಿ ಕೆಲವು ಹಾಡುಗಳನ್ನು ಮಾದರಿಯಾಗಿ ಕೊಟ್ಟಿದ್ದರು. ಅವಷ್ಟೇ ನಮ್ಮ ಈಗಿನ ಬಂಡವಲು.

ಕದರಮಂಡಲಗಿ ಕಡೆಯ ದಾಸರುಗಳ ಆಕರದ ಬಗ್ಗೆ ವಿಶೇಷವಾಗಿ ಹೇಳಲಿಕ್ಕಿದೆ. ೧೯೨೫ರಲ್ಲಿ, ವಡವಿ ಭೀಮಾಚಾರ್ಯ ಎನ್ನುವವರಿಂದ ಸತ್ಪುರುಷಮಂಡಲ-ಶೀರ್ಷಿಕೆಯಲ್ಲಿ ಹಿರೇ ಆಚಾರ್ಯರ (ಭೀಮಾಚಾರ್ಯ) ಬಗ್ಗೆ ಬರೆದಿದ್ದರು. ಅಗಡಿಯ ಶೇಷಾಚಲ ಗ್ರಂಥಮಾಲೆಯಲ್ಲಿ ಪ್ರಕಟವಾದ ಆ ಗ್ರಂಥ ಅಕಸ್ಮಾತ್ ಕಣ್ಣಿಗೆ ಬಿದ್ದಿತು. ಅದರಲ್ಲಿ ಭೀಮಾಚಾರ್ಯರ ಹಾಡುಗಳು ಕೆಲವಿದ್ದುವು. ಆ ಮುಂದೆ ಕದರಮಂಡಲಗಿಗೆ ಹೋಗಿ, ಅಲ್ಲಿ ಇದ್ದವರಿಂದ ಈಗಿನ ವಂಶಸ್ಥರ ಪತ್ತೆ ಹಚ್ಚಿದಾಗ, ಅವರು ಬರೆದ ಎರಡು ಚಿಕ್ಕ ಪುಸ್ತಕಗಳು ದೊರೆತುವು ('ಕದರಮಂಡಲಗಿ ದಾಸರು - ಗುರುರಾಜ ಗುತ್ತಲ ೧೯೯೦. ಕಾಂತೇಶ ವಿಜಯ-ಎಸ್. ಬಿ. ಕದರಮಂಡಲಗಿ ೧೯೭೯).

ಈ ಹಿಂದೆ ಹೇಳಿದಂತೆ ನರಸಿಂಹವಿಠಲರ ಹಾಡುಗಳ ಇಡೀ ಹಸ್ತಪ್ರತಿಯನ್ನು ಮೊಮ್ಮಗ ಶ್ರೀ ರಾಮರಾವ ಕುಲಕರ್ಣಿಯವರು ಕೊಟ್ಟಿದ್ದು. ಅವರು ರಚಿಸಿದ ಒಂದು ಹಾಡಾದರೂ ಉಳಿದೆಡೆ ಕಣ್ಣಿಗೆ ಬಿದ್ದಿರಲಿಲ್ಲ. ಈ ಕಾರಣದಿಂದ ಆ ಹಸ್ತಪ್ರತಿಯು ಓರ್ವ ಅಜ್ಞಾತ ಹರಿದಾಸರನ್ನು ಗುರುತಿಸಿಕೊಟ್ಟಿದ್ದರ ಹೆಗ್ಗಳಿಕೆಗೆ ಪಾತ್ರವಾಗಿದೆ.

ಹನುಮೇಶವಿಠಲರದಂತೂ ಮುದ್ರಿತ ಕೃತಿಯೇ ಲಭ್ಯವಾಯಿತು. ಅವರ ಜೀವನವಿವರಗಳು ಅವರ ಮೊಮ್ಮಗ ಬುರ್ಲಿ ಹನುಮಂತರಾಯರಿಂದ ಸುಲಭವಾಗಿ ದೊರೆತುವು.

ಮೇಲ್ಕಾಣಿಸಿದ ಎಲ್ಲ ಮಹನೀಯರಿಗೆ ನಮ್ಮ ಕೃತಜ್ಞತೆಗಳು ಸಲ್ಲಬೇಕು.

## ಕ್ಷಮಾಪಣೆ

ಮೇಲಿನ ವಿವರಣೆಯಿಂದ, ಇಲ್ಲಿಯ ಹೆಚ್ಚಿನ ಹಾಡುಗಳು ಹಸ್ತಪ್ರತಿಗಳಿಂದ ದೊರೆತವುಗಳೆಂಬುದು ವಿದಿತವಾಗುತ್ತದೆ. ಹಳೆಯ ಕಾವ್ಯ ಕೃತಿಗಳ ಯಾವುದೇ ಹಸ್ತಪ್ರತಿಯಲ್ಲಿ ಪಾಠಶುದ್ಧಿ ಇರುವುದಿಲ್ಲ. ಆಗ ಒಂದಕ್ಕಿಂತ ಹೆಚ್ಚು ಪ್ರತಿಗಳನ್ನು ಹೋಲಿಸಿ ಸರಿಯಾದ ಪಾಠ ಗುರುತಿಸುವ ಕ್ರಮವಿರುತ್ತದೆ. ನಮ್ಮ ದುರ್ದೈವಕ್ಕೆ

ನಮಗೆ ಲಭ್ಯವಿದ್ದದ್ದು ಒಂದೊಂದೇ ಪ್ರತಿ. ಮೇಲಾಗಿ ಅರ್ಥವೇ ಹೊಳೆಯದಷ್ಟು ಶಬ್ದಗಳು ವಿರೂಪಗೊಂಡಿವೆ. ಅಂಥವನ್ನೆಲ್ಲ ಪ್ರಶ್ನಾರ್ಥಕ ಚಿಹ್ನೆಯನ್ನು [?] ಕೊಡುವ ದುರ್ಧರ ಪ್ರಸಂಗ ನಮ್ಮದಾದದ್ದು ಬೇಸರ ತರಿಸಿದೆ. ಉಪಾಯವಿಲ್ಲ.

## ಭೂಪತಿವಿಠಲರು

ಹದಿನಾರನೆಯ ಶತಮಾನದ ಮಹಿಪತಿರಾಯರು ಹಾಗೂ ಅವರ ಮಗ ಕೃಷ್ಣದಾಸರ ಅನಂತರ ವಿಜಾಪುರ ಜಿಲ್ಲೆಯಲ್ಲಿ ಕೇಳಬಂದ ಒಂದೇ ಹೆಸರು ಭೂಪತಿ ವಿಠಲಾಂಕಿತದ ಶ್ರೀ ಕಾಖಂಡಕಿ ರಾಮಾಚಾರ್ಯರದು. ಕ್ರಿ.ಶ. ೧೮೯೬ರ ನವೆಂಬರ್ ೧೯ರಂದು ಜನಿಸಿದ ಇವರು ಇಪ್ಪತ್ತನೆಯ ಶತಮಾನದವರು. ಆದ್ದರಿಂದ ಅವರನ್ನು ಹೊಸಯುಗದ ಹರಿದಾಸರೆಂದೇ ಬಗೆಯತಕ್ಕುದು.

ತಾಯಿ ಗಂಗಾಬಾಯಿಯ ತವರೂರಾದ ಮುಧೋಳದಲ್ಲಿ ಜನನ. ತಂದೆಯ ಹೆಸರು ಬಿಂದಾಚಾರ್ಯರೆಂದು. ರಾಮಾಚಾರ್ಯ ಶಾಲೆ ಕಲಿಯುವಾಗ ಯಾವ ವಿಷಯವೇ ಇರಲಿ, ಶೀಘ್ರವಾಗಿ ಗ್ರಹಿಸಬಲ್ಲವನಾಗಿದ್ದ, ಗಣಿತದ ಪರೀಕ್ಷೆ-ಯೊಂದರಲ್ಲಿ ೧೧ ಲೆಕ್ಕ ಕೊಟ್ಟು ಎಂಟನ್ನು ಬಿಡಿಸಿರ ಎಂದು ಕೇಳಿದಾಗ ಅವರು ಎಲ್ಲಾ ಲೆಕ್ಕಗಳನ್ನು ಸರಿಯಾಗಿ ಬಿಡಿಸಿದ್ದರಂತೆ. ಸಾಂಗಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಕಲಿಯುತ್ತದ್ದಾಗ ಗಾಂಧೀಜಿಯ ಕರೆಯ ಮೇರೆಗೆ ಪಾಶ್ಚಾತ್ಯ ಮಾದರಿಯ ಶಿಕ್ಷಣಕ್ಕೆ ಶರಣು ಹೊಡೆದು, ಪುಣೆಯಲ್ಲಿ ನ.ಚಿ. ಕೇಳಕರ, ಪರಾಂಜಪೆ ಮುಂತಾದವರು ನಡೆಸುತ್ತಿದ್ದ ರಾಷ್ಟ್ರೀಯ ಕಾಲೇಜನ್ನು ಸೇರಿದರು. ಪುಣೆಯ ಆಗಿನ ವಾಸ್ತವ್ಯ (೧೯೨೮-೧೯೨೯) ಅವರ ಮೇಲೆ ತುಂಬಾ ಪ್ರಭಾವ ಬೀರಿತು.

ಆ ಮುಂದೆ ವಿಜಾಪುರದಲ್ಲಿಯೇ ಸ್ಥಾಪಿತವಾದ ರಾಷ್ಟ್ರೀಯ ಪಾಠಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಜೊತೆಗೆ ಪಂಡಿತ ಕೂರ್ಮಾಚಾರ್ಯ ಗಲಗಲಿ ಅವರಲ್ಲಿ ವೇದಾಂತದ ವಿದ್ಯಾಭ್ಯಾಸ ಮುಗಿಸಿದರು. ಸದವೃತ್ತಿಯವರೂ, ನಿರ್ಭೀತರೂ ಆಗಿದ್ದ ಅವರು ರಾಷ್ಟ್ರೀಯ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡು, ನಾಯಕರಾಗಿ ಸ್ವಯಂಸೇವಕರ ದೊಡ್ಡ ಪಡೆಯನ್ನೇ ನಿರ್ಮಿಸಿದರು. ಜಮಖಂಡಿಯಲ್ಲಿ 'ನಿರ್ಭಯ' ಎಂಬ ರಾಷ್ಟ್ರೀಯ ಒಲವಿನ ಪತ್ರಿಕೆಯನ್ನೂ ಕೆಲಕಾಲ

ನಡೆಸಿದರು (೧೯೪೦-೪೨) ಅದೇ ಜಿಲ್ಲೆಯ ಗಲಗಲಿಯಲ್ಲಿ ನೆಲೆಸಿ ಧಾರ್ಮಿಕದತ್ತ ಮನಗೊಟ್ಟರು.

ಈ ವಿಷಯದಲ್ಲಿ ಅವರಿಗೆ ಶ್ರೀ ರಾಘವೇಂದ್ರ ಗುರುಗಳೇ ಪ್ರೇರಕರು. ಗಲಗಲಿಯಲ್ಲಿ ಶ್ರೀ ರಾಘವೆಂದ್ರರ ವೃಂದಾವನವನ್ನು ಸ್ಥಾಪಿಸಿದರು (೧೯೬೯) ವೃಂದಾವನಕ್ಕೆ ಅಭಯ ಮುದ್ರೆಯುಳ್ಳ ಪ್ರಸನ್ನ ರಾಘವೇಂದ್ರರ ಮೂರ್ತಿಯನ್ನು ಕೆತ್ತಲಾಗಿದೆ.

ಅಥಣಿ, ರಾಮದುರ್ಗ, ಉಗಾರಖುರ್ದ ಮೊದಲಾದ ಊರುಗಳಲ್ಲಿ ಸ್ಥಾಪಿತವಾಗಿರುವ ವೃಂದಾವನಗಳ ಸ್ಥಾಪನೆ ಸೇವಾಕಾರ್ಯ ಮುಂತಾದ್ರಲ್ಲಿ ಸಕ್ರಿಯವಾಗಿ ಸಹಾಯ ಮಾಡಿದರು.

ಮೊದಲಿನಿಂದಲೂ ಭಜನೆ, ಕೀರ್ತನೆಗಳತ್ತ ಒಲವಿದ್ದಿತು, ಸ್ವಾತಂತ್ರ್ಯ ಚಳುವಳಿಯಲ್ಲಿ ಇದ್ದಾಗಿನಿಂದ ರಾಯರ ವೃಂದಾವನದ ಮುಂದೆ ಕುಳಿತು ಪುರಂದರದಾಸರೇ ಮುಂತಾದವರ ಹಾಡುಗಳನ್ನು ಭಾವಪೂರ್ಣವಾಗಿ ಹೇಳುತ್ತಿದ್ದರು. ಪುಣೆಯಲ್ಲಿ ಹರಿದಾಸ ಸೇವಾ ಸಂಘವನ್ನು ಸ್ಥಾಪಿಸಿ ಆ ಮೂಲಕ ದಾಸಸಾಹಿತ್ಯದ ಪ್ರಚಾರವನ್ನು ಕೈಕೊಂಡರು. ವಿಶೇಷತಃ ಪಂಢರಪುರದಲ್ಲಿಯ ಪುರಂದರದಾಸರ ನಾಮಾಂಕಿತದ ಕಂಬಕ್ಕೆ ಪೂಜೆಗೈದು ಶ್ರೀ ವಿಠ್ಠಲ ದೇವರ ಸನ್ನಿಧಾನದಲ್ಲಿ ಭಜನೆಯ ಕಾರ್ಯಕ್ರಮವನ್ನು ನಿಷ್ಠೆಯಿಂದ ಕೈಕೊಳ್ಳುತ್ತಿದ್ದರು.

ಕ್ರಮೇಣ ತಾವೇ ರಚಿಸತೊಡಗಿದರು. ಸಂಜೆಯ ವಿಹಾರಕ್ಕಾಗಿ ಹೊರಟರೆಂದರೆ ಸ್ಫೂರ್ತಿ ಬಂದು ಹೊಮ್ಮಿದ ಹಾಡನ್ನು ದಾರಿಯ ಪಡಗಲ್ಲಿನ ಮೇಲೆ ಬರೆಯಬೇಕು. ಜೊತೆಗಿದ್ದವರು ಅದನ್ನು ಕಾಗದದ ಮೇಲೆ ಬರೆದು ತೆಗೆಯುತ್ತಿದ್ದರಂತೆ. ಮುದ್ರಿಕೆಯ ಪ್ರದಾನ ? 'ಭೂಪತಿವಿಠಲ' ಎಂಬುದು ತಾನಾಗಿ ಹೊಮ್ಮಿದುದಾಗಿ 'ಆನಂದವೊ ಆನಂದ' ಎಂಬ ಕೀರ್ತನೆಯಲ್ಲಿ ಹೇಳಿದ್ದಾರೆ.

ಅವರ ಲೌಕಿಕ ಶಿಷ್ಯವರ್ಗದಲ್ಲಿ ಸತ್ಯಕಾಮರು, ಪ್ರಾಂಶುಪಾಲ ಎಚ್.ಜಿ.ಜೋಶಿ, ಗುರುರಾಜ ಹಬ್ಬು ಮೊದಲಾದವರು ಪ್ರಸಿದ್ಧರಾದವರು. ಹುಬ್ಬಳ್ಳಿಯ ನೇತ್ರತಜ್ಞ ಎಂ.ಎಂ.ಜೋಶಿ ಅವರ ಸಂಬಂಧಿಕರು. ೧೯೮೦ರಲ್ಲಿ ಅವರನ್ನು ಶ್ರೀ ಸಿದ್ಧೇಶ್ವರ

ಸ್ವಾಮಿಗಳ ಘನಅಧ್ಯಕ್ಷತೆಯಲ್ಲಿ ಗಲಗಲಿಯಲ್ಲಿ ಸತ್ಕರಿಸಲಾಯಿತು. ಸನ್ಮಾನ ಸಂಚಿಕೆಯೂ ಪ್ರಕಟವಾದದ್ದಿದೆ. ಶೇಷಾಯುಷ್ಯವನ್ನು ಭಗವಚ್ಚಿಂತನೆಯಲ್ಲಿ ಮತ್ತು ಶ್ರೀ ರಾಘವೇಂದ್ರ ಗುರುಗಳ ಸೇವೆಯಲ್ಲಿ ಕಳೆಯುತ್ತ ದಿ. ೨೩ ನವೆಂಬರ್ ೧೯೮೮ ರಂದು ಅಸು ನೀಗಿದರು.

ದಾಸಶ್ರೇಷ್ಠ ಮಹಿಪತಿಯವರು ವಂಶಜರೇ ಆಗಿದ್ದ ರಾಚಾಚಾರ್ಯರಿಗೆ ಅವರ ಅದ್ವೈತಪರ ಹಾಡುಗಳನ್ನು ಗಮನಿಸಿದಾಗ, ಅವರು ಶಾಂಕರ ಮತದವರೆಂದು ಬಗೆದಿದ್ದರಂತೆ. ಕ್ರಮೇಣ, ಅವರು ರುದ್ರಾಂಶಸಂಭೂತರೆಂಬುದು ವೇದ್ಯವಾಗಿ ಸಮಾಧಾನವಾಯಿತಂತೆ. ಅವರನ್ನು ಕುರಿತು ಹಲವಾರು ಹಾಡುಗಳನ್ನು ರಚಿಸಿದ್ದಾರೆ. ಅದಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಅವರ ಆರಾಧ್ಯ ಗುರುಗಳಾದ ಶ್ರೀ ರಾಘವೇಂದ್ರ ಯತಿಗಳನ್ನು ಕುರಿತು ಹಾಡುಗಳಿವೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರಾದ್ದರಿಂದ, ಅಲ್ಲಲ್ಲಿ ಸತ್ಯಾಗ್ರಹ, ರಾಷ್ಟ್ರಧ್ವಜ ಮೊದಲಾದ ಪದಬಳಕೆ ಕಂಡುಬರುತ್ತದೆ 'ಶ್ರೀ ಹರಿಯೇ ಸರ್ವೋತ್ತಮನೆಂದು, ತಂದೆಯೆದುರು ಆಗ್ರಹಿಸಿದ ಪ್ರಹ್ಲಾದನೇ ಪ್ರಥಮ ಸತ್ಯಾಗ್ರಹಿ' ಎಂಬುದಾಗಿ ಹೇಳಿದ್ದಾರೆ. ಅವರು ರಚಿಸಿದ ಕೃತಿಗಳಲ್ಲಿ ಮೊದಲದೆನ್ನಬಹುದಾದ 'ಸದಾ ಸರ್ವದಾ' ಎಂಬ ಪ್ರಭಾತಫೇರಿಯ ಹಾಡಿನಲ್ಲಿ ಸ್ವಾತಂತ್ರ್ಯದ ತುಡಿತವಿದೆ. ಕೀರ್ತನೆ ೪೯ ರಲ್ಲಿಯ 'ವೈದಿಕ ಧರ್ಮಧ್ವಜ ಫಡಫಡಿಸಲಿ' 'ಭ್ರಷ್ಟಾಚಾರವು ನಿರ್ಮೂಲವಾಗಲಿ' 'ಸತ್ಯಕ್ಕೆ ಜಯವಿರಲಿ' ಎಂಬಂತಹ ಉಕ್ತಿಗಳನ್ನು ಈ ದೃಷ್ಟಿಯಿಂದ ಗಮನಿಸಬೇಕು. ಪ್ರಸಾದದಲ್ಲಿ ಬರುವ ಇಂತಹ ಉಕ್ತಿಗಳಂತೂ ನಮ್ಮ ನಿತ್ಯ ಜೀವನದಲ್ಲಿ ಅಂತರ್ಗತವಾಗಿರುವ ದೇಶಾಭಿಮಾನವನ್ನು ಹೊರಸೂಸುವಂತಿವೆ. ಜೇಲಿಗಂಜುತ ದೇಶಕಾರ್ಯ ಬಿಡಬಾರದಂತೆ ! ಇನ್ನೊಂದರಲ್ಲಿ ಸ್ವಾತಂತ್ರ್ಯ ವಿಚಾರ ಢಾಳವಾಗಿ ಹೊರಹೊಮ್ಮಿದೆ.

ಸ್ವಾತಂತ್ರ್ಯವೇ ಸ್ವರ್ಗ ಪಾರತಂತ್ರ್ಯವೆ ನರಕ

ಮಾತೃಭೂಮಿಯ ಸೇವೆ ಮಾಡದವ ಶುನಕ.

ಹೀಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದಲ್ಲದೆ ಆ ವಿಚಾರವನ್ನು ತಮ್ಮ ಹಾಡುಗಳಲ್ಲಿ ವ್ಯಕ್ತ ಪಡಿಸಿದ ಏಕಮೇವ ಹರಿದಾಸರಿವರು.

ಉತ್ತರ ಕರ್ನಾಟಕದಲ್ಲಿ ೧೮ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಶ್ರೀದವಿಠಲರಿಂದ ಪ್ರಾರಂಭವಾದ ಹರಿದಾಸ ಪೀಳಿಗೆ ಬಹುದೊಡ್ಡದು. ಎಂದರೆ ಬಿಡಿ ದಾಸರುಗಳು ಉಳಿದ ಪ್ರದೇಶಗಳಿಗಿಂದ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಅವರೆಲ್ಲ ಧಾರವಾಡ ಜಿಲ್ಲೆಯವರು. ವಿಜಾಪುರ ಜಿಲ್ಲೆಯಲ್ಲಿ ಶ್ರೀ ಕಾಖಂಡಕಿ ಮಹಿಪತಿರಾಯರು ಮತ್ತು ಅವರ ಮಗ ಕೃಷ್ಣದಾಸರನ್ನು ಬಿಟ್ಟರೆ, ಮಾಧ್ವಸಂಪ್ರದಾಯದ ಹರಿದಾಸರು ಬೇರಾರೂ ದೊರೆತಿರಲಿಲ್ಲ. ಹಾಗೆ ದೊರೆತವರು ಭೂಪತಿ ವಿಠ್ಠಲ ಮುದ್ರಿಕೆಯ ಶ್ರೀ ರಾಮಾಚಾರ್ಯ ಕಾಖಂಡಕಿಯವರು. ಅದೂ ಮಹಿಪತಿರಾಯರ ವಂಶಜರೇ ಆಗಿದ್ದವರು.

ಇವರ ಹೆಸರನ್ನು ಕೇಳರಲೇ ಇಲ್ಲವೆಂತಲ್ಲ. ಸ್ವಾತಂತ್ರ್ಯ ಯೋಧರಾಗಿಯೂ ಗಲಗಲಿಯಲ್ಲಿ ಶ್ರೀ ರಾಘವೇಂದ್ರರ ಮಠವನ್ನು ಸ್ಥಾಪಿಸಿ ಅಲ್ಲಿಯೇ ಸೇವಾನಿರತ–ರಾಗಿದ್ದ ವಿಷಯ ಮಾತ್ರ ಗೊತ್ತಿತ್ತು. ಹಾಡುಗಳನ್ನು ರಚಿಸಿದ್ದರ ಕಲ್ಪನೆಯೇ ಇರಲಿಲ್ಲ. ಮೇಲಾಗಿ ಗಾಂಧೀಜಿಯ ಅನುಯಾಯಿಗಳಾಗಿದ್ದ ಇವರು ೨೦ ನೇಯ ಶತಮಾನದವರೇ ಎಂಬ ಗ್ರಹಿಕೆಯೂ ಇದ್ದಿತು.

ಆದರೆ ಕೆಲ ತಿಂಗಳ ಹಿಂದೆ ಮುಂಬಯಿ–ಡೊಂಬವಲಿಯಲ್ಲಿರುವ ಅವರ ಮಗ ಆನಂದ ಕಾಖಂಡಕಿಯವರು, ರಾಮಾಚಾರ್ಯರು ಬರೆದ ಹಾಡುಗಳ ವಹಿಗಳನ್ನು ತೋರಿಸಿ ಅವುಗಳ ಸಂಗ್ರಹವನ್ನು ಪ್ರಕಟಿಸುವ ತಮ್ಮ ವಿಚಾರವನ್ನು ಹೇಳಿದಾಗ, ಅಕಸ್ಮಾತ್ ಅವರ ಜನ್ಮ ವರ್ಷವು ೧೯ನೆಯ ಶತಮಾನದ ಒಳಗಿನದೇ ಎಂಬುದಾಗಿ ತಿಳಿಯಬಂತು. ಹೇಗೂ ನಮ್ಮದು 'ಸಮಗ್ರ'ದಾಸಸಾಹಿತ್ಯ ವೆಂಬುದರಿಂದ, ಈ ದಾಸರು ಉಳಿದು ಹೋಗಬಾರದಲ್ಲವೆ. ಆದರೆ ಈ ಯೋಜನೆಯ ಎಲ್ಲ ಸಂಪುಟಗಳ ಮುದ್ರಣ ಕಾರ್ಯವೇ ಮುಗಿಯುತ್ತ ಬಂದಾಗ ಇನ್ನೇನು ಮಾಡುವುದು ? ಹೇಗೂ ತಡವಾಗಿ ಬಂದ ಕೀರ್ತನೆಗಳನ್ನು ಸೇರಿಸುವುದಕ್ಕೆ ಅನುಮತಿ ಇತ್ತಾದ್ದರಿಂದ ರಾಮಾಚಾರ್ಯರು ರಚಿಸಿದ ಕೃತಿಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಆಯ್ದು ಕೊಡಲಾಗಿದೆ. ಆ ಮೂಲಕ ಓರ್ವ ವಿಶಿಷ್ಟ ಎಂದರೆ ಸ್ವಾತ್ರಂತ್ಯ ಹೋರಾಟಗಾರರೊಬ್ಬರ ದಾಸಕೀರ್ತನೆಗಳನ್ನು ಸೇರಿಸಿಕೊಂಡ ಹಾಗೂ ವಿಜಾಪುರ ಜಿಲ್ಲೆಗೆ ಇನ್ನಷ್ಟು ಪ್ರಾತಿನಿಧ್ಯ ದೊರೆತದ್ದರ ಸಂತೋಷ ನನ್ನ ಪಾಲಿನದಾಗಿದೆ.

ಈ ವಿಷಯದಲ್ಲಿ ನನಗೆ ವಿಶೇಷವಾಗಿ ನೆರವಾದ ಆನಂದ ಕಾಖಂಡಕಿಯವರನ್ನೂ, ಶ್ರೀ ಸರ್ವಶ್ರೀ ರವಿಶಂಕರ, ಅನಂತಪದ್ಮನಾಭರಾವ ಮತ್ತು ಅಶ್ವತ್ಥನಾರಾಯಣರಾವ್ ಇವರನ್ನೂ ಅಭಿವಂದಿಸುವೆ.

ಮಂಗಳೂರು
ಡಿಸೆಂಬರ್ ೨೦೦೨

ಶ್ರೀನಿವಾಸ ಹಾವನೂರ

# ಕೀರ್ತನೆಗಳ ವಿಷಯಸೂಚಿ

## (ಅ) ಶ್ರೀಹರಿಯ ಸ್ತುತಿ

### ೧

### (ಸುಳಾದಿ)

### ಧ್ರುವತಾಳ

ಅಂದು ಇಂದು ಎಂದೆಂದಿಗೂ ಗೋ–
ವಿಂದನೆ ಗತಿ ನಮಗೆಂದು
ಇಂದಿರೇಶ ವಿಧಿವಂದ್ಯ ನಮೋ ನತಬಂಧು
ಎಂದರಾನಂದವೀವ ನಮಗೆಂದೂ
ಬಂದ ಬಂದ ಭಯ ವೃಂದಗಳೋಡಿಸಿ
ಹಿಂದು ಮುಂದು ಎಡಬಲದೊಳಗಿಹ ನಿ –
ರ್ದ್ವಂದ್ವನ ದಯಕೇನೆಂಬೆ ಮು –
ಕುಂದನ ಮೊರೆಹೋಗದಿರಲು ಭವ
ಬಂಧನ ಬಿಡಿಸುವರಾರಿಳೆಯೊಳು
ನಂದನಂದನ ಶ್ರೀದವಿಠಲನ
ಪೊಂದಿ ನೋಡು ಸುಖಸಾಂದ್ರನ ಹೇ ನಮಗೆಂದು ೧

### ಮಟ್ಟತಾಳ

ಪಾಪಪುರುಷ ನಮ್ಮ ಸಮೀಪಕೆ ಬರಲ್ಯಾಕೆ
ಪಾಪಪಂಕವನು ಲೇಪಿಸಿಕೊಳಲ್ಯಾಕೆ
ಪಾಪಿಮನವೆ ಲಕ್ಷ್ಮೀಪತಿಯ ವ್ಯಾಪಾರವ ನೋಡು
ಪಾಪಗಳೀಡ್ಯಾಡು ರೂಪವೆ ಅಣುಮಹ –
ದ್ರೂಪವೆ ಗುಣ ನಾಮರೂಪವೇ ಸತ್‌ಚಿತ್ಸುಖ
ರೂಪಾತ್ಮಕ ನಿತ್ಯ ಆಪನ್ನಪಾಲ ಶ್ರೀದವಿಠಲ ತ್ರಿಜಗ –
ದ್ವ್ಯಾಪಕ ಸರ್ವ ಪ್ರಾಪಕನ ನೆರೆ ನಂಬು ೨

### ಝಂಪೆತಾಳ

ನವನೀಲನೀರದ ಶಾಮಸುಂದರನ
ಸವಿನೋಟ ಕೂಟ ಬ್ಯಾಟದಿ ಗೋಪಲಲನ
ನಿವಹ ತನ್ಮಯವಾಯ್ತು ನೀನಾದರವನ
ವ್ಯವಹಾರವನುಸುರಿಸುವರೆ ರಮಾಧವನ
ನವವಿಧಭಕುತಿ ಭಾಗ್ಯವ ಪಡಿಯೋ ಪಡೆದಪರೆ
ಶ್ರವಣಮಂಗಳ ಭಾಗವತ ಕೇಳು ಕೇಳುವರೆ
ಕವಿಜನರ ಕರುಣಕ್ಕೀಡಾಗು ಈಡಾಗುವರೆ
ಭುವನದೊಳಗುಳ್ಳ ಪುಣ್ಯತೀರ್ಥಕ್ಷೇತ್ರ
ಅವನಾದರು ಮಾಡು ಪವನಾಂತರಾತ್ಮ
ಶ್ರೀದವಿಠಲ ನಿನ್ನ ಸಾಕುವನು ನಿತ್ಯ ಕೃತಕೃತ್ಯ ೩

### ಅಟ್ಟತಾಳ

ನಾನ್ಯಾಕವನನುಸರಿಸುವೆನೆಂಬಿಯಾ
ನೀ ಬಿಟ್ಟರೆ ಬಿಡಲರಿಯನು ಕೇಳು
ತಾನೆ ತನ್ನರ್ಚನೆಗೊಂಬ ಬಿಂಬ ಮ –
ಹಾನುಭಾವರೆಲ್ಲರು ಬಲ್ಲರು ಕೇಳು
ದೀನನಾಥ ನಮ್ಮ ಶ್ರೀದವಿಠಲನಿ –
ಗೇನೆಂದೆನವನ ಕಾರುಣ್ಯಕೆ ನಮೋ ನಮೋ ೪

### ಆದಿತಾಳ

ಅಂತು ಇಂತು ಈ ಕಲಿಕಾಲದೊಳು
ಸೆಂತರ ಬೀಳದೆ ಬಹು ಕಾಲಾ
ಸಂತೈಸುವ ಸಂತರ ಕಾಲವ ಪಿಡಿ
ಅಂತಕನವರಿಗೆ ನೀ ಪಾಲಾ
ಎಂತಾಗುವಿಯೊ ಆಂತ್ವರದೆ ಬಿಡು
ಭ್ರಾಂತಿಯ ಇನ್ನಾದರು ಬರಿದೆ
ಚಿಂತಿಸದಿರು ತನು ಮನ ಧನ ವನಿತೆಯ –

ರಂತರಿಸುವರಲ್ಲದೆ ನಿನಗೇನು
ಸ್ವತಂತ್ರವಿಲ್ಲ ನಿಜಮಂತ್ರವಿದೆ ಮಾ-
ಹಂತರೊಡೆಯ ಭಗವಂತನ ಮರೆಯದೆ
ಚಿಂತಿಸು ಚಿತ್ಸುಖಮಯನ ನೀ ಚಿಂತಿಸು ೫

## ಜತೆ

ಆತ್ಮಾಂತರಾತ್ಮ ಸರ್ವಾತ್ಮನ ಬಿಡದೆ ಮ –
ಹಾತ್ಮರೊಡೆಯ ಶ್ರೀದವಿಠಲಾತ್ಮನ ನೆರೆನಂಬೋ

## ೨

ಅಯ್ಯೊ ಸಾಕಿದೇನು ಚಂದಾ ಮೈ
ಸೋಕದಿರೆಲೋ ಮುಕುಂದ ಪ

ಗಂಡನುಳ್ಳ ನಿಜ ಗರತೀ ಒಡ-
ಗೊಂಡು ಬದಿಗೆ ಕೈ ತರುತೀ ಬಲು
ಪುಂಡಾಟಗಳ ನೀನೆಸಗುತೀ ೧

ಹೆಚ್ಚು ನುಡಿಯದಿರು ನಂಟು ಕಂಡು
ಹುಚ್ಚು ಮಾಡುವದುಂಟೂ ನಡೆ
ಬಿಚ್ಚದಿರೆಲೊ ಮೊಲೆಗಂಟೂ ೨

ಶ್ರೀದವಿಠಲ ಯದುರಾಯಾ ನಿನ್ನ
ಪಾದಕೆರಗುವೆನಯ್ಯಾ ನಡು-
ಬೀದಿಯೊಳಗೆ ಬಿಡು ಕೈಯ್ಯಾ ೩

## ೩

ಅವನೆ ಧನ್ಯನೆಲಾ ಜಗದೊಳು
ಇವನೇ ಮಾನ್ಯನೆಲಾ ಪ

ಆವ ಪರಿಯಲಿಂದಾದರು ತನ್ನಯ
ಭಾವ ಶುದ್ಧಿಯಲಿ ಭಗವತ್ಪರನಾದವನೆ ಧನ್ಯ ೧

ಆತ್ಮೇಂತರ ಸಂಸ್ಕೃತಿಯೊಳಿದ್ದು
ಸ್ವಾತ್ಮಲಾಭ ಸಿದ್ಧಿಯ ಸಾಧಿಸಿಕೊಂಡವನೆ ೨

ಶ್ರೀದವಿಠಲನ ಸಾಕ್ಷಾತ್ಕರಿಸಿ
ಸಾಧು ಸೇವ್ಯ ಚಿತ್ಸುಖಮಯವಾದುದವನೇ ಧನ್ಯನೆಲಾ ೩

೪

ಎಂದು ಕಾಂಬೆನೊ ನಿನ್ನ ಹೇ ಶ್ರೀನಿವಾಸಾ ಪ

ನಗೆಮೊಗದ ನತಜನ ಬಂಧು ಬಾಬಾರೆನ್ನ ಬಿ –
ಟ್ಟಗಲದಲೆ ಮನ ಮಂದಿರದೊಳಿರು ಮುನ್ನಾದರು ಸುಪ್ರಸನ್ನ
ಮುಂದೆ ಗತಿ ಏನಯ್ಯ ಮುಕುತರ
ಹಿಂದುಳಿದವನಲ್ಲದಲೆ ತನು ಸಂ –
ಬಂಧಿಗಳ ವಶನಾಗಿ ದುರ್ವಿಷ –
ಯಾಂಧಕಾರದಿ ಮುಳುಗಿದೆನೊ ನಾ ಅ.ಪ.

ಹಲವು ಜನ್ಮದ ನೋವಾ ನಾ
ಹೇಳಿಕೊಳಲೇನೆಲವೊ ದೇವರ ದೇವಾ ನೀ –
ನಲ್ಲದಲೆ ಭೂವಲಯದೊಳಿಗಿನ್ನಾವಾ ನಂಬಿದರ ಕಾವ
ಸುಲಭರೊಳಗತಿ ಸುಲಭನೆಂಬುವ
ಅಲವಬೋಧಮತಾನುಗರು ಎನ –
ಗೊಲಿದು ಪೇಳಲು ಕೇಳಿ ನಿಶ್ಚಂ –
ಚಲದಿ ನಿನ್ನನೆ ಧೇನಿಸುವೆ ನಾ
ಕಲುಷ ಸಂಸ್ಕಾರಗಳ ವಶದಿಂ
ಹೊಲಬುಗಾಣದೆ ಹರುಷಗುಂದುವೆ
ಹೊಲೆ ಮನದ ಹರಿದಾಟ ತಪ್ಪಿಸಿ
ನೆಲೆಗೆ ನಿಲ್ಲಿಸದಿರ್ದ ಬಳಿಕಿನ್ನೆಂದು ೧

ಭಾರತೀಪತಿಪ್ರೀಯಾ ಎಂದೆಂದು ಭಕುತರ
ಭಾರ ನಿನ್ನದೊ ಜೀಯಾ ಜಗವರಿಯೆ ಕರುಣಾ –
ವಾರಿಧಿಯೆ ಪಿಡಿ ಕೈಯ್ಯಾ ಫಣಿರಾಜಶಯ್ಯಾ
ತಾರಕನು ನೀನೆಂದು ತಿಳಿಯದ
ಕಾರಣದಿ ಸುಖ ದುಃಖಮಯ ಸಂ –
ಸಾರ ದುಸ್ತರ ಶರಧಿಯೊಳು ನಾ
ಪಾರಗಾಣದೆ ಪರಿದು ಪೋಪೆನೊ
ದೂರನೋಳ್ಪದು ಧರ್ಮವಲ್ಲವೊ
ದ್ವಾರಕಾಪುರನಿಲಯ ಪರಮೋ –
ದಾರ ತನುವೆಂದೆನ್ನ ಪಾಲಿಗೆ
ಬಾರದಲ್ಲದೆ ಭವವಿಮೋಚನ ೨

ವಿಕಸನಾರ್ಚಿತಪಾದ ವಿಶ್ವೇಶ ಜನ್ಮಾ –
ದ್ಯಖಿಲ ಕಾರಣನಾದ ನಿರ್ದೋಷ ಸತ್ಯಾ –
ಸುಖಗುಣಾರ್ಣವ ಶ್ರೀದವಿಠಲಪ್ರಸೀದ
ಸಕಲ ಕ್ರಿಯ ಯೋಗಗಳು ತನು ಬಂ–
ಧಕವು ನಿನಗೊಪ್ಪಿಸದಿರಲು ಎನೆ
ನಿಖಿಳ ಜೀವರ ಭಿನ್ನ ನಿನ್ನಯ
ಯುಕುತಿಗೆ ನಮೊ ಎಂಬೆನಲ್ಲದೆ
ಯುಕುತ ಯುಕ್ತಿಗಳೊಂದರಿಯದ –
ರ್ಭಕನ ಬಿನ್ನಪ ಸಲಿಸಿ ನವವಿಧ
ಭಕುತಿ ಭಾಗ್ಯವ ಕೊಟ್ಟು ತವ ಸೇ –
ವಕರ ಸೇವಕನೆನಿಸದಿರ್ದೊಡೆ ೩

## ೫

ಏನಿದು ಕೌತುಕವೋ ವಿಠಲಾ
ಏನಿದು ಕೌತುಕವೋ ಪ

ಏನಿದು ಕೌತುಕ ಪಂಢರಿಯನೆ ಬಿಟ್ಟು
ನೀನಿಲ್ಲಿಗೆ ಬಂದ್ಯ ವಿಠಲಾ ಅ.ಪ.

ಮಿಥ್ಯಾವಾದಿಗಳು ನಿನ್ನ ಸುತ್ತುಮುತ್ತಿಕೊಂಡು
ಅತ್ತು ಕರೆದು ಕೂಗುತ್ತಿರೆ ಬಹು ಬ್ಯಾಸತ್ತು ಬಂದೆಯಾ ವಿಠಲ ೧

ಮಧ್ವದ್ವೇಷಿಗಳು ಮಾಡುವ ಪದ್ಧತಿಯನು ಕಂಡು
ಹೃದ್ಯವಾಗದೆ ಕದ್ದ ಕಳ್ಳನಂತೆದ್ದು ಇಲ್ಲಿಗೆ ಬಂದ್ಯಾ ವಿಠಲಾ ೨

ಶ್ರೀದವಿಠಲ ನಿಮ್ಮ ಸದ್ಗುಣ ವೇದಶಾಸ್ತ್ರದಲ್ಲಿ
ಶೋಧಿಸಿ ನೋಡುವ ಭೂದೇವರಿಗೊಲಿದಾದರಿಸಲು
ಬಂದ್ಯಾ ವಿಠಲಾ ೩

## ೬

ಓ ಎನ್ನಬಾರದೆ ಓಂಕಾರ ಪ್ರತಿಪಾದ್ಯ ಪ

ಕರಿರಾಜ ಕರೆಯಲು ತ್ವರಿತದಿಂದಲಿ ಬಂದು
ಪೊರೆಯಲು ನಿನಗವ ಮರಿಮಗನೇನೋ ೧

ಅಂದು ಅಜಾಮಿಳ ಕಂದನ ಕರೆಯಲು
ಬಂದು ಸಲಹಿದೆ ಬಂಧು ನೀನವಗೇನೋ ೨

ಕರುಣಾಸಾಗರ ದೊರೆ ಶ್ರೀದವಿಠ್ಠಲ
ಕರವ ಮುಗಿದು ಕೂಗೆ ಬರದಿರೆ ಘನವೇನೋ ೩

## ೭

ಜಯ ಜನಕಜಾಪತೇ ರಾಮಾ ಜಯ ಪ

ಜನಕಜಾಪತೇ ಜಲದಶ್ಯಾಮಾ
ಜಯರಘುವಂಶಲಲಾಮ ಅ.ಪ.

ಮದನಜನಕ ಮಧುಕೈಟಭ ಭೀಮ
ಮದನ ಬಿಂಬಾರ್ಚಿತ ಕಾಮಾ ೧

ರಾಮಚಂದ್ರ ರಘುವೀರ ಜಾನಕೀರಾಮ
ರಾವಣವೈರಿ ಶ್ರೀರಾಮಾ ೨

ಸಾಮಜವರದ ವಿನುತ ಸೋಮ
ಶ್ರೀದವಿಠಲ ಗುಣಧಾಮ ೩

## ೮

ತಾರಕ ನೀನೇ ಹರಿ ಮುರಾರಿ ಪ

ಉದಕದಿ ನಕ್ರನು ಪದವೆಳೆಯಲು ನೊಂದು
ಮದಗಜ ಹರಿಯನ್ನೆ ಮುದದಿ ಪೊರೆದ ಕಾರಣ ೧

ತುಂಬಿದ ಸಭೆಯಲಿ ಮಾನ ಕೊಂಬುದ ಕೇಳಿ
ನಂಬಿದ ದ್ರೌಪದಿಗಂಬರವಿತ್ತ ಕಾರಣ ೨

ಶ್ರೀದವಿಠ್ಠಲ ನಿನ್ನ ಪಾದಪೂಜಿಸಲರಿಯೆ
ಆದರದಿ ಅಜಾಮಿಳನನ ಕಾಯ್ದ ಕಾರಣ ೩

## ೯

ತಾರೆನ್ನ ಹುಂಡಿ ರಂಗ
ತಾರೆನ್ನ ಹುಂಡಿ ಪ

ಅತ್ತರೇನು ಕಂಗಳಿಂದ
ಮುತ್ತುದುರುವುದಿಲ್ಲ
ಮತ್ತೆ ನಮ್ಮ ಮೇಲೆ ಹುಂಡಿ
ಹೊತ್ತರೆ ನೀ ಬಿಟ್ಟೆಯೇನೊ ೧

ವಾರಿಜಾಕ್ಷ ನಿನ್ನ ಬಿಡು –
ವರೆಯೇನೋ ಬೆನ್ನ ಮೇಲೆ
ಹಾರಿ ಹೊತ್ತು ಕೊಂಡು ಭಾರ
ಹೇರದೆ ನೀ ಬಿಟ್ಟೆಯೇನೊ ೨

ತೊಟ್ಟಿಲ ಹೋಗೆಂದರೆ
ಸಿಟ್ಟು ಮಾಡುವಿಯೋ ಶ್ರೀದ–
ವಿಠಲನ್ನ ಕೂಡಾಡದೆ ನೀ
ಬಿಟ್ಟರೆ ನಾವು ಬಿಡುವರಲ್ಲ ೩*

## ೧೦

ದೀನಬಂಧೋ ಹೇ ಭಲಾ ನೀನೆ ಸೈ ಸೈಯಲಾ ಪ

ಪಾಸಲೆ ಶರಣರ ಪೊರೆವದಕಿನ್ನು ಬ್ಯಾಸರೇನಿಲ್ಲಲಾ ೧

ದುಷ್ಟರ ದಂಡಿಸಲಾ ಮನಸಿಗೆ ಹುಟ್ಟಿದೆ ಕಲಕಲಾ ೨

ಬಿಡದೆ ಶ್ರೀದವಿಠಲಾ ಎನ್ನೊಳು ಮಾಡಿದೆಲೋ ಛಲಾ ೩

## ೧೧

ನಾರಾಯಣ ಗೋವಿಂದ ಹರಿ ಹರಿ ನಾರಾಯಣ ಗೋವಿಂದ ಪ

ನಾರಾಯಣ ಗೋವಿಂದ ಮುಕುಂದ ಪರತರ ಪರಮಾನಂದ ಅ.ಪ.

ಮಚ್ಛರೂಪಿಲಿ ಹೆಚ್ಚಿದ ದೈತ್ಯರ ತುಚ್ಛಿಸಿ ವೇದವ ತಂದ ಹರಿ ೧

ಸ್ವಚ್ಛಮಂದರ ಯದೃಚ್ಛದಿ ಮುಣುಗಲು ಕಚ್ಛಪ
ವೇಷದಿ ನಿಂದಾ ಹರಿ ೨

ಶ್ರೀಕರ ಹರಿ ಭೀಕರ ದಿತಿಜರ ಸೂಕರ ರೂಪಿಲಿ ಕೊಂದಾ ಹರಿ ೩

ಶಂಬರಾರಿಪಿತ ಕಾಂಬು ಚಕ್ರಧರ ಕಂಬವ ಭೇದಿಸಿ ಬಂದ ಹರಿ ೪

* ಟಿಪ್ಪಣಿ : ಇದೇ ಹಾಡಿನ ಪಲ್ಲವಿಯು 'ತಾರೊ ನಮ್ಮ ಬಂಡಿಯ ಗೋಪಾಲಕೃಷ್ಣ' ಇದೆ. ಎರಡರ ತಾತ್ಪರ್ಯ ಒಂದೇ.

ಶ್ಯಾಮರೂಪ ಗುಣಧಾಮ ಹರಿಯು ತಾ .
ವಾಮನ ರೂಪಿಲಿ ನಿಂದಾ ಹರಿ ೫

ಕ್ಷತ್ರಕುಲವ ನಿಕ್ಷತ್ರಮಾಡಲು ಭೃಗು ಪುತ್ರನಾಗಿ ತಾ ನಿಂದಾ ಹರಿ ೬

ದಶರಥಸುತ ಹರಿ ದಶಮುಖನಳಿದು ಕುಶಲದಿ ಸೀತೆಯ
ತಂದಾ ಹರಿ ೭

ನಂದಗೋಪನ ಕಂದನು ಬಹು ಗೋವೃಂದದೊಳಗೆ
ತಾ ನಿಂದಾ ಹರಿ ೮

ಅಂಗನೆಯರ ವ್ರತಭಂಗ ಮಾಡಲನಂಗ ಜನಕ ತಾ ಬಂದಾ ಹರಿ ೯

ದುಷ್ಟರನಳಿದು ಶಿಷ್ಟಜನರ ಪರಮೇಷ್ಟಿ ಎನಿಸಿ ತಾ ನಿಂದಾ ಹರಿ ೧೦

ಶ್ರೀದವಿಠಲ ಕರುಣದಿಂದಲಿ ನಂದತತಿ ಸಲಹುವೆನೆಂದಾ ಹರಿ ೧೧

## ೧೨

ನೋಡು ನೋಡು ನಾರೀಮಣಿಯೆ ಪ

ನೋಡು ನೋಡು ನಿನ್ನಾ ಕಣ್ಮನ ದಣಿಯಾ ಅ.ಪ.

ಮುದ್ದು ಸೂಸುವ ಸಲೆ ಮುಗುಳ್ನಗೆ ಮೊಗವಾ
ತಿದ್ದಿದ ಕಸ್ತೂರಿ ತಿಲಕದ ಫಣಿಯಾ ೧

ಸಾರ ಗಂಭೀರ ಶೃಂಗಾರ ವಿಹಾರಾ
ಚಾರು ಸೌಂದರ್ಯವೈಯ್ಯಾರ ಸುಗುಣಿಯಾ ೨

ಶ್ರೀದವಿಠ್ಠಲ ಸಾಕ್ಷಾತ್ತ್ರಿಜಗನ್ಮಯಾ
ಇಂದ್ರಶರಾ ಜಗನ್ಮೋಹನ ಖಣಿಯಾ ೩

## ೧೩

ನೋಡು ನೋಡೆಂಥಾ ರಘುವೀರ ದೀನೋದ್ಧಾರ ಪ

ತನು ಮನ ಧನಗಳ ತನಗೊಪ್ಪಿಸದೆ
ನೆನೆವ ಮನುಜರಿಗೆ ದೂರಾದೂರಾ ೧

ಸೇರಿದ ಸುಜನರ ದೂರುವ ದುರುಳರ
ಬೇರಿಗೆರೆವ ಬಿಸಿ ನೀರಾ ನೀರಾ ೨

ಶ್ರೀದವಿಠಲ ನಿಜಪಾದಾಶ್ರಿತರಪ–
ರಾಧವ ಮನಸಿಗೆ ತಾರಾ ತಾರಾ ೩

## ೧೪

### ಸುಳಾದಿ

#### ತಾಳ–ಝಂಪೆ

ನೋಡುವರೆ ನೀರದಶ್ಯಾಮಸುಂದರ ಮೂರ್ತಿ
ಪಾಡುವರ ಪರಮಪಾವನ್ನ ಕೀರ್ತಿ
ಕೂಡುವರೆ ಕೇವಲಾನಂದ ಚಿನ್ಮಯಗಾತ್ರ
ನೀಡುವರೆ ನಿಖಿಳಲೋಕೈಕಪಾತ್ರ
ನೋಡಿ ನಮಿಸುವರುಂಟು ಪಾಡಿಹಿಗ್ಗುವರೂಟ
ಕೂಡಿ ಸುಖಿಸುವರುಂಟು ನೀಡಿ ನಲಿವವರುಂಟು
ನೋಡಿಸುತ ಪಾಡಿಸುತ ಕೂಡಿಸುತ ಬೇಡಿಸುತ
ನಾಡದೈವಂಗಳ ಕೊಂಡಾಡಿಸದಲೆ
ಬೇಡಿದಿಷ್ಟವ ಕೊಡುತ ಶ್ರೀದವಿಠಲ ದಯ –
ಮಾಡಿ ನಮ್ಮನು ಪೊರೆವ ರೂಢಿಗೊಡೆಯ
ನಾಡದೈವಂಗಳ ಕೊಂಡಾಡಿಸದಲೆ ೧

### ತಾಳ–ಮಟ್ಟ

ಸಕಲ ಶ್ರುತಿನಿಕರಸಾರಹೋ
ಶುಕಮಹಾಮುನೀಂದ್ರ ಸನ್ನುತ
ಪ್ರಕಟ ಮಾಡಲ್ಯಾಕೆ ನಿನ್ನನು ಪರಮಪುರುಷ
ಪ್ರಕಟಮಾಡಲ್ಯಾಕೆ ನಿನ್ನನು
ಭಕ್ತವತ್ಸಲನೆಂಬೆನಲ್ಲದೆ
ಮುಕುತವಂದ್ಯ ಶ್ರೀದವಿಠಲ
ಯುಕುತಾಯುಕುತವೊಂದನರಿಯದೆ
ಪ್ರಕಟಮಾಡಲ್ಯಾಕೆ ನಿನ್ನನು ೨

### ತಾಳ–ತ್ರಿವಿಡಿ

ಆಯನುಭವ ಭಯ ಲಯವರ್ಜಿತ
ನಯನೋತ್ಸಹಕಾರಕ ತಾರಕ
ಜಯಮಂಗಳ ಮಂಗಳ ಮಂಗಳ
ಮಾಯಾ ಮಾಮರ ದೇವರಾಟ
ಸಯವೇ ಸ್ವೈ ಶ್ರೀದವಿಠಲ ನಿ
ನ್ನಯ ಚರಣಕೆ ನಮಿಸುವೆ ನಮಿಸುವೆ
ಜಯ ಮಂಗಳ ಮಂಗಳ ಮಂಗಳ
ಮಾಯಾ ಮಾಮರ ದೇವರಾಟ ೩

### ತಾಳ–ಅಟ

ಬಾರೋ ಬಾರೋ ಭವದೂರ ದೀನಜನ
ಭಾರ ನಿನ್ನದಯ್ಯಾ ಅಯ್ಯಯ್ಯಾ
ಸಾರಿದೆನೊ ನಾ ನಿನ್ನ ಸಾರಿದೆನೊ ನಿನ್ನ ೪

### ತಾಳ–ಆದಿ

ಶ್ರೀರಮಣ ಶ್ರೀದವಿಠಲ ಸಂ –
ಸಾರಕಂಜಿ ನಿಜ ಚಾರು ಚರಣಗಳ ಸಾರಿದೆನೊ ನಿನ್ನ

ಶಿರಿಗುರವಿತ್ತೆ ಪರಮನ ಪೆತ್ತೆ
ಗಿರಿಜೇಶಗೆ ನಿನ್ನ ಮೈ ಇತ್ತೆ
ಶರಣಾಗತವತ್ಸಲ ಕರುಣಾಕರ ಶ್ರೀದವಿಠಲ
ಸರಿಬಂದರೆ ಸಾಕುವದೆಮ್ಮನು
ಶರಣಾಗತವತ್ಸಲ ೫

**ಜತೆ**

ಸೋಲು ಶ್ರೀದವಿಠಲ ಸೋಲು ಗೆಲುವು ನಿನ್ನ
ಪಾಲಿಗೆ ಬಂದಿರೆ ಪಾಲಿಸೆಮ್ಮನು ಬಿಡದೆ

## ೧೫

ಭಯಕೃದ್ಭಯಹಾರೀ ರಾಧಾನಯನ ಮನೋಹಾರೀ ಪ

ತಾಪತ್ರಯ ಪರಿಹಾರಕ ರಂಗಾ
ಗೋಪೀಜನ ಹೃತ್ಪದ್ಮ ಪತಂಗಾ ೧

ಸುಂದರ ಸುಸ್ಮಿತಶೋಭಿತ ವದನಾ
ಮಂದರಧರ ಮಾಧವ ಜಿತಮದನಾ ೨

ದುಷ್ಟಕುಲಾಂತಕ ಈ ಧರೆಯೊಳು ಶ್ರೀದ -
ವಿಠಲ ವಿಧಿಭವವಂದಿತ ಪಾದಾ ೩

## ೧೬

ಯದುಪತಿ ನಮಗಾಗಲಿ । ನಿನ್ನಲಿ ರತಿ ಪ

ತನುಮನ ಧನ ನಿನಗೊಪ್ಪಿಸಿ ನಲಿವಾ
ಅನುಭವಿಗಳ ಸಂಗತೀ ೧

ಶರಣಾಗತ ಪರಿಪಾಲಕನೆಂದೂ
ಮರೆಯದೆ ಇಂಥಾ ಮತಿ ೨

ಸ್ವಾಂತ ಧ್ವಾಂತ ಶ್ರೀದವಿಠಲಾ ।
ಪ್ರಾಂತಕೆ ನೀನೇ ಗತೀ ೩

## ೧೭

ರೂಪ ತೋರಿಸೊ ರಂಗ ನಿಜರೂಪ ತೋರಿಸೋ ಪ

ರೂಪ ತೋರಿಸೋ ರತಿಪತಿ ಜನಕ
ಗೋಪ ಮನೆಗೆ ಬರುವ ತನಕ ಅ.ಪ

ಕೇವಲ ಕಲ್ಪದ್ರುಮನಹುದೆಂದು
ಭಾವಿಸುವೆನೋ ನೀನಿಂದು ೧

ಅಣು ಮಹದ್ಘಟನಾಘಟಿತ ಚತುರನೆ
ಪ್ರಾಣತ ಕಾಮದನು ನೀನೇ ೨

ಶ್ರೀದವಿಠಲ ಶರಣು ಎನೆ ಕೇಳೋ
ಪಾದಕ್ಕೆರಗುವೆ ಕೃಪಾಳೋ ೩

## ೧೮

ವೆಂಕಟೇಶ ನೀನೆ ಧೊರೀ ಧೊರೀ ಪ

ಸಂಕಟವೆಲ್ಲವ ಪರಿಹರಿಸುವಂಥ ಅ.ಪ.

ಎತ್ತಿನ ಪೆಸರುಳ್ಳ ಮತ್ತ ರಕ್ಕಸನ್ನ
ಕುತ್ತಿಗೆ ಕೊಡಲುತ್ತಮ ಪದವಿತ್ತೆ ೧

ಅಂಜನೆಯೆಂಬೊ ಮಂಜುಕಿಸಾಲಿಯ [?]
ಅಂಜದೆ ತಪಿಸಲು ಸಂಜೀವನವಿತ್ತೆ ೨

ಸಾಸಿರ ಮುಖವುಳ್ಳ ಶೇಷನಹಂಕಾರ
ಸ್ವಸನನ ಕೈಯಿಂದ ನಾಶಮಾಡಿಸಿದಂಥ ೩

ಮಾಧವ ಮಾದಿಗ ಹಾದಿಯ ಮೆಟ್ಟಲು
ಮೋದದಿಂದುದ್ಧರಿಸಿದೆ ಮಾಧವ ಅವನನ್ನು ೪

ಶ್ರೀದವಿಠಲ ನಿನ್ನ ಪಾದಾಶ್ರಿತರ
ಮೋದದಿ ಸಲಹೊ ಆದರಿಸೆನ್ನನು ೫

## ೧೯

ಸುಖಪರವಯ್ಯಾ ಶ್ರೀಹರಿಲೀಲೆ
ಆ ವೈಜಯಂತಿ ಕೌಸ್ತುಭ ವನಮಾಲಾ
ಪಾವನವಕ್ಷವಿಶಾಲ
ಶ್ರೀವತ್ಸಾಂಕನ ದಾವನಕೊರಳೊಳು
ಕೇವಲ ಗುಂಜಾಮಾಲಾ
ತ್ರಿಜಗಜ್ಜನ್ಮಾದಿಗಳಿಗೆ ಮೂಲಾ
ಜನಾರಿಗೆನಿಸುವ ಕಾಲಾ
ಭಜಿಪರ ಭಾಗ್ಯೋದಯಕಾನಂದ
ವ್ರಜದೊಳೀಗೋಪಿಯ ಕಂದಾ
ಶ್ರೀದವಿಠಲ ಕೇಳು ಸುರತಸುಶೀಲಾ
ರಾಧಾಮನೋನುಕೂಲಾ
ಸಾಧಿಸಿ ವೃಂದಾವನದಲ್ಲಿ ಪೊಂಗೊಳ
ಲೂದುವ ಗಾನವಿಲೋಲ

## ೨೦

ಹರಿಯ ಸ್ಮರಣೆ ಮಾಡೋ । ನಿರಂತರ ಪ

ಮೊದಲು ತೋರುತಿದೆ ಮಧುರ ವಿಷಯ ಸುಖ
ತುದಿಗೆ ದುಃಖಾ ಅನೇಕಾ ೧

ದಾನ ಮಾನ ಬಹು ದಯಾ ಧರ್ಮತೋ
ಜ್ಞಾನವೆ ಮಖ್ಖರ [?] ದೇಕೋ ೨

ತಾರಕ ಭವಭಯಹಾರ ಕೊನಿಗೇ
ಶ್ರೀದವಿಠ್ಠಲನೆ ಕೇಳೋ ೩

## ಆ ಬಾಲಗೋಪಾಲ ವರ್ಣನೆ

## ೨೧

ಆಡ ಹೋಗುವಾ ಬಾರೊ ರಂಗಾ ಪ

ಆಡ ಹೋಗುವಾ ಬಾರೊ ರಂಗಾ
ಕೂಡಿ ಕಾಳಿಂದೀ ತೀರದಲ್ಲಿ
ನಾಡ ಗೊಲ್ಲರ ಹೆಂಗಳಿಗೆಲ್ಲ
ಬೇಡಿದಿಷ್ಟಾರ್ಥಗಳ ಕೊಡುವಾ ಅ.ಪ.

ಆಣಿಕಲ್ಲು ಗೋಲಿ ಗಜ್ಜುಗ
ಚಿಣ್ಣಿಕೋಲು ಚಂಡು ಬುಗುರಿ
ಕಣ್ಣುಮುಚ್ಚಾಲೆ ಕುಂಟಹಲಿಪೆ
ಬಣ್ಣ ಬಣ್ಣದಾಟಗಳನು ೧

ಸೋಲುಗೆಲವಿಗೆಲ್ಲ ನೀನೆ
ಪಾಲುಗಾರನಾಗಿ ನಮ್ಮ
ಮೇಲೆ ಮಮತೆ ಇಟ್ಟು ಸಾನು –
ಕೂಲನಾಗಿ ಕೈಯ್ಯ ಪಿಡಿಯೋ ೨

ಮೆಟ್ಟು ಮೆಟ್ಟು ಕೋಲು ಕೈಲಿ
ಕಟ್ಟು ಬುತ್ತಿ ಕೊಳಲು ಕಂಬಳಿ
ಧಿಟ್ಟ ಗೋವಳರಾಮ ಶ್ರೀದ –
ವಿಠಲಯ್ಯ ಯಾಕೆ ತಡವೋ ೩

## ೨೨

ಉದಯಕಾಲದೊಳೆದ್ದು ಗೋಪಿಯು
ದಧಿಯ ಮಥಿಸುವ ಎಂಬ ಸಮಯದಿ
ಉದರಗಣ್ಣನು ಎದ್ದು ತೊಟ್ಟಿಲೊಳ್
ತೊದಲು ನುಡಿಗಳಿಂ ಕರೆದ ತಾಯಿಯ ೧

ನುಡಿಯ ಲಾಲಿಸಿ ನಳಿನನೇತ್ರನು
ಕರೆದ ಹಾಲನು ಕೊಡುವೆನೆಂದರೆ
ಕೊಡುವೆನೆಂದರೆ ಕಣ್ಣಮುಚ್ಚನು
ಒಡನೆ ಮಲಗುವ ಮಲಗದೇಳುವ ೨

ನಿದ್ರೆ ತೀರದೆ ನೀ ಎದ್ದ ಕಾರಣ
ಬುದ್ಧಿ ಸಾಲದು ಮುದ್ದು ಮಗುವಿಗೆ
ಒದ್ದು ಕೆಲಸವ ತಿದ್ದಿ ಉನ್ನತ
ಅಮ್ಮ ಬಾರೆಲೆ ಎನ್ನಗಲಬೇಡವೆ ೩

ಗುಮ್ಮ ಬರುತದೆ ಗುಸುಗುಸೆನುತದೆ
ಶ್ರೀದವಿಠಲನಾ ಶ್ರೀಲತಾಂಗಿಯು
ಮೋದಪಡಿಸುವ ಮಾನವೀಯಳೇ
ವೇದಗೋಚರ ನೀ ಏಳಬೇಡವೋ
ಪಾದಕೆರಗುವೆ ಪವಡಿಸೆಂದಳು ೪

## ೨೩

ಎಲ್ಯಾಡಿ ಬಂದ್ಯೋ ಮುದ್ದು ರಂಗಯ್ಯಾ ನೀ – *
ನೆಲ್ಯಾಡಿ ಬಂದ್ಯೋ ಎನ್ನ ಕಣ್ಣ ಮುಂದಾಡದೆ ಪ

ಆಲಯದೊಳಗೆ ನೀನಾಡದೆ ಬೆಣ್ಣೆ
ಪಾಲು ಸಕ್ಕರೆಯನೊಲ್ಲದೆ ಚಿಕ್ಕ
ಬಾಲೇಯರೊಳು ನೀನಾಡದೆ
ಬಾಲಯ್ಯ ನೀಯೆನ್ನ ಕಣ್ಣ ಮುಂದಾಡದೆ ೧

ಬಿಟ್ಟ ಮುತ್ತಿನ ಬೊಗಸೆ ಕಂಗಳು
ಫಣಿಯೊಳಿಟ್ಟ ಕಸ್ತೂರಿ ತಿಲಕ ಗಂಧವು
ದಿಟ್ಟತನದಿ ಬರುವ ಅಂದವು ಮುದ್ದು
ಕೃಷ್ಣ ನೀಯೆನ್ನ ಕಣ್ಣ ಮುಂದಾಡದೆ ೨

ಅಷ್ಟದಿಕ್ಕಲಿ ಅರಸಿ ಕಾಣದೆ ಬಾಳ
ದೃಷ್ಟಿಗೆಟ್ಟೆನೊ ನಿನ್ನ ನೋಡದೆ –
ನ್ನೆಷ್ಟು ಪೇಳಲಿ ಹೇಳಬಾರದೆ ಶ್ರೀದ –
ವಿಠಲ ನೀಯೆನ್ನ ಕಣ್ಣ ಮುಂದಾಡದೆ ೩*

## ೨೪

ಕೇಳಿದ್ಯಾ ಈ ಕೌತುಕ ಕೇಳಿದ್ಯಾ
ಕೇಳಿದ್ಯಾ ಕೌತುಕವನ್ನು ಈಗ ಪ

ಪೇಳುವೆ ನಾ ನಿಮಗಿನ್ನು ಆಹಾ
ಹೇಳಾದೆ ಮಧುರೆಗೆ ಜಾರ ಚೋರ ಕೃಷ್ಣ ಅ.ಪ.

ಕರೆಯೆ ಬಂದಿಹನೊಬ್ಬ ಚೋರಾ ತನ್ನ
ಕಿರಿಯಯ್ಯನಂತೆ ಅಕ್ರೂರಾ
ಊರ ಹೊರ ಹೊಳಿಯಲಿ ಬಟ್ಟ ತೇರಾ ಆಹಾ
ಹಿರಿಯನೆಂದು ಕಾಲಿಗೊರಗೋರಾ

* ಈ ಕೀರ್ತನೆ ಶ್ರೀಪಾದರಾಜರ 'ರಂಗವಿಠಲ' ಅಂಕಿತದಲ್ಲೂ ಇದೆ.

ರಾಮಕೃಷ್ಣರ ಭರದಿ ಅಪ್ಪಿಕೊಂಡು
ಮರುಳು ಮಾಡಿದ ಸುದ್ದೀ ೧

ಸೋದರಮಾವನ ಮನೆಯೊಳ್ ಬೆಳ –
ಗ್ಗಿದ ನಾಳಿನ ದಿನದೊಳ್ ಕೃಷ್ಣ
ಪೋದರೆ ನೆರೆದ ಜನರೊಳ್ ಆಹಾ
ಕಾದುವ ಮಲ್ಲರ ಮೇಲ್ವಾರ ಬಿಲ್ಲಬ್ಬ
ಸಾಧಿಸಿ ಸಮಯಕ್ಕೆ ಹೋದೆವೆಂಬ ಅರ್ತಿ ೨

ಹುಟ್ಟಿದ ಸ್ಥಳವಂತೆ ಮಧುರೀ ಕಂಸ –
ನಟ್ಟುಳಿಗಾಗಿ ತಾ ಬೆದರೀ ಇ –
ಲ್ಲಿಟ್ಟಳಾತನ ತಂಗಿ ಚದುರೀ ತೋರಿ
ಕೊಟ್ಟರೆ ತನ್ನನು ಬೆದರೀ ಆಹಾ
ಇಷ್ಟು ಸ್ನೇಹವು ಶ್ರೀದವಿಠಲ ಮಾವನ
ಭೆಟ್ಟಿಗಾಗಿ ಒಡಂಬಟ್ಟು ಹೋಗುವನಂತೆ ೩

## ೨೫

ಕೊಳಲನೂದೋ ಇನ್ನೊಮ್ಮೆ ರಂಗಯ್ಯಾ
ಕೊಳಲನೂದೋ ಇನ್ನೊಮ್ಮೆ ಕೃಷ್ಣಯ್ಯಾ ಪ

ಕೊಳಲನೂದೋ ದ್ವಾರಕಾ ಪುರನಿಲಯಾ ಅ.ಪ.

ಎಡಹೆಗಲಲ್ಲೆಡಗಲ್ಲಂವ ನೀಡೀ
ಕುಡಿ ಹುಬ್ಬುಗಳಲ್ಲಾಡಿಸುತ್ತ ೧

ಮೃದುತರ ತುದಿ ಬೆರಳಿಂದೊತ್ತುತ
ಮಧುರಾಧರದಲ್ಲಿಟ್ಟು ರಂಗಯ್ಯ ೨

ನಾದ ಮೂರುತಿ ಗೋಪೀಜನಲೋಲಾ
ಶ್ರೀದವಿಠಲ ಗೋಪಾಲಬಾಲ ೩

## ೨೬

ಗಂಡ ಬಂದರೇನೆಲೋ ರಂಗಾ ಯನ್ನ
ಗಂಡ ಬಂದರೇನೆಲೋ ರಂಗ ಪ

ಕಂಡರೆ ಒಗೆತನ ಭಂಗಾ ಯನ ಗಂಡ ಅ.ಪ.

ಬಾಗಿಲ ತೆಗೆಯೆಂದಾರ್ಭಟದಿಂದಲಿ
ಕೂಗುವ ಧ್ವನಿ ಕೇಳ್ಳೈ ಇದಕೋ
ಹ್ಯಾಗೆ ಮಾಡಲಿ ಹಾದಿಯ ಮನೆ ಯೆನ –
ಗಾಗದವರು ಬಂದೀಗ ನಗುವರೆನ್ನ ೧

ನಂದಗೋಕುಲದಿ ನಾನೇ ಗರತಿ –
ಯೆಂದು ಮೆರೆಯುತ್ತರಲೀಗ
ಬಂಧು ಬಳಗದೊಳು ಬಂಡಳಾಗಿಯೆಂ–
ದೆಂದಿಗೂ ತಲೆಯೆತ್ತಿ ತಿರುಗದಂತೆ ಯನ್ನ ೨

ದಕ್ಕಲಿಲ್ಲ ಮನದೊಳಗೆ ಮಾಡಿಕೊಂ –
ಡಕ್ಕರ ತೀರಲಿಲ್ಲ ಮುನ್ನಾ
ಗಕ್ಕನೆ ಗೋವಳ ಬರಬಹುದೆ ಖಳ
ಸಿಕ್ಕಿದೇವಲ್ಲವೊ ಶ್ರೀದವಿಠಲ ಯನ್ನ ೩

## ೨೭

ಗೋಪಿ ಕೇಳ್ ನಿನ್ನ ಮಗ ಬಲು ಜಾರ
ಚೋರ ಸುಕುಮಾರ ಪ

ಮುದದಿ ಮುಕ್ಕುಂದ ಸದನಕ್ಕೆ ಬಂದ
ದಥೀಯ ಮೀಸಲು ಬೆಣ್ಣೆ ತಿಂದ ನಿನ್ನ ಕಂದಾ ೧

ಮಾರನಪಿತ ಮನೆಯೊಳು ಪೊಕ್ಕಾ
ಹಿಡಿಯ ಹೋದರೆ ಸಿಕ್ಕಾ ನೋಡಿ ನಕ್ಕ ಭಾರಿ ಠಕ್ಕ ೨

ಹರೆಯದ ಪೋರಿ ಜರದ ಕಂಗೋರಿ
ಭರದಿಂದ ಸೀರೆಯ ಸೆಳೆದ ಕರವ ಪಿಡಿದ ಮಾನವ ಕಳೆದ ೩

ಬಹಳ ದಿನವಾಯ್ತು ಹೇಳುವ್ಯದ್ಹಾಗೆ
ಗೋಪಾಲನ ಮನಸ್ಸೊಮ್ಮೆ ಹಾಗೆ ಹೀಗೆ ಬೆಚ್ಚಿಬೀಳುವ್ಯದ್ಹ್ಯಾಗೆ ೪

ರಾಧೆಯ ಮನದ ತಾಮೋದ ಮುಕ್ಕುಂದ
ಶ್ರೀದವಿಠ್ಠಲನಾಥ ವೃಂದ ನಯಾನಂದ ೫

## ೨೮

ಜೋ ಜೋ ಜೋ ಮಲಗೋ । ಮುಕುಂದಾ ಪ

ಮುಸುಕು ತೆಗೆಯ ಬ್ಯಾಡೆಲೊ ಮನೆಗೆಲಸಾ
ಹಸನಾಗದು ಗೋಪಾಲ ॥ಕೃಷ್ಣ॥ ೧

ಮೆಲ್ಲನೆ ಮಾತನಾಡುವಿಯಾ ನೋಡುವಿಯಾ
ಸೊಲ್ಲ ಲಾಲಿಸುವಿಯ ಕಂದ ॥ಕೃಷ್ಣ॥ ೨

ತೊಟ್ಟಿಲ ತೂಗುತ ನಿಂತರೆ ಶ್ರೀದ –
ವಿಠಲಾ ನಿನಗಾನಂದಾ ॥ಕೃಷ್ಣ॥ ೩

## ೨೯

## ಲಾವಣಿ ಪದ

ದಾಮ್ಯಾ ದೂರನಿಲ್ಲು ದಾರಿಕಟ್ಟಿ ಬರದಿರು
ಯಾರಿಗಾಗಿ ಮಾರಬಂದೆ ಹಾಲ್ ಮೊಸರಾ ಹೇಳ್ ನಿನ್ನ ಹೆಸರಾ

ದೂರ್ ದೂರಲ್ಲ ಕೋಲ್‌ಕಾರ ಕೃಷ್ಣ ಕೇಳು ಬಾಲೆ
ದಾರಿಯೋಳ್ ಸುಂಕ ಶೋದಗಳುಂಟೂ ಇದು ಏನ್ ಗಂಟು ೧

ಗಂಡನುಳ್ಳ ಬಾಲೆಯರ ದುಂಡಕುಚ ಮುಟ್ಟಲಿಕ್ಕೆ
ಪುಂಡತನ ಬುದ್ಧಿಯಿದು ಥರವೇನೋ ಜೀವಯರವೇನೋ
ಪುಂಡತನ ಬುದ್ಧಿಯಿದು ಥರವೇನೆಂದರೆ
ಹೆಂಡತೆಂತ ಮುಟ್ಟಿದಾಗ ಕುಚಯುಗವಾ ಕಾಣದೆ ನಗುವ ೨

ಯಾಕೆ ಮಾತಾಡುತಿದ್ದಿ ಕಾಕು ಮಾತಾಡುತಿದ್ದಿ
ಸಾಕು ನಿನ್ನ ಮಾತೀಗ ಸಲುಗೇನೋ ನಿನ್ನ ನಗೆ ಏನೋ
ಸಾಕು ನಿನ್ನ ಮಾತೀಗ ಸಲುಗೇನೆಂದರೆ
ಬೇಕು ಬೇಡಿದ್ದು ನಾ ಕೊಡುತೇನೆ ನಿನ್ನಿಡುತೇನೇ ೩

ಕೊಂಡು ಕೊಂಡು ನಡೆಸಲಿಕ್ಕೆ ಶೆಟ್ಟಿಗಾರ ನಾನಲ್ಲ
ನೀನಿಟ್ಟುಕೊಂಡ ಸೂಳೆ ನಾನಲ್ಲ ಹೋಗೋ ನೀನಲ್ಲ ಸಾಗೋ
ಇಟ್ಟುಕೊಂಡ ಸೂಳೆ ನಾನಲ್ಲ ಹೋಗೆಂದರೆ
ಕಟ್ಟಿಕೊಂಡು ಹೋದೇನು ಒಳತನಕಾ ಬೆಳಬೆಳತನಕಾ ೪

ಒಳತನಕ್ಯಾತಕೆ ಬೆಳತನಕ್ಯಾತಕೆ
ತಾಳಿಯರಿಲ್ಲಾ ಮಾತಿನ ಬೆಡಗಾ ಅಹುದೆಲೊ ಹುಡುಗ
ತಿಳಿಯದಿದ್ದರೆ ನಾ ತಿಳಿಯ ಹೇಳಿಕೊಡುವೆನೆಂದು
ಸೆಳೆದಪ್ಪಿಕೊಂಡ ಶ್ರೀದವಿಠಲ ಬಹುಬಹು ಧಿಟಲಾ ೫

## ೩೦

ಬರುವೆಯೋ ರಂಗಯ್ಯಾ ಮನೆಗೆ
ಬಾರೋ ಹೋಗುವ ಪ

ಬೊಗರಿ ಚಂಡುಗಳ ಕೊಡುವೆನು ಬಂದರೆ
ಬಗೆ ಬಗೆ ಆಟವ ಕಲಿಸಿ ಒಲಿಸುವೆನು ೧

ರಸ ರಸಾಯನಗಳುಣ್ಣಿಸುವೆ ಬಂದರೆ
ಮುಸುಕಿನೊಳಗೆ ಬಚ್ಚಿಟ್ಟುಕೊಂಬುವೆನು ೨

ಶ್ರೀದವಿಠ್ಠಲನೆ ಬಂದರೆ ನಿನಗೆ ।
ಸಾದರದಲಿ ಸವಿಮಾತನ್ಹೇಳುವೆನು ೩

( ಇದೇ ಹಾಡು ಶಬ್ದ ಪಲ್ಲಟಗಳೊಡನೆ ರಂಗಯ್ಯ ರಂಗ ಬಾರೊ...ಮುಂತಾಗಿ
ತಿರುಪತಿ.....ಪ್ರಕಟನೆಯಲ್ಲಿ ಬಂದಿದೆ.)

## ೩೧

ಬಿಡೊ ಬಿಡೊ ಬಡಿವಾರಾ ಬೀರದಿರು
ನಡಿ ನಡಿ ಹೋಗ್ಯೆ ಸಾಕು ಪ

ಗಂಡನುಳ್ಳವಳೆಂದರಿಯದೆ ನೀನೆಂಥಾ
ಪುಂಡಾಟಿಕೆ ಯಾರಿಗೆ ಬೇಕೊ ೧

ತಕ್ಕ ಬುದ್ಧಿ ಹೇಳುವರಿಲ್ಲದೆ ನಿ –
ನ್ನಕ್ಕ ತಂಗಿಯರನೆ ಸೋಕೊ ೨

ಶ್ರೀದವಿಠಲ ಸುಮ್ಮನೆ ಹೋಗದೆ ನಡು
ಬೀದಿಯೊಳಗೆ ಮಾಡೊರೆ ಹೋಕು ೩

## ೩೨

ಮುಚ್ಚದಿರೆಲೊ ಮುರಾರಿ ಕಣ್ಣ ಪ

ಮಂಗಳಕರ ಮಕರಂದ ಸೂಸುತಲಿರೆ
ಕಂಗೊಳಿಸುವರೂ ಕಯ್ಯೂರಿ ಕೃಷ್ಣ ೧

ಮುತ್ತಿನ ಹಾರಾ ಪದಕ ಮುದ್ರಿಕೆಯು
ಒತ್ತುತಲಿಹವೊ ಬೆರಳೂರಿ ೨

ಸುಲಭರರಸ ಕೇಳು ಶ್ರೀದವಿಠಲನ
ಸುಳುವು ಕಂಡೇನು ಬಿಡು ಶೌರಿ ೩

## ೩೩

ಮುಟ್ಟಿಗಿಟ್ಟಿ ನೀ ನಮ್ಮ ಎಲೊ ಎಲೊ ಮುರಾರಿ
ನೀ ನಮ್ಮ ಭೇಘಮ್ಮ [?] ಎಲೊ ಎಲೊ ಪ

ಮಡಿಯನುಟ್ಟು ಮೈತೊಳೆದು ಬಂದಿಹೆವೊ
ಕೊಡಬ್ಯಾಡೆಂಜಲವ ನೀ ಬಹು ತುಂಟಾ ೧

ನಿಜ ಪತಿವ್ರತೆಯರು ನಾವಲ್ಲವೇನೂ
ವ್ರಜವನಿತಾಜನ ಜಾರ ನೀ ಬಲು ಚೋರ ೨

ಸೋದರತ್ತೆ ಮಗ ನೀ ನಮಗಲ್ಲ
ಶ್ರೀದವಿಠಲ ಬಿಡು ಹಾದಿ ಸುಮ್ಮನೆ ಹೋದೀ ೩

## ೩೪

ರಂಗಯ್ಯ ರಂಗ ಬಾರೋ
ಬರುತೀಯ ನಮ್ಮನಿಗೆ ಬಾರೋ ಪ

ಬಂದರೆ ಬುಗುರೀ ಚಂಡುಗಳನೆ ಕೊಟ್ಟು
ಬಗೆ ಬಗೆ ಆಟವ ಕಲಿಸಿ ವಲಿಸುವೇ ೧

ಬಂದರೆ ರಸಾ ರಸಾಯನಗಳನುಣಿಸೀ
ಮುಸುಕಿನೊಳಗೆ ಬಚ್ಚಿಟ್ಟುಕೊಂಬೆನು ಬಾರೊ ೨

ಬಂದರೆ ಶ್ರೀದವಿಠ್ಠಲ ನಿನಗೇ
ಸುಂದರೆ ಸವಿಮಾತಾ ಹೇಳುವರೊಂದು ೩

## ೩೫

ಹೇಳ ಬಂದೇವಮ್ಮಾ ಗೋಪಿ ನಿನಗೆ ದೂರ
ಯಾರ ಮಾತ ಕೇಳವಲ್ಲಾ ರಂಗ ಚೋರ ಪ

ದಿಕ್ಕಡದಿಮ್ಮಿಲೆ ಕೂಡಿಸುವ ಬ್ರಹ್ಮಾಂಡ ನೂರಾ
ಇವನ ಮಹಿಮಾ ತಿಳಿಯದವ್ವಾ ಮಾಯಕಾರ ಅ.ಪ.

ಕಳ್ಳನಾಗಿ ಕಂಣಮುಚ್ಚಿ ಗತಿಯವಲ್ಲನೆ
ವಳ್ಳೇಹೊತ್ತು ಬಂದಿತೆಂದು ಭಾರ ನೆಗಿವ್ಯಾನೆ ೧

ಕ್ವಾರಿಲೆ ಹಾದು ದೈತ್ಯನ ಕೊಂದಾನೆ
ತರಳಗಾಗಿ ಖಂಬದಿಂದ ವಡದು ಬಂದಾನೆ ೨

ಧಾರೂಣಿ ಅಳೆದು ಮೂರಡಿ ಮಾಡಿದ
ಅಂಬೆಯ ಮಗನಾಗಿ ಎಂಥ ಕಾಡಿದ ೩

ರಂಭೆಗಾಗಿ ರಾವಣಗೇ ಅಂಬು ಹೂಡಿದ
ನಂಬೀದ ವಿಭೀಷಣಗೆ ಪಟ್ಟಗಟ್ಟಿದ ೪

ಗೋಕುಲದೊಳಗೆ ಪುಟ್ಟಿ ಬೆಣ್ಣೆ ಮೆದ್ದಾನೆ
ವಸ್ತ್ರವಿಲ್ಲದಂತೆ ತಾ ಬತ್ತಾಲೆ ನಿಂತಾನೆ ೫

ಕುದುರೆಯೇರಿ ಹಾರುತ ಬಂದಾನೆ
ಬೆದರಬೇಡೆಂದು ಶ್ರೀದವಿಠಲ ಅಂದಾನೆ ೬

## ೩೬

ಹ್ಯಾಗಾದರು ನಾ ಬಿಡೆ ಕರೆದೊಯ್ಯೊ ರಾಧಾ ಶ್ರೀ-
ರಂಗನೆ ನೀನ್ಹ್ಯಾಗಾದರು ಪ

ಹವಣಿಸಿ ನೋಡೆ ಬಂದೆನೆಂದೊ ತವ ವದನಾಂಬುಜ ಭೃಂಗನಾ ೧

ಮುಖ ಮುಖ ನಿನ್ನನೆ ನೋಡುವನಿದಕೋ
ಪ್ರಕಟಿತ ಕರುಣಾಸಾಗರಾ ೨

ತೊಟ್ಟಿಲೊಳಗೆ ತರಹರಿಸಲು ಶ್ರೀದವಿಠಲ ದೇವೋತ್ತುಂಗನೇ

## ದೇವತಾ ಸ್ತುತಿ

### ೩೭

### ರಾಧೆ

ತಿಲಕದ ಒಲುಮೆ ಮೇಲು ರಾಧೇ
ನಿನ್ನ ತಿಲಕದೊಲುಮೆ ಪ

ತಿಲಕದೊಲುಮೆ ಹರಿ ಬಂಧ ಒಲುಮೆ
ಘಿಲುಘಿಲುಕುಲು ಗೆಜ್ಜೆ ಕಾಲು ರಾಧೇ ನಿನ್ನ ಅ.ಪ.

ಕುಂಕುಮ ಕರದು ಹಚ್ಚಿ ವಂಕಿ ಬಾಜು ಬಂದಿನಿಟ್ಟು
ಪಂಕಜಾಕ್ಷನೆತ್ತಿಕೊಂಬೊ ತೋಳು ರಾಧೆ ನಿನ್ನ ೧

ಉಟ್ಟುದು ಪೈಠಣಿ ಸೀರೆ ತೊಟ್ಟುದು ಬುಟ್ಟುದ ಕುಪ್ಪಸ
ಮುಟ್ಟಿದರೆ ಮಾಸುವದು ಶಾಲು ರಾಧೇ ನಿನ್ನ ೨

ಕೈಗೆ ಬಂಗಾರದ ಬಳೆ ಕಿವಿಗೆ ಪರಿಜನ ವಾಲೆ
ರಂಗಯ್ಯ ಕರೆದರೆ ನೀ ಹೋ ಎಂಬೊ ರಾಧೆ ನಿನ್ನ ೩

ಮಂಗಳಸೂತ್ರವು ಬೆಳದಿಂಗಳು ಪೊಳೆವಂತೆ
ತೆಂಗು ಬ್ಯಾಳೆ ಮಣಿಯೆಣ್ಣೆ ನೂಲು ರಾಧೆ ನಿನ್ನ ೪

ಪಿಲ್ಯ ಕಾಲುಂಗುರ ಕಿರು ಬಲ್ಯ ಆಣಿಮೆಂಟು
ಧೈರ್ಯದಲಿ ಮೆರೆವ ಗಿಳಿಗೇಲು ರಾಧೆ ನಿನ್ನ ೫

ಚೌರಿ ರಾಗಟಿ ಗೊಂಡೆ ಹೆರಳು ಬಂಗಾರವೂ
ಚಂದಿರ ಪ್ರಫುಲ್ಲ ಮುತ್ತಿನ ಬಟ್ಟು ರಾಧೆ ನಿನ್ನ ೬

ದಿಟ್ಟ ಹಗಲೊಳು ಶ್ರೀದವಿಠಲನ್ನ ಯೇರಿಕೊಂಡು
ಬಟ್ಟ ಬಯಲೊಳಗೆ ಕೇಳೇ ರಾಧೆ ನಿನ್ನ ೭

## ೩೮

### ರುದ್ರದೇವರು

ಶಿವನೆ ನಾ ನಿನ್ನ ಸೇವಕನಯ್ಯ ದುರ್ಮ್ಮಾನ ಬಿಡಿಸಯ್ಯ
ಕವಿಸೇವ್ಯ ಕಪರ್ದಿ ಸುಜನ ಸಹಾಯ ಸಿರಿಧರನರಮಯ್ಯ ಪ

ಭವಮೋಚನ ಭಾಗವತ ಶಾಸ್ತ್ರವನು
ಅವನೀಶಗೆ ಪೇಳ್ದವ ನೀನಲ್ಲವೆ ಅ.ಪ.

ವೈಕಾರಿಕ ತೈಜಸ ತಾಮಸವೆಂಬ ತ್ರೈತತ್ತ್ವಗಳೆಂಬ
ಸಾಕಾರಿ ಶರ್ವಾಣೀಧವ ಸಾಂಬ ಸುರಪಾದ್ಯರ ಬಿಂಬ
ವೈಕಲ್ಯಾಸ್ಪದವನು ಕಳೆದೊಮ್ಮೆಲೆ
ವೈಕುಂಠಕೆ ಕರೆದೊಯ್ಯೊ ಕರಿಗೊರಳಾ ೧

ಮೃತ್ಯುಂಜಯ ಮುಪ್ಪುರಹರ ಮಹದೇವ ದೇವರ್ಕಳ ಕಾವ
ಸ್ತುತ್ಯಾದ್ರಿಜಾಪತಿ ಜತತೀವನದಾವ ದುರಿತಾಂಬುಧಿ ನಾವ
ಕೃತ್ತಿವಾಸ ಉನ್ನತ್ಯವರಾಧಗ –
ಳೆತ್ತಿಣಿಸದೆ ಕೃತಕೃತ್ಯನ ಮಾಡ್ಯೆ ೨

ಗಂಗಾಧರ ಷಣ್ಮುಖ ಗಣಪರ ತಾತ ತ್ರೈಲೋಕ್ಯಖ್ಯಾತ
ಲಿಂಗಾಹ್ವಯ ತಾರಕಹರ ನಿರ್ಭೀತ ಭುವನಾಧಿನಾಥ
ತುಂಗ ಮಹಿಮ ನಿಸ್ಸಂಗ ಹರಿಯದ್ವತೀ
ಯಂಗ ಡಮರು ಶೂಲಂಗಳ ಧರಿಸಿಹ ೩

ಪಂಚಾನನ ಪನ್ನಗಭೂಷಣ ಭೀಮ ಭುವನಾಭಿರಾಮ
ಸಂಚಿಂತನ ಮಾಡುವ ಸಂತತ ನೇಮ ಶ್ರೀರಾಮನಾಮ
ಪಂಚಶರಾರಿ ವಿರಿಂಚಿಕುವರ ನಿ –
ಷ್ಕಿಂಚನರೊಡೆಯನ ಮಂಚಪದಾರ್ಹನೆ ೪

ಸ್ಫಟಿಕಾಭ ಕಪಾಲಿ ಕಾಮಿತಫಲದ ಫಲ್ಗುಣಸಖ ಶ್ರೀದ –
ವಿಠಲಾಶ್ರಯವಿತ್ತಪಮಿತ್ರ ದ್ವಿರದ ಚರ್ಮಾಂಬರನಾದ
ಕುಟಿಲರಹಿತ ಧೂರ್ಜಟಿ ವೃಷಭಕಧ್ವಜ
ನಿಟಿಲನಯನ ಸಂಕಟವ ನಿವಾರಿಸೊ ೫

## ೩೯

### ಶಿವ–ಪಾರ್ವತಿ

ಅಗಜೆ ನಿನ್ನೊಗತನಕೆ ಜಗ ನಗುವುದೇ
ನಗರಾಜ ಈ ಮನೆಯ ಹೊಗಿಸಿದನೆ ಅಕಟಕಟ ಪ

ಹೊಟ್ಟೆಗಿಲ್ಲದೆ ಹೋಗಿ ಹಾಲಾಹಲವನುಂಡ
ತೊಟ್ಟ ತೊಗಲುಡುಗೆ ತಲೆಯೋಡು ಕೈಯ
ಸುಟ್ಟ ಸುಡಗಾಡ ಮನೆ ಅಖಿಲ ಭೂತೇಶ ಬಲು
ಸಿಟ್ಟಿನವನಂಗಸಂಗ ಬಯಸಬಹುದೆ ೧

ಆರುಮೊಗದವನೊಬ್ಬ ಆರ್ತಜನು ಮೊಲೆಪಾಲು
ಕಾರಿ ಕಡುಮುನಿದು ಕಂಡರೆ ಸೇರರು
ಊರಿಗುಪಕಾರಿ ಒಡಲಹರಕ ಗಜಮುಖನು
ನಾರಿ ಮೇನಕೆ ಮಗಳು ಕಂಡು ಹಿಗ್ಗುವಳಯ್ಯ ೨

ಶಿವಶಕ್ತಿ ನಿನ್ನಂಥ ಸೌಭಾಗ್ಯವಂತೆಯಳ
ಭುವನದೊಳಗಾವಲ್ಲಿ ಕಾಣೆನಿನ್ನು
ಕವಿಜನಗಳೇನೆಂದು ಬಣ್ಣಿಸಿದರೊ ತಿಳಿಯೆ
ಭವದೂರ ಶ್ರೀದವಿಠಲರಾಯ ಬಲ್ಲ ೩

## ೪೦

### ಗೌರೀದೇವಿ

ಮಾತಾಡೇ ಎನ್ನ ಮೌನದ ಗೌರೀ
ಯಾತಕಚಲಮನ ಸೋತವನೊಡನೆ
ಮಾತಾಡೇ ಗೌರಿ ಮಾತಾಡೇ ಪ

ನಸುನಗೆ ಮುಖವಿದು ಬಾಡಿ ಕೆಂದುಟಿಯು
ಎಸೆದಿರಲು ನಾನೋಡಿ
ವಸುಧೆಯೊಳಗೆ ನಾ ಜೀವಿಸಲಾರೆ
ಘಸಘಸವ್ಯಾತಕೆ ತುಂಬಿತು ಅರಗಿಣಿ ೧

ಕ್ಷಣ ಬಿಟ್ಟಿರಲಾರೆ ಅಮ್ಮ
ಷಣ್ಮುಖ ಗಣಪರ ತಾಯೆ ನೀ ಬಾರೇ
ವಸುಧೆಯೊಳಗೆ ನಾ ಜೀವಿಸಲಾರೆ
ಘಸಘಸವ್ಯಾತಕೆ ತುಂಬಿತು ಅರಗಿಣಿ ೨

ಕ್ರೋಧವ್ಯಾತಕೆ ಎನ್ನೊಳು ಗೌರೀ ಏನಪ-
ರಾಧವು ಇದ್ದರು ತಾಳೇ
ಶ್ರೀದವಿಠಲನ ಪಾದ ಕಿಂಕಿಣಿಯೇ
ಆದರಿಸುವೆ ನಾ ಆದರಿಸುವೆನೇ ೩

## ೪೧

### ಭಾಗೀರಥಿ

ಭಾಗೀರಥೀ ದೇವಿ ಭಯ ನಿವಾರಣ ಗಂಗೆ
ಸಾಗರ ನಿಜರಾಣಿ ಸಕಲ ಕಲ್ಯಾಣಿ ಪ

ಒಮ್ಮೆ ಶ್ರೀವಿಷ್ಣು ಪಾದದಲಿ ಉದ್ಭವಿಸಿದೇ
ಬ್ರಹ್ಮನ ಕರ ಪಾತ್ರೆಯಲ್ಲಿ ಬಂದೆ

ಒಮ್ಮೆ ನಾರಾಯಣನ ಪಾದ ತೀರ್ಥವಾದಿ
ಬ್ರಹ್ಮಾಂಡವೆಲ್ಲ ಪಾದನ್ನವೆಂದಿನಿಸಿದೆ ೧

ದೇವಿ ನೀ ವಿಷ್ಣು ಪಾದದಲಿ ಉದ್ಭವಿಸಿದೆ
ದೇವತೆಗಳೆಲ್ಲ ನಿಮ್ಮಾಧೀನವೊ
ಆವ ಮಹಾದೇವನು ತಲೆಬಾಗಿರಲಾಗಿ ಮಹ
ದೇವ ಶಿರಸಿನಲಿ ಉದ್ಭವಿಸಿದೆ ಜಗವರಿಯೆ ೨

ದೃಷ್ಟಿಸಿ ನೋಡಲು ನೂರು ಜನ್ಮದ ಕೃತ್ಪಾಪ
ಮುಟ್ಟಿದರೆ ಮುನ್ನೂರು ಜನ್ಮದ ಪಾಪವು
ಮುಟ್ಟಿಮಾಡಲಿ ಬಂದು ಸ್ನಾನ ಮಾತ್ರದಿಂದ
ಸುಟ್ಟುಹೋಗುವುದು ಸಹಸ್ರ ಜನ್ಮದ ಪಾಪ ೩

ಜಹ್ನು ಋಷಿಯಿಂದಲಿ ಬಿದ್ದ ಕಾರಣದಿಂದ
ಜಾಹ್ನವಿಯಂತೆಂದು ನೀ ಕರೆಸಿಕೊಂಡೇ
ಮುನ್ನ ನರಕಾಸುರನ ಸಗರ ರಾಯನ ವಂಶ
ವನ್ನು ನೀ ಪಿಂತೆ ಪಾವನ ಮಾಡಬಂದೆ ೪

ವಿಸ್ತಾರದಲಿ ಪೊಳಿವ ಮುತ್ತಿನಾ ಸರಗಳು
ಮತ್ತೆ ರಂಗಮ್ಮ ಪವಡಿಸಿದ ನೋಡೀ
ಮತ್ತೆ ಮಹಾಲಕ್ಷ್ಮಿಯೆ ಉರಸ್ಥಳದಲಿರಲಾಗಿ
ಇತ್ತ ಶ್ರೀದವಿಠಲ ನನರಸಿ ಬಂದೆ ೫

## (ಈ) ಯತಿವರ್ಯರು

## ೪೨

### ಶ್ರೀ ವ್ಯಾಸರಾಯರ ಸ್ತುತಿ

ಇದಿರ್ಯಾರೊ ಗುರುವೆ ಸರಿಯಾರೊ ಯತಿಗೆ ಸಮರ್ಯಾರೊ ಪ

ದುರುಳ ವಾದಿಗಳನ್ನು ಮರುಳು ಮಾಡೋರನ್ನ
ತರಿದಟ್ಟಿ ಚಂದ್ರಿಕೆ ಗ್ರಂಥವ ರಚಿಸಿ

ಧರಣಿ ಸುರರ ಪರಿವೃಢರ ಸುನಿಕರಕೆ
ಪರಿಪರಿಯಲಿ ಉಪದೇಶಿಸುತಿಪ್ಪಗೆ ೧

ಕನಕ ಕಶಿಪುತನಯನ ಘನ ಅಂಶದಿ
ಫಣಿಗಣ ರಮಣನಾವೇಶದಿ ಪೊಳೆಯುತ
ದಿನದಿನದಲಿ ಹರಿಮನ ತಣಿಸುತಲಿಹ
ಘನ ಮಹಿಮನೆ ಶ್ರೀ ಯತಿಕುಲತಿಲಕಾ ೨

ಲಂಡವಾದಿಗಳ ಉದ್ದಂಡ ವಿತಂಡಕೆ
ಗಂಡುಸಿಂಹ ತರ್ಕದೆ ತಾಂಡವ ಯುಕ್ತಿಯ
ದಂಡುಗಳನೆ ಕಟ್ಟಿಕೊಂಡು ತಾರ್ಕಿಕರ
ಷಂಡಗಳನೆ ಖಂಡಿಸುತಿಹ ಯತಿಯೆ ೩

ಬ್ರಹ್ಮಣ್ಯತೀರ್ಥರ ಕರಕಮಲದಿ ಪುಟ್ಟಿ
ಬ್ರಹ್ಮಜನಕ ನರಸಿಂಹ ಮೂರುತಿಯ ಹೃ–
ದ್ಗಂಹ್ವರದಲಿ ಧ್ಯಾನಿಸುತಿಹ ವ್ಯಾಸರಾ
ಹೃದಯಾಂಬುಧಿಯೊಳು ಮೆರೆವಗೆ ೪

ದಶದಿಶೆಯಲಿ ದಶರಥಸುತ ಮಹಿಮೆಯ
ಕುಶಲದಿಂದಲಿ ಸಭೆಯೊಳಗೆ ಸ್ಥಾಪಿಸುತ
ಹೊಸ ಹೊಸ ಬಿರುದು ಸಂದ್ಧೆಸರುವೆತ್ತಿರುವಂಥ
ವಸುಧಿಯೊಳಗೆ ಸುಕರ ಸುಚರಿತೆಗೆ ೫

ಹೊಳೆಯುತಲಿರುವ ರುಕ್ಮಿಣಿಪತಿ ಕೃಷ್ಣನು
ನಲಿಯುತ ಕುಣಿಕುಣಿದಾಡುತಲಿಪ್ಪನು
ಥಳಥಳಿಸುವ ರಾಮ ವೇದವ್ಯಾಸರು ನಿಮ–
ಗಿಳೆಯೊಳಮೂಲ್ಯ ಪ್ರಸಾದವನೀವರು ೬

ಅಡಿಗಡಿಗತಿ ದೃಢತರ ಯುಕ್ತಿಗಳಿಂದ
ಸಡಗರದಿಂದಲಿ ಬಿಡದೆ ನುಡಿಯುತ
ನಡದದ್ವೈತದಡವಿಯೊಳಗೆ ಪೊಕ್ಕು
ಕೆಡಗುತಿಹ ನ್ಯಾಯಾಮೃತಾಚಾರ್ಯರಿಗೆ ೭

ಶ್ರೀದವಿಠಲಗತಿ ಪ್ರೀಯರಾದ ಶ್ರೀ-
ಪಾದರಾಯರಲಿ ಓದಿ ಗ್ರಂಥಗಳ
ವಾದಿರಾಜ ವಿಜಯೀಂದ್ರ ಪ್ರಮುಖರಿಗೆ
ಆದರದಲಿ ಪಾಠ ಹೇಳುತಲಿಪ್ಪಗೆ ೮

## ೪೩

### ಶ್ರೀ ರಘೂತ್ತಮತೀರ್ಥರು

ನೋಡಿದೆ ಗುರುಗಳ ನೋಡಿದೆ ಪ

ನೋಡಿದೆನು ಗುರುಗಳ ಪಾದಾಬ್ಜವ
ಪಾಡಿದೆನು ಸನ್ಮಹಿಮೆಗಳ ನಾ
ಬೇಡಿದೆನು ಮನದಣಿಯೆ ವರಗಳ
ಈಡು ಇಲ್ಲದೆ ಕೊಡುವ ಪ್ರಭುಗಳ ಅ.ಪ.

ಪಂಚಕೃಷ್ಣಾರಣ್ಯಕ್ಷೇತ್ರ ಪಿನಾಕಿಯ ತೀರದಲ್ಲಿ ನಿಂತು
ಮಿಂಚುತಿಹ ಕಾಷಾಯದಂಡ ಕಮಂಡಲವ ಧರಿಸುತ್ತ ಧರೆಯೊಳು
ಪಂಚಬಾಣದ ಪಿತನ ಗುಣಗಳ ಅಂಚೆಯದಿ ಪೊಗಳುತ್ತ ಹರುಷದಿ
ಸಂಚಿತಾಗಾಮಿಗಳ ಕಳೆದು ಪ್ರಪಂಚದಲಿ ಮೆರೆವಂಥ ಗುರುಗಳ ೧

ಅಲವಬೋಧರ ಭಾಷ್ಯಟೀಕಾ ಭಾವವನು ಸುಜನರಿಗೆ ಬೋಧಿಸಿ
ಕಲುಷಮತಗಿರಿ ಸಮುದ(ದಾ)ಯಂಗಳ ಕುಲಿಶದಂದಲಿ ಖಂಡಿಸುತಲಿ
ಮೂಲರಾಮ ದಿಗ್ವಿಜಯರಾಮರ ಪಾದಕಮಲಕೆ ಭೃಂಗನೆನಿಸುತ
ಶೀಲಭಕ್ತಿ ವಿರಕ್ತಿಮತಿಗಳ ಪಾಲಿಸುತ ಯತಿಮೌಳಿ ರತುನರ ೨

ಕಾಮಧೇನು ಸುಕಲ್ಪತರು ಚಿಂತಾಮಣಿಯವ್ರೋಲ್ ಕಾಮಿತಾರ್ಥವ
ಪ್ರೇಮದಲಿ ಬೀರುತ್ತ ಅಧ್ಯಾತ್ಮದಿ ತಾಪತ್ರಯ ಕಳೆಯುವ
ಸ್ವಾಮಿ ಶ್ರೀಹರಿ ಶ್ರೀದವಿಠಲನ ದಾಸಾಗ್ರಣಿಯೆನಿಸಿ ಮರೆವರ
ನೇಮದಿಂದಲಿ ಶ್ರೀ ರಘೂತ್ತಮ ಮೌನಿವರ್ಯರ ಕರುಣ ಬಯಸುತ ೩

## ೪೪

### ಶ್ರೀ ವಾದಿರಾಜರು

ರಾಜರ ಭಾಗ್ಯವಿದು ಸ್ವಾದಿರಾಜರ ಭಾಗ್ಯವಿದು
ಸೋಜಗವೆನಿಸಿ ರಾಜಿಸುತಿದಕೊ ರಾಜರ ಭಾಗ್ಯವಿದು ಪ

ಬುಧಜನಕೊಪ್ಪುವ ಪದ ಸುಳಾದಿ ಖಳ
ರೆದೆಗಿಚ್ಚೆನಿಸುವ ಚತುರತೆಯಾ
ಸದಮಲ ನಾನಾವಿಧ ಗ್ರಂಥದಿ ಹಯ–
ವದನನ ಪೂಜೆಯು ಯಜಿಸುವುದೆಲ್ಲ ೧

ತಮ್ಮಯ ನೇಮವು ಒಮ್ಮೆಗು ಬಿಡದಂ–
ತಮ್ಮಯ ಬಿಡದಲೆ ಸಮ್ಮೊಗದಾ
ಅಮ್ಮಹ ಶಾಸಖಿ ಬೊಮ್ಮಭೂತವನು
ಘಮ್ಮನೆ ನಿರ್ಮಿಸಿ ರಮ್ಮಿಪುದೆಲ್ಲ ೨

ಮೇದಿನಿಯೊಳಗೆ ಶುಭೋದಯಕಾರಕ
ಸ್ವಾದೀಸ್ಥಳ ಸರ್ವಾಧಿಕವೈ
ಪಾದದ್ವಯದ ಅಗಾಧ ಮಹಿಮನೇ
ಶ್ರೀದವಿಠಲನಾರಾಧಿಪುದೆಲ್ಲ ೩

## ೪೫

### ಶ್ರೀ ರಾಘವೇಂದ್ರರು

ರಾಘವೇಂದ್ರ ಗುರುರಾಯರ ಸೇವಿಸಿರೊ ಸೌಖ್ಯದಿ ಜೀವಿಸಿರೊ ಪ

ವಾಸೋತ್ತುಂಗಾ ತೀರದಲ್ಲೆ ನಿಂತು ವಸುಧೆಯೊಳು ಬಂದು ಅ.ಪ.

ಆ ಸುಧೀಂದ್ರ ಕರ ಸರೋಜ ಸಂಜಾತ ವಸುಧೆಯೊಳು ಪುನೀತಾ
ದಾಶರಥಿಯ ದಾಸತ್ವವ ತಾನೂಹಿಸಿ ದುರ್ಮತಿಗಳ ಜಯಿಸಿ ತ್ಯಜಿಸಿ

ಈ ಸಮೀರಮತ ಸಂಸ್ಥಾಪಕರಾಗಿ ನಿಂದಕರನು ನೀಗಿ ಭೂಸುರರಿಗೆ
ಸಂಸೇವಸಹಾಚರಣೀ ಕಂಗೊಳಿಸುವ ಕರುಣಿ ೧

ಕುಂದದೆ ವರ ಮಂತ್ರಾಲಯದಲ್ಲಿರುವಾ ಕರೆದಲ್ಲಿಗೆ ಬರುವಾ
ಸಂದರುಶನದಿಂದಲಿ ಮಹತ್ತಾಪ ಪರಿದೋಡಿಸಲಾಪಾ
ವೃಂದಾವನ ಮೃತ್ತಿಕೆ ಜಲಪಾನ ಮುಕ್ತಿಗೆ ಸೋಪಾನ
ಮಂದ ಭಾಗ್ಯರಿಗೆ ದೊರೆಯದಿವರ ಸೇವಾ ಶರಣರ ಸಂಜೀವಾ ೨

ಶ್ರೀದವಿಠ್ಠಲನ ಸನ್ನಿಧಾನ ಪಾತ್ರಾ ಸಂಸ್ತುತಿಸಿದ ಮಾತ್ರಾ
ಮೋದಬಡಿಸುವ ತಾನಿಹಪರದಲ್ಲಿ ಈತಗೆ ಸಮರೆಲ್ಲಿ
ಮೇದಿನಿಯೊಳಗಿನ್ನರಸಲು ಕಾಣೆ ಪುಸಿಯಿಲ್ಲೆನ್ನಾಣೆ
ಪಾದಸ್ಮರಣೆ ಮಾಡದವನೆ ಪಾಪಿ ನಾ ಪೇಳ್ವೆನು ೩

## ೪೬

### ಶ್ರೀ ಸತ್ಯಬೋಧರು

ನಂಬಿದೆ ನಿನ್ನ ಶ್ರೀ ಗುರುಪೂರ್ಣ
ಬೆಂಬಿಡದಲೆ ನೀ ಕಾಯಬೇಕೆನ್ನ ಪ

ಸತ್ಯಪ್ರಿಯರತಿ ಪ್ರೀತಕುಮಾರ
ಸತ್ಯಸನಾತನಿ ಸತ್ಯಬೋಧಗುರು ೧

ಸತ್ಯವ್ರತ ಭೃತ್ಯ ಮನೋರಥ
ಅತ್ಯಂತ್ಹರುಷದಿ ಇತ್ತ ಸನ್ಮತ ಯತಿ ೨

ಶ್ರೀದವಿಠಲನ ಪಾದ ಮಧುಪ ನಿತ್ಯ
ಸಾಧುವರ್ಯ ಕೃಪಾ ಸಾಗರ ಸತತ ೩

## ೪೭

### ಶ್ರೀ ಸತ್ಯಧರ್ಮರು

ಚಿತ್ತೈಸ್ಯೆ ಬಿನ್ನೈಸುವೆ ಪರಾಕು ಪ

ಸತ್ಯಧರ್ಮ ಸದ್ಗುರುರಾಯಾ ಅ.ಪ.

ನಿನ್ನ ನಂಬಿದವ ಧನಮದಾಂಧರಿಗೆ
ಇನ್ಯಾತಕೆ ತೆರೆಯಲಿ ಬಾಯಾ ೧

ಕಾಲಹರಣ ಬಲು ಕಷ್ಟವಾಗುತಿದೆ
ಪಾಲಿಸುವುದು ಸತ್ಯಾಧೇಯಾ ೨

ಶ್ರೀದವಿಠಲಾಶ್ರಿತ ಜನವತ್ಸಲ
ಸಾಧು ಸೇವ್ಯ ಸತ್ಯದಿಗೇಯಾ ೩

### ಜಗನ್ನಾಥದಾಸರು

## ೪೮

ತಂಗಿ ನೀ ಕೇಳಿದ್ಯಾ ಅಂಗನಾಮಣಿ
ರಂಗನೊಲಿದ ಭಾಗವತರ ಮಹಿಮೆಗಳ ಪ

ಶ್ರವಣಾದಿ ನವವಿಧ ಸವಿಯ ಭಕುತಿಯಿಂದ
ಪ್ರವೀಣನೆನಿಸಿ ಮಾಧವನ ಧ್ಯಾನಿಪ ಖ್ಯಾತಿ ೧

ಅಮಲ ಸತ್ಕರ್ಮದಿ ಶಮದಮಪೂರ್ವಕ
ಅಮಿತ ಮಹಿಮನಂಘ್ರಿ ಕಮಲಾಖ್ಯಪರ ಖ್ಯಾತಿ ೨

ಶ್ರೀದವಿಠಲನ ಪಾದಭಜಕರಾದ
ಸಾಧುವರ್ಯರ ಸುಬೋಧ ಬಣ್ಣಿಪರಾರೆ ೩

# ೪೯

ತೆರಳಿದರು ಶ್ರೀ ಜಗನ್ನಾಥದಾಸಾರ್ಯರು
ಸಿರಿಪತಿಯ ಸ್ಮರಿಸಿ ಹರಿಪುರಕೆ ಹರುಷದಲಿ ಪ

ವರಶುಕ್ಲವತ್ಸರದ ಭಾದ್ರಪದ ಶಿತಪಕ್ಷ
ಹರಿವಾರ ನವಮಿಯಲ್ಲಿ
ಸುರಸಿದ್ಧ ಸಾಧ್ಯ ಸನ್ಮುನಿಗಣಾರ್ಚಿತ ಪಾದ
ಹರಿಯೆ ಪರನೆಂದೆನುತಲಿ
ಧರಣಿಯನು ತ್ಯಜಿಸಿ ಬಹುಮಾನಪೂರ್ವಕವಾಗಿ
ಬೆರೆದು ಸುರಸಂದಣಿಯಲಿ
ಪರಮಾರ್ಥವೈದಿ ಮನ ಹರಿಯ ಪಾದದಲಿಟ್ಟು
ವರವಿಷ್ಣುದೂತ ವೈಮಾನಿಕರ ಒಡಗೂಡಿ ೧

ಅತಿಪ್ರೇಮಿಗಳು ಹಸನ್ಮುಖರು ದಯೆ ಬೀರುವರು
ಖತಿದೂರರಿವರು ಜಗದೀ
ಮಿತಿಮೀರಿ ಶ್ರೀಹರಿಯ ಕಥೆ ನಾನಾ ಪರಿಯಲ್ಲಿ
ಅತಿಶಯದಿ ಪೇಳಿ ಇಹಕೆ
ಸತತವು ಶರಣರ್ಗೆ ಗತಿಯಾಗುವಂತೆ ಸ
ತ್ಪಥವಿಡಿಸಿ ಕರುಣದಿಂದ
ಹಿತವಂತರೆನಿಸಿ ಸಮ್ಮತವಾಗಿ ಸರ್ವರಿಗೆ
ಮತಿದೋರಿ ಕೊಟ್ಟು ಸದ್ಗತಿಯಗೋಸುಗವಾಗಿ ೨

ಆಚರಣೆಯಲಿ ಒಂದರಘಳಿಗೆ ಬಿಡದೆ ಬಲು
ಖೇಚರಾರೂಢ ಹರಿಯಾ
ಸೋಚಿತಾರಾಧನೆಯ ಮಾಡಿ ಮರೆಯದಲೆ ಮಹಾ
ವೈಚಿತ್ರ್ಯವನು ತೋರಿ ಈ ಚರಾಚರದಿ ಸಂಗೀತ ಸಾಹಿತ್ಯದಲಿ
ಪ್ರಾಚಾರ್ಯವಂತರೆನಿಸೀ
ಆ ಚತುರ್ದಶಭುವನಪತಿ ಶ್ರೀದವಿಠಲನ
ಯೋಚನೆಯ ಬಿಡದೆ ಮಂಗಳ ಶಬ್ದವಾದ್ಯದಿಂ ೩

## ೫೦

ಯಾತಕಿನ್ನಾಥನೆಂಬುವದೂ ಕರುಣಾಳು ಜಗ –
ನ್ನಾಥದಾಸರ ಸೇರಿಕೊಂಬುವದೂ ಪ

ಭೀತಕರ ಬಹು ಜನ್ಮಕೃತ ಮಹಾ
ಪಾತಕಾದ್ರಿಗಳನು ಭೇದಿಸಿ
ಮಾತುಳಾಂತಕನಂಘ್ರಿ ಕುಮುದ
ನೀತ ಭಕ್ತಿಯ ನೀಡಿ ಸಲಹುವ ಅ.ಪ.

ಘೋರಸಂಸಾರ ಪಾರಾವಾರ ದಾಟಿಸುವಾ ಲಕ್ಷ್ಮೀ
ನಾರಸಿಂಹನ ನಿತ್ಯ ಪೂಜಾ ಭಾರ ವಹಿಸಿರುವಾ
ಮೂರು ಲೋಕೋದ್ಧಾರ ದುರಿತೌಘಾರಿ ಕೃಷ್ಣ ಕಥಾಮೃತಾಬ್ಧಿಯ
ಸಾರ ತೆಗೆದು ಬೀರಿ ಕರುಣವ ಬೀರಿ ಸುಜನೋದ್ಧಾರ ಮಾಡಿದ ೧

ವೇದಶಾಸ್ತ್ರ ಪುರಾಣವೆಲ್ಲವ ತೋರಲಿಟ್ಟಿಹರು ಬಹು ವಿಧ–
ವಾದ ದುರ್ಮತವಾದಿಗಳ ಮಾರ್ಗದಿ ಕಟ್ಟಿಹರೊ
ಮೋದತೀರ್ಥ ಮತಾನುಗತ ಸದ್ವಾದಪೂರ್ಣ ಪರಮಾತ್ಮದರ್ಶನ
ಶ್ರೀದನೊಲಿದು ಕೃಪಾಕಟಾಕ್ಷ ಪ್ರಸಾದ ಒಲಿವ ವಿನೋದಗೊಳಿಸುತ ೨

ಶ್ರೀರಮಾಪತಿ ಸರ್ವಸುಗುಣಾಧಾರ ದಯದಿಂದಾ
ಮುರಲಾ ಸೇರಿ ಬರುವದು ಸರ್ವಸಂಪತ್ಸಾರವಾನಂದ
ಕಾರುಣಿಕತನದಿಂದಲಿಂತುಪಕಾರವ ಮಾಡಿ ದೀನ ಜನರಿಗೆ
ಧೀರ ಶ್ರೀದವಿಠಲನ ತೋರಿದರು ನಿಜಭಕ್ತಜನರಿಗೆ ೩

## ೫೧

ಶ್ರೀ ಜಗನ್ನಾಥದಾಸ ನಮಿಪೆ ಗುರುರಾಜ ಸಾತ್ವಿಕವಪುಷ ಪ

ಈ ಜಗದೊಳು ನಿಮಗೆಣೆಗಾಣೆ ಸತತ ನಿ –
ರ್ವ್ಯಾಜದಿ ಹರಿಯ ಗುಣೋಪಾಸನೆ ಮಾಳ್ಪ ಅ.ಪ.

ಹರಿದಾಸ ಕುಲವರ್ಯರೆನಿಸಿ ಕಲ್ಪತರುವಂದದಿ ಚರ್ಯ
ಚರಿಸುತ ಧರೆಯೊಳು ಮೆರೆವ ಮಹಾತ್ಮರ
ಚರಣೇಂದ್ರೀವರಯುಗ್ಮ ದರುಶನ ಮಾಳ್ಪರ
ದುರಿತರಾಶಿಗಳಿರಗೊಡದೆ ನೆರೆ
ಪರಮಮುಕ್ತಿಯ ದಾರಿ ತೋರುತ
ಸಿರಿಸಹಿತ ಹರಿ ತೋರುವಂದದಿ
ಕರುಣ ಮಾಳ್ಪ ಸುಗಣಮಹೋದಧಿ ೧

ರವಿಯು ಸಂಚರಿಸುವಂತೆ ಭೂವಲಯದಿ
ಕವಿಶ್ರೇಷ್ಠ ಚರಿಸಿದೆಯೋ
ಅವಿರುದ್ಧ ತ್ರಯಿಜ್ಞಾನ ಪ್ರವಹಂಗದಲಿ
ಭುವನೈಕ ವೇದವದ್ಯನ ಶ್ರವಣಭಕುತಿಯಿಂದ
ದಿವಸ ದಿವಸದಿ ಪ್ರೀತಿ ಬಡಿಸುತ
ಧ್ರುವವರನಂಘ್ರಿಗಳಿಗರ್ಪಿಸಿ
ಭುವನ ಪಾವನ ಮಾಡಲೋಸುಗ
ಅವನಿ ತಳದಿ ವಿಹರಿಸುತಿಹ ಗುರು ೨

ಅಹೋ ರಾತ್ರಿ ಕ್ಷಣ ಬಿಡದೆ ಸನ್ಮನ ಹೃ -
ದ್ಗುಹಾಧೀಶನನು ಬಿಡದೆ
ಸಹನ ಗುಣಗಳನ್ನು ಅನುದಿನ ಸ್ಮರಿಸುತ
ಸಹನದಿ ಶಮದಮಯುತು ನಿಯಮಗಳನ್ನು
ವಹಿಸಿ ಶ್ರೀದವಿಠಲನಂಘ್ರಿಯ
ಮಹಿಮೆ ತೋರುತ ಪೂಜಿಸುತ ಬಲು
ಮಹಿತಪೂರ್ಣಾನಂದತೀರ್ಥರ
ವಿಹಿತ ಶಾಸ್ತ್ರಗಳರಿತು ಬೋಧಿಪ ೩

## ೫೨

ಸಂಗಸುಖವ ಬಯಸಿ ಬದುಕಿರೋ
ರಂಗವಲಿದ ಭಾಗವತರ ಪ

ಸಂಗಸುಖವ ಬಯಸಿ ಬದುಕಿ
ಭಂಗಪಡಿಪ ಭವವ ನೂಕಿ
ಹಿಂಗದೇ ನರಸಿಂಗನನ್ನು
ಕಂಗಳಿಂದ ಕಾಣುತಿಹರ ಅ.ಪ.

ಪುಟ್ಟಿದಾರಭ್ಯ ಪರಮ ವೈಷ್ಣವಾಧ್ಯಕ್ಷರೆನಿಸಿ
ಶಿಷ್ಟ ಸದಾಚಾರದಲ್ಲಿ ನಿಷ್ಠರಾಗಿ ನಿತ್ಯ ಮುದ್ದು
ಕೃಷ್ಣ ಕೀರ್ತನೆಯನು ಪಾಡುತ ಕಾಮ್ಯಕರ್ಮ
ಬಿಟ್ಟು ಭಕ್ತಿಯನೆ ಮಾಡುತ ಮಧ್ವಮತವ
ಪುಷ್ಟಿಗೈಸಿ ಖಳರ ಕಾಡುತ ಬಂದ ಲಾಭ
ನಷ್ಟ ತುಷ್ಟಿಗಳಿಗೆ ಒಡಂಬಟ್ಟ ಬಗೆಯ ಪೇಳಲೆಷ್ಟು ೧

ಭೂತದಯಾಶೀಲರಾದ ನೀತ ಗುರು ಜಗ–
ನ್ನಾಥ ವಿಠಲಾಂಕಿತವನು ಪಡೆದು ಸಂಗೀತ
ವೃತ್ತ ಪದ ಸುಳಾದಿಯ ಪೇಳಿ ಪ್ರೇ–
ಮಾತಿಶಯದಿ ಒಲಿಸಿಕೊಂಡು ಮಧುವಿರೋಧಿಯ ಒಲಿಸಿಕೊಂಡ
ಜಾತರಾಗಿ ಜವನಬಾಧೆಯ ಬಯಲು ಮಾಡಿ
ಖ್ಯಾತರಾಗಿಹರು ಪುಸಿಯ ಮಾತಿದಲ್ಲ ಮರೆಯಸಲ್ಲ ೨

ಮೇದಿನಿಯೊಳಗುಳ್ಳ ಗಂಗಾದಿತೀರ್ಥ ಸತಿಗಳಿವರ
ಕಾದುಕೊಂಡಿಹರು ಬಿಡದೆ ಸ್ವಾದಿರಾಜೇಂದ್ರರ ಪ್ರ–
ಸಾದದಿಂದ ಹರಿಕಾಥಾಮೃತ ಸಾರತತ್ವ
ಸಾಧುಜನರಿಗಾಗಿ ಪ್ರಾಕೃತ ಪದ್ಧತಿಯಲಿ
ಸಾದರದಲಿ ಪೇಳಿ ದುಷ್ಕೃತ ದೂರಮಾಡಿ
ಮೋದಿಸುವರಿಗೆಣೆಗಾಣೆ ಶ್ರೀದವಿಠಲನಾಣೆ ೩

# ಆತ್ಮನಿವೇದನೆ

## ೫೩

ಅಂಜಬ್ಯಾಡ ಅಂಜಬ್ಯಾಡೆಲೋ ಜೀವ ಭವ
ಭಂಜನ ಹರಿ ಶರಣರ ಕಾವಾ ಪ

ಮಾತ ಹೇಳುವೆ ನಿನಗೊಂದ
ಪರರಜ್ಯೋತಿ ಕಾಣುವತನಕೀ ಬಂಧ
ಭೂತ ಭೇತಾಳಗಳಿಂದ ನಿನಗೆ
ಭೀತಿ ಪುಟ್ಟಲಿಲ್ಲೋ ಮತಿಮಂದ ೧

ಭೇದ ಭೇದಗಳು ನಿನಗೆಲ್ಲಿ ನೀ ಅ-
ನಾದಿ ನಿತ್ಯವೆಂಬುದ ಬಲ್ಲಿ
ವೇದ ಬಾಹ್ಯರಾಗದೆ ಇಲ್ಲಿ ಹರಿ
ಪಾದ ಇನ್ಯಾಕೆ ಪೂಜಿಸಲೊಲ್ಲಿ ೨

ನೀನು ನಿನ್ನದು ಅಲ್ಲವೋ ನೋಡಾ ದೇಹ
ನಾನು ನನ್ನದೆಂಬರೋ ಮೂಢಾ
ಮಾನಹಾನಿ ಮಾಡಿಕೊಳಬೇಡ ಬಿಡು
ಸಾನುಬಂಧಿಗಳ ಸ್ನೇಹವ ಗಾಢ ೩

ಅಹಿತಾದಿ ವಿಭೂತಿಯ ನೋಡೋ
ಸೋಹಂ ಎಂಬರೆ ವಿಘಾತಿಯ
ನೇಹವ ಪಡೆವರೆ ಗೀತೆಯ ಕೇಳಿ
ಮೋಹವ ಕಳಕೋ ವಿಜಾತಿಯ ೪

ಮಧ್ವವಲ್ಲಭ ಮಾಡಿದ ಗ್ರಂಥ
ದೊಳಗದ್ವೈತತ್ರಯ ತಿಳಿದಂಥ
ವಿದ್ವಾಂಸರು ಚರಿಸುವ ಪಂಥವನ್ನು
ಸದ್ಭಕ್ತಿಲಿ ಸಾಧಿಸು ಭ್ರಾಂತ ೫

ಜಾಗರ ಸ್ವಪ್ನ ಸುಷುಪ್ತಿಗಳೊಳು ವರ
ಭೋಗಿಶಯನನ ರೂಪಗಳೇಳು
ಭಾಗವತ ಬಲ್ಲವರ ಕೇಳು ಬೃಹ-
ದ್ಯಾಗವ ಹರಿಗರ್ಪಿಸಿ ಬಾಳು ೬

ಪಂಚಾತುಮ ಸಿಲುಕವ ಷಟ್ ಪಂಚ
ಪಂಚಿಕೆಗಳ ಕರ್ಮವ ಮೀಟಿ
ಪಂಚಿಕೆ ತಿಳಿದುಕೊಂಡರೆ ನಿಷ್ಪ್ರ
ಪಂಚನಾಗಿ ನೀ ಕಡೆದಾಟಿ ೭

ಜ್ಞಾನೇಚ್ಛಾ ಕ್ರಿಯಾ ಶಕ್ತಿಗಳೆಂಬ ಈ ಮ-
ಹಾನುಭಾವದಿ ನಿನ್ನ ಬಿಂಬ
ತಾನೇ ಸರ್ವತ್ರದಲಿ ಕಾಂಬ ಇದ-
ಕೇನು ಸಂದೇಹವಿಲ್ಲವೋ ಶುಂಭ ೮

ತಾಪತ್ರಯಂಗಳು ನಿನಗೆಲ್ಲಿ ಪುಣ್ಯ
ಪಾಪಕ್ಕೆ ಲೇಪನಾಗೋಕೆ ಹೊಲ್ಲ
ಪ್ರಾಪಕ ಸ್ಥಾಪಕ ಹರಿಯೆಲ್ಲ ಜಗ
ದ್ವ್ಯಾಪಕನೆಂದರಿತರೆ ಕೊಲ್ಲ ೯

ಡಿಂಭದೊಳಗೆ ಚೇತನವಿಟ್ಟು ಜಗ-
ದಂಬಾರಮಣ ಮಾಡಿದ ಕಟ್ಟು
ಉಂಬುಡುವ ಕ್ರಿಯೆಗಳನಷ್ಟು ನಿನ್ನ
ಬಿಂಬನಾಧೀನನಾದರೆ ಇಷ್ಟ ೧೦

ಲಕ್ಕುಮಿ ಅವನ ಪಟ್ಟದ ರಾಣಿ ದೇ-
ವರ್ಕಳು ಪರಿಚಾರಕ ಶ್ರೇಣಿ
ವಕ್ಕಲು ನಾವೆಲ್ಲರು ಪ್ರಾಣಿ ದಶ-
ದಿಕ್ಕುನಾಳುವ ನಮ್ಮ ದೊರೆಯ ನೀ ೧೧

ಮರ್ತ್ಯಲೋಕದ ಸಂಪದ ಪೊಳ್ಳು ಜಗ
ಮಿಥ್ಯಮತವೆಂದಿಗು ಜೊಳ್ಳು
ಶ್ರುತ್ಯನ್ನರ್ಥ ಪೇಳ್ವದೇ ಸುಳ್ಳು ನೀ
ಭೃತ್ಯನು ಕರ್ತನಾಗದಿರೆಲೋ ಕೇಳು ೧೨

ಮಾಧವನಲಿ ತನುಮನ ಮೆಚ್ಚು
ಕ್ರೋಧರೂಪದ ಕಲಿಮಲ ಕೊಚ್ಚು
ಮೋದತೀರ್ಥರ ವಚನವ ಮೆಚ್ಚು
ವಾದಿ ಮತಕ್ಕೆ ಬೆಂಕಿಯ ಹಚ್ಚು ೧೩

ಸವಿವುಳ್ಳರೆ ಕೇಳೆನ್ನಯ ಸೊಲ್ಲ ನಮ್ಮ
ಪವನನಯ್ಯನ ಪ್ರೇರಣೆಯಿಲ್ಲ
ಎವೆಯಿಕ್ಕಲರಿಯದೀ ಜಗವೆಲ್ಲ ಎಂದು
ಶಿವ ತನ್ನ ಸತಿಗೆ ಹೇಳಿದನಲ್ಲ ೧೪

ಧ್ರುವ ಬಲ್ಯಾದಿ ರಾಯರ ನೋಡು ನಿನ್ನ
ಅವಗುಣಗಳನೆಲ್ಲಾ ಈಡ್ಯಾಡೋ
ಅವಶ್ಯವಾಗಿ ಕರ್ಮವ ಮಾಡೋ ಮಾ-
ಧವ ನಿನ್ನವನೆಂದು ನಲಿದಾಡೋ ೧೫

ನಿಂದಾ ಸ್ತುತಿಗಳ ತಾಳಿಕೋ ಬಲು
ಸಂದೇಹ ಬಂದಲ್ಲಿ ಕೇಳಿಕೋ
ಬಂದವರಿಂದಲಿ ಬಾಳಿಕೋ ಗೋ-
ವಿಂದ ನಿನ್ನವನೆಂದು ಹೇಳಿಕೋ ೧೬

ತತ್ವವಿಚಾರವ ಮಾಡಿಕೋ ನಿನ್ನ
ಭಕ್ತಿಯ ಆಳವ ಅಳಿದುಕೋ
ಮತ್ತೆ ಮಾಯಾ ಮೋಹ ಕಳೆದುಕೋ ನಿನ್ನ
ಹತ್ತಿರ ಹರಿಯಿರುವ ನೋಡಿಕೋ ೧೭

ಹಿಂಡು ದೈವಗಳಿಂದ್ಧಿರಿಯನೀತ ತನ್ನ
ತೊಂಡನೆಂದದವರಿಗೆ ತಾ ಸೋತಾ
ದಂಡಿಸಿ ದಯಮಾಡುವ ದಾತಾ ಭೂ–
ಮಂಡಲದೊಳಗೆಲ್ಲ ಪ್ರಖ್ಯಾತಾ ೧೮

ನಾಡ ಬೋಡಿ ದೈವಗಳಂತೆ ತನ್ನ
ಬೇಡಲು ತಾ ಬೇಡಿಕೊಳನಂತೆ
ನೀಡುವ ನಿಖಿಳಾರ್ಥವದಂತೆ ನಿಜ
ನೋಡಿಕೋ ನಿನಗ್ಯಾತರ ಚಿಂತೆ ೧೯

ಏನು ಕೊಟ್ಟರೆ ಕೈಚಾಚುವ ತನ್ನಾ–
ಧೀನವೆಂದರೆ ನಸುನಾಚುವಾ
ದಾನವ ಕೊಡಲೂರಿ ಗೀಚುವ ತನ್ನಲಿ
ತಾನೇವೇ ಮನದೊಳು ಸೂಚುವ ೨೦

ಕರಕರದಲ್ಲಿ ತಾ ಬರುವಾನು
ಮರತುಬಿಟ್ಟವರ ತಾ ಮರೆಯಾನು ನಿಜ
ಶರಣರ ಕಾದುಕೊಂಡಿರುವಾನು ತನ್ನ
ಸರಿಯಂದವರ ಹಲ್ಲು ಮುರಿದಾನು ೨೧

ಆರು ಮುನಿದು ಮಾಡುವದೇನು ಪ್ರೇರ್ಯ
ಪ್ರೇರಕರೊಳಗಿದ್ದು ಹರಿ ತಾನು
ಓರಂತೆ ಕಾರ್ಯವ ನಡೆಸೋನು ಮುಖ್ಯ
ಕಾರಣ ಶ್ರೀಹರಿ ಅಲ್ಲವೇನೋ ೨೨

ಹಲವು ಹಂಬಲಿಸಲ್ಯಾತಕೆ ಹುಚ್ಚಾ ವಿದ್ಯಾ
ಕುಲಶೀಲಧನದಿಂದ ಹರಿ ಮೆಚ್ಚಾ
ಕಲಿಯುಗದೊಳಗಾರ್ಯರ ಪೆಚ್ಚಾ ತಿಳಿ
ಸುಲಭೋಪಾಯಾದಿಗಳ ನಿಚ್ಚಾ ೨೩

ದುರ್ಜನರೊಳು ದೈನ್ಯ ಬಡದಿರು ಸಾಧು
ಸಜ್ಜನರೊಳು ವೈರ ತೊಡದಿರು
ಅರ್ಜುನಸಖನಂಘ್ರಿ ಬಿಡದಿರು ನಿ-
ರ್ಲಜ್ಜನಾಗಿ ಬಾಯ್ಬಿಡದಿರು ೨೪

ಭಯರೂಪದಿ ಒಳಹೊರಗಿದ್ದು ನಿ-
ರ್ಭಯ ನಾಮಕನು ಧೈರ್ಯವನೆ ಗೆದ್ದು
ಭಯದೋರುವನೆಂಬುದೆ ಮದ್ದು ಮಹಾ
ಭಯಕೃದ್ಭಯಹಾರಿಯನೆ ಪೊಂದು ೨೫

ಪರಸತಿಯರ ಸಂಗವ ಬಿಡು ಹರಿ
ಸರ್ವೋತ್ತಮನೆಂದು ಕೊಂಡಾಡು
ಪರಮಾತ್ಮನ ಧ್ಯಾನವ ಮಾಡು ನರ
ಹರಿದಾಸರಂಗಳ ಒಡಗೂಡು ೨೬

ಸೃಷ್ಟಿಗೊಡೆಯ ಶ್ರೀದವಿಠಲ
ವಿಷ್ಟಾವಿಷ್ಟನಾಗಿದ್ದೆಲ್ಲ
ಇಷ್ಟಾನಿಷ್ಟವ ಕೊಡಬಲ್ಲ ಮನ-
ಮುಟ್ಟಿದವರ ಬೆಂಬಿಡನಲ್ಲಾ ೨೭

## ೫೪

ಇನ್ಯಾತಕನುಮಾನವಯ್ಯಾ ಪ

ಅನ್ಯಥಾ ಗತಿ ಕಾಣೆ ನಿನ್ನ ಚರಣಗಳಾಣೆ ಅ.ಪ.

ನಾಶರಹಿತನೆ ನಮಗೆ ಏಸೇಸು ಕಲ್ಪಕ್ಕು
ವಾಸ ಏಕತ್ರದಲ್ಲಿ
ನೀ ಸಾಕ್ಷಿಯಾಗಿದ್ದು ದಾಸನಾದವಗಪ್ರ-
ಯಾಸದಿ ಫಲಗಳುಣಿಸಿ
ಲೇಶ ಘನಮಾಡಿ ಸಂತೋಷಪಡುವಾ ನಿನ್ನ

ದ್ವೇಷಿ ನಾನಲ್ಲವಯ್ಯ
ದೇಶಕಾಲಾದಿಗಳಿಗೀಶ ನೀನೆಂದರಿದು
ದಾಸನಾಗಿರುವೆನೆಂದಾಶೆ ಪುಟ್ಟಿದ ಬಳಿಕ ೧

ನಿತ್ಯ ತೃಪ್ತನೆ ನಿನ್ನ ಕೃತ್ಯಕೇನೆಂಬೆನೋ
ಸತ್ಯಸಂಕಲ್ಪ ಹರಿಯೇ
ಮೃತ್ಯುಮಾರಿಗಳೆನಗೆ ಹತ್ತಿಕೊಂಡದರಿಂದ
ಸತ್ತುಪುಟ್ಟುವೆಯಿನ್ನು
ದತ್ತಕರ್ತೃತ್ವ ಬೆನ್ನತ್ತಿಕೊಂಡದರಲ್ಲಿ
ಚಿತ್ತೈಸೊ ಎನ್ನ ಮಾತಾ
ಅತ್ಯಪರಾಧಿಯಂದತ್ತ ಮೊಗದಿರುಗದಿರು
ಭೃತ್ಯವತ್ಸಲನೆಂದಗತ್ಯ ಮನಸೋತ ಬಳಿಕ ೨

ವೇದವೇದ್ಯ ಸ್ವಗತ ಭೇದವರ್ಜಿತ ಪೂರ್ಣ
ಬೋಧರ್ತಿಥಾರ್ಯರಾಪ್ತಾ
ಯಾದವಕುಲೋತ್ತಂಸ ಮಾಧವ ಮಹಿದಾಸ
ಬೋಧಮಯ ಧನ್ವಂತ್ರೀ
ಆದಿನಾರಾಯಣ ವಿನೋದ ವಿಷ್ವಕ್ಸೇನ
ತೋದಕ ಕ್ಷೇಮಧಾಮಾ
ಶ್ರೀದವಿಠಲಾ ನಿನ್ನ ಕ್ರೋಧ ವರರೂಪ-
ವಾದ ವಾರ್ತೆಯು ಕೇಳಿ ಧೈರ್ಯಬಿಡದಾ ಬಳಿಕಿನ್ನು ೩

## ೫೫

ಎಲೆ ಮನವೆ ಯದುಲಲಾಮನಗಲದೆ
ಭಲಾ ಭಲಾ ಎನಿಸನುಗಾಲಾ ಪ

ತನು ಮನ ಧನ ದಾರಾಪತ್ಯರ ನೀ
ನೆನಿಸದಿರಭಿಮಾನಕೆ ಮೂಲಾ ೧

ಗುರುಹಿರಿಯರ ಸತ್ಕರಿಸಿ ಬ್ಯಾಗ ಪರಿ
ಹರಿಸಿಕೊ ಜನನ ಮರಣಜಾಲಾ ೨

ಶ್ರೀದವಿಠ್ಠಲನ ಪಾದ ಸ್ಮರಣೆಯ
ಸಾಧಿಸು ಮುಕ್ತಾಮಣಿಮಾಲಾ ೩

## ೫೬

ಕರುಣಿಸುವುದು ಎನ್ನಾ ಕರಿವರದ ಕೇಶವ
ಕರಪಿಡಿದು ಸುಖಪೂರ್ಣಾ ನಿನ್ನಡಿಗಳಂಬುಜ
ಸ್ಮರಿಪರಲ್ಲಿಡ ಮುನ್ನಾ ಪರಿಹರಿಸು ಬನ್ನಾ ಪ

ಸರಸಿಜಾಪತಿ ಸರಸಿಜೋದ್ಭವ
ಹರಸುರಾಧಿಪ ವಂದ್ಯ ನಿನ್ನಯ
ಚರಣ ನಂಬಿದೆ ಎರವು ಮಾಡದೆ
ತ್ವರ್ಯ ಸೌಖ್ಯವುಗರದು ಕರುಣದಿ ಅ.ಪ.

ಜನನಿ ಜಠರದಿಂದ ನಿನ್ನಾಜ್ಞದಲಿ ನಾ ಜನಸಿದೆನೊ ಗೋವಿಂದಾ
ಬಾಲತ್ವ ಕೆಲದಿನ ಕಳೆದೆನೊ ಮುಕುಂದಾ ಯೌವ್ವನವು ಬರುತಲೆ
ವನಿತೆ ಮುಖ ಅರವಿಂದಾ ನೋಡುತಲೆ ಬಲು ಛಂದಾ
ಮನವು ನಿಲ್ಲದು ಮಮತೆ ವಿಷಯದಿ ಮುನಿದು ಸಜ್ಜನರ ಸೇವಿಸಿ
ಕೊನೆಯಗಾಣದೆ ಮಣಿವೆ ಅಂಘ್ರಿಗೆ ವನದಿಗಳ ವಮ್ಮನೆ (?)
ನಡಿಸು ವೆಂಕಟಾ
ಘನತೆ ನಿನಗಿದು ತಿಳಿದು ವೇಗದಿ
ಅನುದಿನದಲಿ ಸಲಹುತಿಪ್ಪನೆ ಅನಿಮಿಷರ ಆಧಾರ ಮೂರುತಿ ೧

ಮೊರೆಯ ಲಾಲಿಸು ಜೀಯಾ ಅರೆ-
ಮೊರೆಯ ಮಾಡಲು ಪೊರೆವರ್ಯಾರೆಲೊ ಕಾಯಾ ಅ-
ನ್ಯರನು ಕಾಣದೆಯರಗಿದೆನು ಸುರ ಸಹಾಯ

ಸುರಧೇನು ಮನೆಯೊಳಗಿರಲು ವಿಠ್ಠಲರೇಯಾ
ಬಿಡು ನಿನ್ನ ಮಾಯಾ ಬಲ ತಡದು
ನಿಕ್ರವ ತರಲು ಜನರೊಳು (?)
ಯರಗಿರಲು ನಿನಗೆಂದಿಗಾದರು ಅರಿದು ಅಗ್ಗಕೆ ಪೊರೆದು ಮಾನವ
ಕರಿಯು ಕರೆಯಲು ಬರುವುದುಂಟೇ
ಕರುಣಾಸಾಗರನೆಂಬೊ ನಿನ್ನಯ
ಬಿರುದು ಉಳ್ಳದಕೊಂಡು ಸಾಧನೆ
ಧರೆಯ ದುಷ್ಟರ ಬಾಧೆ ತಪ್ಪಿಸಿ
ಹರುಷವನು ಅತಿಗರೆದು ನಿರುತದಿ ೨

ಬಿಡೆನೊ ಕಡಲೊಡಗಾಡಿ ಬಿಂಕದಲಿ ಅದ್ರಿಯ
ನಿಡಲಿ ಬೆನ್ನಲಿ ನೋಡಿ ಪಾದಗಳ ಎಳೆಯುತ
ನಡೆದು ಕೋಪವ ಮಾಡಿಬಿಡು ದೈನ್ಯದಲಿ
ಪೊಡವಿ ದಾನವ ಬೇಡಿ ಬಿಡೆ ನೋಡಡವಿಯೊಳ್ ಕಾಡಿನ
ಮಡುವಿನೊಳು ಗಿಡವೇರಿ ಧುಮುಕಲು
ಒಡನೆ ಅಂಬರ ಬಿಟ್ಟು ಖಡ್ಗವ
ಪಿಡಿದು ವಾಜಿಯನೇರಿದನು ಜರ
ಕಡಿಯಪೋಗಲು ಕಂಡು ನಿನ್ನನು ಬಿಡೆನೊ ನಿನಗೆಂದಿಗಾದರು
ಪೊಡವಿಪತಿ ಶ್ರೀದವಿಠ್ಠಲ ವಡಿಯ ನೀನೆಂತೆಂದು ನಂಬಿದೆ ೩

(ಈ ನುಡಿಯ ಅರ್ಥ ಸ್ಪಷ್ಟವಾಗುತ್ತಿಲ್ಲ–ಅಶುದ್ಧ ಪ್ರತಿಯ ಕಾರಣದಿಂದ.)

## ೫೭

ಕಾಯೋ ಶ್ರೀಹರಿ ಪ

ಕೈ ಮುಗಿವೆ ಮುರಾರಿ ಕರುಣದಿ ಅ.ಪ.

ನೊಂದೆನೋ ಈ ಭವ
ಬಂಧನದೊಳಗೆ ಶಿಲುಕಿ
ಮುಂದಿದಕೇನೋ ದಾರಿ ೧

ತುಂಬಿದ ಭಕ್ತ ಕು-
ಟುಂಬಿ ನಾಚಿಕೆಯ
ಕೊಂಬುವದೇನಿದ ಕುಸುರೊ ೨

ಎಷ್ಟು ನಿನಗೆ ಮೊರೆ-
ಯಿಟ್ಟರೂ ಶ್ರೀದ-
ವಿಠ್ಠಲ ಮನಸಿಗೆ ತಾರಿ ೩

## ೫೮

ದಾಶರಥೇ ದಯಮಾಡೊ ನಿನ್ನ
ದಾಸರ ದಾಸನ ನೋಡೋ ಪ

ನೀರಜಾಕ್ಷ ನಿಜಮಾಯಾ ಮಮತೆ ಸಂ-
ಸಾರಶರಧಿಯೊಳು ಬಿದ್ದು
ಪಾರಗಾಣದೆ ಪರಿದು ಪೋಗುವೆನು
ತಾರಕ ನೀನೆನಗಿದ್ದು ಹರಿ ಹರಿ ೧

ತುಂಬಿದ ಭಂಡಿಗೆ ಮೊರ ಭಾರವೆ ಎನ-
ಗಿಂಬಿಲ್ಲವೆ ನಿನ್ನಲಿ
ನಂಬಿದ ಭಕ್ತರ ಸಲಹುವ ವಿಶ್ವಕು-
ಟುಂಬಿ ಎನಿಸಿಕೊಳುವಲ್ಲಿ ಹರಿ ೨

ಬಲ್ಲಿದರೊಳು ಬಡವರಿಗಾಶ್ರಯ ನೀ
ಬಲ್ಲೆ ಮತ್ತೆ ಎನಗೀಗ
ಎಲ್ಲಿದ್ದರು ಶ್ರೀದವಿಠಲ ಬಿಡ
ದಲ್ಲೂ ನಿನ್ನ ದಯ ಬೇಗ ೩

## ೫೯

ಬೇಡುವುದೂ ಬಲು ಕಷ್ಟ ಪ

ನೀಡದಿದ್ದವನೇ ನಷ್ಟ ಅ.ಪ.

ನಾಚಿಕೆ ಎಲ್ಲನು ತೊರೆದು ಮಹಾ ನೀಚರಿಗೆ ಬಾಯ್ತೆರದು ೧

ಕೊಟ್ಟಾರೆಂಬ ದುರಾಶಾ ಕ್ರಿಯಾ ಭ್ರಷ್ಟರರಿಯರೂ ಕ್ಲೇಶಾ ೨

ಚಿತ್ತವೃತ್ತಿಯನು ಕಂಡೂ ಅಧಮರ ಹೊತ್ತುಹೊತ್ತಿಗೆ ಕಾಣಿಸಿಕೊಂಡು ೩

ಗುಣಹೀನರ ಕೊಂಡಾಡೀ ಬಂದು ಕ್ಷಣಕ್ಷಣಕವರನು ನೋಡೀ ೪

ಶ್ರೀದವಿಠಲನ ಬಿಟ್ಟೂ ಅಧಮಾಧಮರಿಗೆ ದೈನಬಟ್ಟು ೫

## ೬೦

ರಘುರಾಮರ ಪಾದವ ಹಿಡೀ ಹಿಡಿ ಪ

ಕಾಮ ಕ್ರೋಧ ಮದ ಮತ್ಸರಗಳೆಂಬೋ
ದುರಿತವ ಬ್ಯಾಗನೆ ಹೊಡಿ ಹೊಡಿ ೧

ಹೆಣ್ಣು ಹೊನ್ನು ಮಣ್ಣು ಮೂರರಾಶೆಯ ಮಾಡಿದೆ
ಅದರೊಳಗೇನಿದೆ ಹುಡಿ ಹುಡೀ ೨

ಶ್ರೀದವಿಠಲನ ಪಾದಸ್ಮರಣೆಯ
ಮರೆಯದೆ ಬೇಗನೆ ನುಡಿ ನುಡೀ ೩

## ೬೧

### (ಅಕ್ರೂರನ ಒಸಗೆ)

ರಥವೋಗದಾ ಮುನ್ನ ಗೋಕುಲಕೆ ಮನ್ಮನೋ-
ರಥ ಹೋಗಿರುವುದೇನೆಂಬೇ ಪ

ಅತಿ ಕೌತುಕವದಾಯ್ತು ಖಳರಾಯನೊಲಿದು ಯದು-
ಪತಿಯ ಕರೆತರುವುದೆಂದೆನಗೆ ಪೇಳಿರಲಿಕ್ಕೆ ಅ.ಪ.

ಪತಿತರ್ಗೆ ನಾಮ ದುರ್ಲಭವಲಾ ಎನಗೆ ಶ್ರೀ-
ಪತಿ ಸೇವೆ ತಾನಾಗಿ ದೊರೆತೂ
ಶತಸಹಸ್ರಾನಂತ ಜನುಮಗಳ ಸು-
ಕೃತಕೆ ಫಲವಾಯಿತೆಂದರಿತೂ
ಗತ ಕಿಲ್ಬಿಷನಾದೆನೆಂಬುದಕಿದೇ ಸಾಕ್ಷಿ
ಪಥದೊಳಗೆ ತಾವೆ ಮುಂದುವರಿದೂ
ಮಿತಿಯಿಲ್ಲದಲೆ ಮಹಾ ಶಕುನಂಗಳಾಗುತಿವೆ
ಪ್ರತಿ ಇಲ್ಲವೀ ಶುಭೋದಯಕೆ ಸೂರ್ಯೋದಯಕೆ ೧

ಶ್ರೀ ಪದ್ಮಜಾದಿಗಳು ಸೇವಿಸುವ ಚರಣ ಯಮು-
ನಾಪುಳಿನದಲಿ ಮೆರೆವ ಚರಣಾ
ಗೋಪೀಯರ ಪೀನ ಕುಚಕುಂಕುಮಾಂಕಿತ ಚರಣಾ
ತಾಪತ್ರಯಾವಳಿವ ಚರಣಾ
ಗೋಪುರದ ಶಿಲತೃಣಾಂಕುರುಹ ತೋರುವ ಚರಣಾ
ಆಪದ್ಬಾಂಧವನ ಚರಣಾ
ನಾ ಪೇಳಲೇನು ಭಕುತರ ವತ್ಸಲಾನುಕರು-
ಣಾ ಪೂರ್ಣಾ ಎನಗಭಯಕೊಡುವಾ ಪಿಡಿಲಾ ೨

ನೋಡುವೆನು ನೀರದಶ್ಯಾಮಸುಂದರನ ಕೊಂ-
ಡಾಡುವೆನು ಕವಿಗೇಯನೆಂದೂ

ಮಾಡುವೆನು ಸಾಷ್ಟಾಂಗದಂಡ ಪ್ರಣಾಮ ಕೊಂ–
ಡಾಡುವೆನು ಕೈ ಮುಗಿದು ನಿಂದೂ
ಬೇಡುವೆನು ಭುವನೈಕದಾತನೆಂದಲ್ಲಿ ಕೊಂ
ಡಾಡುವೆನು ದಾಸ್ಯ ಬೇಕೆಂದೂ
ಈಡಿಲ್ಲದಿಂದಿನಾ ಮನಕೆನ್ನ ಬಯಕೆ ಕೈ–
ಗೂಡುವುದು ನಿಸ್ಸಂದೇಹ ದೈವ ಸಹಾಯ ೩

ಇರುವನೋ ಏಕಾಂತದೊಳಗಿರುವ ಕೇಳದಿರು
ಬರುವನೋ ಬಂದವನ ಕಂಡೂ
ಕರೆವನೋ ಕಿರಿಯಯ್ಯ ಬಾರೆಂದು ಬಿಗಿದಪ್ಪಿ
ಬೆರೆವನೋ ಬೆರಸಿಯದನುಂಡೂ
ಒರೆವನೋ ಒಡಲ ಧರ್ಮವನೆಲ್ಲ
ವರಗಿನೇ ಜರಿಯನೋ
ಜಗದೀಶ ಹಗೆಯವನೆನುತ ಬಗೆಯ ೪

ಗೋಧೂಳಿಲಗ್ನಕೆ ಗೋಕುಲಕೆ ಬಂದು ಬೆರ–
ಗಾಗಿ ಹೆಜ್ಜೆಗಳ ನೋಡಿ
ಭೂದೇವಿಗಾಭರಣವೆನುತ ತೇರಿಳಿದು ಶ್ರೀ
ಪಾದರಜದೊಳಗೆ ಪೊರಳಾಡೀ
ಗೋದೋಹನದೊಳಿದ್ದ ರಾಮಕೃಷ್ಣರ ಕಂಡು
ನಾ ಧನ್ಯ ಧನ್ಯನೆಂದಾಡೀ
ಶ್ರೀದವಿಠಲ ಎರಗುವನಿತರೊಳು ಬಿಗಿದಪ್ಪಿ
ಸಾದರಿಸಿದನು ಇದೆ ಸದನದಲಿ ಸ್ವಪ್ನದಲಿ ೫

## ೬೨

ರಾಮಚಂದ್ರ ನೀನೇ ಪಾಲಿಸೊ ಸರೋಜನಾಭ
ಸಾಧುಸಂಗ ಶೀಘ್ರಕೂಡಿಸೊ ಪ

ಎಷ್ಟು ದಿನ ಕಷ್ಟಪಡುವದೋ ಈ ಭವದೊಳು
ಈಸಲಾರೆನಯ್ಯ ಹರಿಯೇ
ಇಷ್ಟು ದಿನ ಇದ್ದಂತೆ ಇರಲಾರೆನೆಂದು ಕರವ
ಮುಟ್ಟಿ ಮುಗಿದು ಬೇಡಿಕೊಂಬೆ ಮುರಾರಿ ಕೃಷ್ಣ ನೀನೇ ಕಾಯೋ ೧

ಹರಿಹರರು ಸಮಾನರೆನ್ನದಾ ಈ ಸಜ್ಜನರಾ-
ಸಂಗದಿಂದ ಹೀನಾ ನಾನಾದೆ
ಇನ್ನುಮ್ಯಾಲೆ ಇಲ್ಲವಯ್ಯ ಸೃಷ್ಟಿಗಧಿಕ ಶ್ರೀನಿವಾಸಾ
ಇನ್ನು ನಿನ್ನ ಸ್ಮರಣೆಯಿಂದ ಇರುವೆನಯ್ಯ ಮುಕುಂದ ೨

ಪೃಥ್ವಿಯಲ್ಲಿ ಪುಟ್ಟಿದಾ ಮೊದಲು ನಿನ್ನಾ ವೃತ್ತಾಂತ
ಒಂದು ದಿನ ಮಾಡಲಿಲ್ಲವೋ
ಎಂದು ಎನ್ನ ಮ್ಯಾಲೆ ಕ್ರೂರದೃಷ್ಟಿಯಿಂದಾ ನೋಡಾದೀರು
ವಾಸುದೇವ ವೈಕುಂಠವಾಸ ಲಕ್ಷುಮಿ ರಮಣ ೩

ನಿತ್ಯದಲ್ಲಿ ವಿಪ್ರರಾ ವೃಂದಾದೊಳಗೆ ನಾ ಆ-
ಸಕ್ತನಾಗಿ ಇರುವೆ ಮುಕುಂದಾ
ಎಂಥ ಪಾಪಿ ಎಂದು ಉದಾಸೀನಮಾಡಿ ನೋಡಬೇಡ
ನಿನ್ನ ಕಂದಾನೆಂದು ತಿಳಿದು ಪಾಲಿಸಯ್ಯ ನಾರಾಯಣ ೪

ಹನುಮ ಭೀಮ ಮಧ್ವೇಶಾರಿಂದಾ ಸೇವಿತ ಪ್ರಿಯಾ
ಶಾಂತಮೂರ್ತಿ ಶಾಮವರ್ಣನೇ
ಶ್ರೀದವಿಠಲೇಶಾ ನಿನ್ನಾ ದಾಸನೆಂದು ಪಾಲಿಸೆನ್ನ
ಸಾರಿ ಬೇಡಿಕೊಂಬೆನಯ್ಯ ರಾಮಚಂದ್ರ ರಾವಣಾಚಾರಿ ೫

## ೬೩

ಸಾಕಯ್ಯ ಸಾಕು ಸಾಕಯ್ಯ ನಮ-
ಗ್ಯಾಕಯ್ಯ ಇನ್ನವಿವೇಕ ಸಂಗತಿ ಪ

ಬುದ್ಧಿ ಶೂನ್ಯರಿಗೆ ಬುದ್ಧಿಯನು ಹೇಳಲು
ಮದ್ದಾನೆ ಮೈತೊಳೆವಂತಾಯಿತು ೧

ಮರುಳ ಜನರಿಗೆ ಧರ್ಮವನರುಹಲು
ಕುರುಡಗೆ ಕನ್ನಡಿ ತೋರಿದಂತಾದಿತು ೨

ಶ್ರೀದವಿಠಲನೆಂದಜ್ಞಾನಿಗೆ
ಬೋಧಿಸೆ ಬೋರ್ಗಲ್ಲ ಮುಂದೆ ವದರಿದಂತಾಯಿತು ೩

## ೬೪

### ಹರಿಕಥಾಮೃತಸಾರ ಫಲಸ್ತುತಿ (೩೩ನೆಯ ಸಂಧಿ)

ಹರಿಕಥಾಮೃತಸಾರ ಶ್ರೀಮ–
ದ್ಗುರುವರ ಜಗನ್ನಾಥದಾಸರ
ಕರತಳಾಮಲಕವೆನೆ ಪೇಳಿದ ಸಕಲ ಸಂಧಿಗಳ
ಪರಮಪಂಡಿತಾಭಿಮಾನಿಗಳು ಮ–
ತ್ಸರಿಸಲೆದೆಗಿಚ್ಚಾಗಿ ತೋರುವು–
ದರಸಿಕರಿಗಿದು ತೋರಿ ಪೇಳುವುದಲ್ಲ ಧರೆಯೊಳಗೆ ೧

ಭಾಮಿನಿಯ ಷಟ್ಪದಿಯ ರೂಪದ–
ಲೀ ಮಹಾದ್ಭುತ ಕಾವ್ಯದಾದಿಯೊ–
ಳಾ ಮನೋಹರ ತರತಮಾತ್ಮಕ ನಾಂದಿಪದ್ಯಗಳ
ಯಾಮಯಾಮಕೆ ಪಠಿಸುವರ ಸು–
ಧಾಮಸಖ ಕೈಪಿಡಿಯಲೋಸುಗ
ಪ್ರೇಮದಿಂದಲಿ ಪೇಳ್ದ ಗುರುಕಾರುಣ್ಯಕೇನೆಂಬೆ ೨

ಸಾರವೆಂದರೆ ಹರಿಕಥಾಮೃತ
ಸಾರವೆಂಬುವುದೆಮ್ಮ ಗುರುವರ
ಸಾರಿದಲ್ಲದೆ ತಿಳಿಯೆಂದೆನುತ ಮಹೇಂದ್ರನಂದನನ

ಸಾರಥಿಯ ಬಲಗೊಂಡು ಸಾರಾ-
ಸಾರಗಳ ನಿರ್ಣೈಸಿ ಪೇಳ್ದನು
ಸಾರ ನಡೆವ ಮಹಾತ್ಮರಿಗೆ ಸಂಸಾರವೆಲ್ಲಿಹುದೊ ೩

ದಾಸವರ್ಯರ ಮುಖದಿ ನಿಂದು ರ-
ಮೇಶನನು ಕೀರ್ತಿಸುವ ಮನದಭಿ-
ಲಾಶೆಯಲಿ ವರ್ಣಾಭಿಮಾನಿಗಳೊಲಿದು ಪೇಳಿಸಿದ
ಈ ಸುಲಕ್ಷಣ ಕಾವ್ಯದೋಳ್ ಯತಿ
ಪ್ರಾಸಗಳಿಗೆ ಪ್ರಯತ್ನವಿಲ್ಲದೆ
ಲೇಸುಲೇಸೆನೆ ಶ್ರಾವ್ಯಮಾದುದೆ ಕುರುಹು ಕವಿಗಳಿಗೆ ೪

ಪ್ರಾಕೃತೋಕ್ತಿಗಳೆಂದು ಬರಿದೆ ಮ-
ಹಾಕೃತಘ್ನರು ಜರಿವರಲ್ಲದೆ
ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು
ಶ್ರೀಕೃತೀಪತಿಯಮಲಗುಣಗಳು
ಈ ಕೃತಿಯೊಳುಂಟಾದ ಬಳಿಕ
ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಗುಣರಿಗೆ ೫

ಶ್ರುತಿಗೆ ಶೋಭನವಾಗದೊಡೆ ಜಡ
ಮತಿಗೆ ಮಂಗಳವೀಯದೊಡೆ ಶ್ರುತಿ
ಸ್ಮೃತಿಗೆ ಸಮ್ಮತವಲದಿದ್ದೊಡೆ ನಮ್ಮ ಗುರುರಾಯ
ಮಥಿಸಿ ಮಧ್ವಾಗಮಪಯೋಬ್ಧಿಯ
ಕ್ಷಿತಿಗೆ ತೋರಿಸಿ ಬ್ರಹ್ಮವಿದ್ಯಾ
ರತರಿಗೀಪ್ಸಿತ ಹರಿಕಥಾಮೃತಸಾರ ಸೊಗಸುವುದು ೬

ಭಕ್ತಿವಾದದಿ ಪೇಳ್ದನೆಂಬ ಪ್ರ-
ಸಕ್ತಿ ಸಲ್ಲದು ಕಾವ್ಯದೊಳು ಪುನ-
ರುಕ್ತಿ ಶುಷ್ಕ ಸಮಾಸ ಪದವ್ಯತ್ಯಾಸ ಮೊದಲಾದ
ಯುಕ್ತಿ ಶಾಸ್ತ್ರ ವಿರುದ್ಧ ಶಬ್ದ ವಿ-
ಭಕ್ತಿ ವಿಷಮಗಳಿರಲು ಜೀವ-
ನ್ಮುಕ್ತಿಯೋಗ್ಯವಿದೆಂದು ಸಿರಿಮದನಂತ ಮೆಚ್ಚುವನೆ ೭

ಆಶುಕವಿಕುಲಕಲ್ಪತರು ದಿ–
ಗ್ದೇಶವರಿಯಲು ರಂಗನೊಲುಮೆಯ
ದಾಸಕೂಟಸ್ಥರಿಗೆರಗಿ ನಾ ಬೇಡಿಕೊಂಬುವೆನು
ಈ ಸುಲಕ್ಷಣ ಹರಿಕಥಾಮೃತ
ಮೀಸಲಳಿಯದೆ ಸಾರ ದೀರ್ಘ
ದ್ವೇಷಿಗಳಿಗೆರೆಯದಲೆ ಸಲಿಸುವುದೆನ್ನ ಬಿನ್ನಪವ ೮

ಪ್ರಾಸಗಳ ಪೊಂದಿಸದೆ ಶಬ್ದ
ಶ್ಲೇಷಗಳ ಶೋಧಿಸದೆ ದೀರ್ಘ
ಹ್ರಸ್ವಗಳ ಸಲ್ಲಿಸದೆ ಷಟ್ಪದಿಗತಿಗೆ ನಿಲ್ಲಿಸದೆ
ದೂಷಕರು ದಿನದಿನದಿ ಮಾಡುವ
ದೂಷಣವೇ ಭೂಷಣವು ಎಂದುಪ–
ದೇಶಗಮ್ಯವು ಹರಿಕಥಾಮೃತಸಾರ ಸಾಧ್ಯರಿಗೆ ೯

ಅಶ್ರುತಾಗಮಭಾವ ಇದರ ಪ–
ರಿಶ್ರಮವು ಬಲ್ಲವರಿಗಾನಂ–
ದಾಶ್ರುಗಳ ಮಳೆಗರಿಸಿ ಮೈಮರೆಸುವ ಚಮತ್ಕೃತಿಯ
ಮಿಶ್ರರಿಗೆ ಮರೆಮಾಡಿ ದಿತಿಜರ
ಶಸ್ತ್ರದಲಿ ಕಾಯದಿಪ್ಪರಿದರೊಳು–
ಪಶ್ರುತಿಗಳು ತಪ್ಪುವುವೇ ನಿಜ ಭಕ್ತಿಯುಳ್ಳರಿಗೆ ೧೦

ನಿಚ್ಚ ನಿಜಜನ ಮೆಚ್ಚ ಗೋಧನ
ಅಚ್ಚ ಭಾಗ್ಯವು ಪೆಚ್ಚೆ ಪೇರ್ಮೆಯು
ಕೆಚ್ಚ ಕೇಳ್ವನು ಮೆಚ್ಚ ಮಲಮನ ಮುಚ್ಚಲೆಂದೆನುತ
ಉಚ್ಚವಿಗಳಿಗೆ ಪೊಚ್ಚ ಪೊಸದೆನ–
ಲುಚ್ಚರಿಸಿದೀ ಸಚ್ಚರಿತ್ರೆಯ
ನುಚ್ಚರಿಸೆ ಸಿರಿವತ್ಸಲಾಂಛನ ಮೆಚ್ಚಲೇನರಿದು ೧೧

ಸಾಧು ಸಭೆಯೊಳು ಮೆರೆಯೆ ತತ್ವಸು–
ಬೋಧವೃಷ್ಟಿಯ ಗರೆಯೆ ಕಾಮ
ಕ್ರೋಧ ಬೀಜವ ಹುರಿಯೆ ಖಳರೆದೆ ಬಿರಿಯೆ ಕರಕರಿಯ

ವಾದಿಗಳ ಪಲ್ಮುರಿಯೆ ಪರಮವಿ–
ನೋದಿಗಳ ಮೈ ಮರೆಯಲೋಸುಗ
ಹಾದಿ ತೋರಿದ ಹಿರಿಯ ಬಹು ಚಾತುರಿಯ ಹೊಸ ಪರಿಯ ೧೨

ವ್ಯಾಸತೀರ್ಥರ ಒಲವೊ ವಿಠಲೋ–
ಪಾಸಕ ಪ್ರಭುವರ್ಯ ಪುರಂದರ
ದಾಸರಾಯರ ದಯವೊ ತಿಳಿಯದು ಓದಿ ಕೇಳದಲೆ
ಕೇಶವನ ಗುಣಮಣಿಗಳನು ಪ್ರಾ–
ಣೇಶಗರ್ಪಿಸಿ ವಾದಿರಾಜರ
ಕೋಶಕೊಪ್ಪುವ ಹರಿಕಥಾಮೃತಸಾರ ಕೇಳಿದರು ೧೩

ಹರಿಕಥಾಮೃತಸಾರ ನವರಸ
ಭರಿತ ಬಹುಗಂಭೀರ ರತ್ನಾ–
ಕರ ರುಚಿರ ಶೃಂಗಾರ ಸಾಲಂಕಾರ ವಿಸ್ತಾರ
ಸರಸ ನರಕಂಠೀರವಾಚಾ–
ರ್ಯರ ಜನಿತ ಸುಕುಮಾರ ಸಾತ್ವೀ–
ಕರಿಗೆ ಪರಮೋದಾರ ಮಾಡಿದ ಮರೆಯದುಪಕಾರ ೧೪

ಅವನಿಯೊಳು ಜ್ಯೋತಿಷ್ಮತಿಯ ತೈ–
ಲವನು ಪಾಮರನುಂಡು ಜೀರ್ಣಿಸ–
ಲವನೆ ಪಂಡಿತನೋಕರಿಪವಿವೇಕಿಯಪ್ಪಂತೆ
ಶ್ರವಣಮಂಗಳ ಹರಿಕಥಾಮೃತ
ಸವಿದು ನಿರ್ಗುಣಸಾರಮಕ್ಕಿಸ–
ಲವ ನಿಪುಣನ್ನೈ ಯೋಗ್ಯಗಲ್ಲದೆ ದಕ್ಕಲರಿಯದಿದು ೧೫

ಅಕ್ಕರದೊಳೀ ಕಾವ್ಯದೊಳು ಒಂ–
ದಕ್ಕರವ ಬರೆದೋದಿದವ ದೇ–
ವರ್ಕಳಿಂ ದುಸ್ತ್ಯಜ್ಯನೆನಿಸಿ ಧರ್ಮಾರ್ಥಕಾಮಗಳ
ಲೆಕ್ಕಿಸದೆ ಲೋಕೈಕನಾಥನ
ಭಕ್ತಿಭಾಗ್ಯವ ಪಡೆದ ಜೀವ
ನ್ಮುಕ್ತಗಲ್ಲದೆ ಹರಿಕತಾಮೃತಸಾರ ಸೊಗಸುವದೆ ೧೬

ಒತ್ತಿ ಬಹ ವಿಘ್ನಗಳ ತಡೆದಪ
ಮೃತ್ಯುವಿಗೆ ಮರೆಮಾಡಿ ಕಾಲನ
ಭೃತ್ಯರಿಗೆ ಭೀಕರವ ಪುಟ್ಟಿಸಿ ಸಕಲಸಿದ್ಧಿಗಳ
ಒತ್ತಿಗೊಳಿಸಿ ವನರುಹೇಕ್ಷಣ
ನೃತ್ಯಮಾಡುವನವನ ಮನೆಯೊಳು
ನಿತ್ಯಮಂಗಳ ಹರಿಕಥಾಮೃತಸಾರ ಪಠಿಸುವರ ೧೭

ಆಯುರಾರೋಗ್ಯೈಶ್ವರ್ಯ ಯಶ
ಧೈರ್ಯ ಬಲ ಸಮಸಹಾಯ ಶೌರ್ಯೋ
ದಾರ್ಯ ಗುಣಗಾಂಭೀರ್ಯ ಮೊದಲಾದ
ಆಯತಗಳುಂಟಾಗಲೊಂದ–
ಧ್ಯಾಯ ಪಠಿಸಿದ ಮಾತ್ರದಿಂ ಶ್ರವ–
ಣೀಯವಲ್ಲದೆ ಹರಿಕಥಾಮೃತಸಾರ ಸುಜನರಿಗೆ ೧೮

ಕುರುಡ ಕಂಗಳ ಪಡೆವ ಬಧಿರನಿ–
ಗೆರಡುಕಿವಿ ಕೇಳ್ವಹವು ಬೆಳೆಯದ
ಮುರುಡ ಮದನಾಕೃತಿಯ ತಾಳ್ವನು ಕೇಳ್ದಮಾತ್ರದಲಿ
ಬರಡು ಹೈನಾಗುವುದು ಕೇಳ್ದರೆ
ಕೊರಡು ಪಲ್ಲವಿಸುವುದು ಪ್ರತಿದಿನ
ಹುರುಡಿಲಾದರು ಹರಿಕಥಾಮೃತಸಾರವನು ಪಠಿಸೆ ೧೯

ನಿರ್ಜರತರಂಗಿಣಿಯೊಳನುದಿನ
ಮಜ್ಜನಾದಿ ಸಮಸ್ತ ಕರ್ಮವಿ–
ವರ್ಜಿತಾಶಾಪಾಶದಿಂದಲಿ ಮಾಡಿದಧಿಕಫಲ
ಹೆಜ್ಜೆಹೆಜ್ಜೆಗೆ ದೊರೆಯದಿಪ್ಪವೆ
ಸಜ್ಜನರು ಶಿರತೂಗುವಂದದಿ
ಘರ್ಜಿಸುತಲೀ ಹರಿಕಥಾಮೃತಸಾರ ಪಠಿಸುವರ ೨೦

ಸತಿಯರಿಗೆ ಪತಿಭಕುತಿ ಪತ್ನಿ
ವ್ರತ ಪುರುಷರಿಗೆ ಹರಿಷ ನೆಲೆಗೊಂ–

ಡತಿಮನೋಹರರಾಗಿ ಗುರುಹಿರಿಯರಿಗೆ ಜಗದೊಳಗೆ
ಸತತ ಮಂಗಳವೀವ ಬಹು ಸು–
ಕೃತಿಗಳೆನಿಸುತ ಸುಲಭದಿಂ ಸ
ದ್ಗತಿಯು ಪಡೆವರು ಹರಿಕಥಾಶಮೃತಸಾರವನು ಪಠಿಸೆ ೨೧

ಎಂತು ವರ್ಣಿಸಲೆನ್ನಳವೆ ಭಗ–
ವಂತನಮಲ ಗುಣಾನುವಾದಗ–
ಳೆಂತು ಪರಿಯಲಿ ಪೂರ್ಣಭೋಧರ ಮತವ ಹೊಂದಿದರ
ಚಿಂತನೆಗೆ ಬಪ್ಪಂತೆ ಬಹು ದೃ–
ಷ್ಟಾಂತಪೂರ್ವಕವಾಗಿ ಪೇಳ್ದ ಮ–
ಹಂತರಿಗೆ ನರರೆಂದು ಬಗೆವರೆ ನಿರಯಭಾಗಿಗಳು ೨೨

ಮಣಿಖಚಿತ ಹರಿವಾಣದಲಿ ವಾ
ರಣಸುಭೋಜ್ಯ ಪದಾರ್ಥ ಕೃಷ್ಣಾ
ರ್ಪಣವೆನುತರ್ಪಿಸಿದವರಿಗೋಸುಗ ನೀಡುವಂದದಲಿ
ಪ್ರಣತರಿಗೆ ಪೊಂಗನಡ ವರವಾ
ಙ್ಮಣಿಗಳಿಂ ವಿರಚಿಸಿದ ಶ್ರುತಿಯೊ
ಳುಣಿಸಿ ನೋಡುವ ಹರಿಕಥಾಮೃತಸಾರವನುದಾರ ೨೩

ದುಷ್ಟರೆನ್ನದೆ ದುರ್ವಿಷಯದಿಂ
ಪುಷ್ಟರೆನ್ನದೆ ಪೂತಕರ್ಮ
ಭ್ರಷ್ಟರೆನ್ನದೆ ಶ್ರೀದವಿಠ್ಠಲ ವೇಣುಗೋಪಾಲ
ಕೃಷ್ಣ ಕೈಪಿಡಿಯುವನು ಸತ್ಯ ವಿ–
ಶಿಷ್ಟ ದಾಸತ್ವವನು ಪಾಲಿಸಿ
ನಿಷ್ಠೆಯಿಂದಲಿ ಹರಿಕಥಾಮೃತಸಾರ ಪಠಿಸುವರ ೨೪

## ೬೫

### ವಾಯುದೇವರು

ಶಾಂತ ಜನರಿಗೀಶಾ ರವಿಕುಲ
ಕಾಂತನ ನಿಜದಾಸ ಪ

ಭ್ರಾಂತಿ ಬಿಡಿಸಿ ನಿಶ್ಚಿಂತ ಮನದಿ ವೇ-
ದಾಂತವೇದ್ಯನಲಿ ಸಂತಸ ಕೊಡುವನ ಅ.ಪ.

ಕಡಲ ದಾಟಿ ಬಂದೂ ಒಡೆಯನ
ಮಡದಿಗುಂಗುರ ತಂದೂ
ಸಡಗರದಲಿ ತುಡುಗ ದೈತ್ಯವ ಕೊಂದು
ಅಡಿಯಿಡೆ ಲಂಕೆ ಸುಟ್ಟು ಸುಡುಭುಗಿ ಮಾಡಿದೆ ೧

ಏಕಚಕ್ರದಲ್ಲೀ ಬಕಗೆಂ-
ದ್ಹಾಕಿದ ಗ್ರಾಸದಲೀ
ಶಾಖಡಿಸಲಬಿಡದೇಕತುತ್ತು ಮಾಡಿ
ಭೀಕರ ದೈತ್ಯನವಲೋಕಿಸದ್ಹೊಡದೆಲೋ ೨

ವಾಯು ಹನುಮ ಭೀಮ ಮಧ್ವಾ
ಕಾರ್ಯೋ ಪೂರ್ಣಕಾಮಾ
ಸಾಯ ಬಡಿದೀ ನೀ ಮಾಯಿಗಳೆಲ್ಲರ
ರಾಯ ಶ್ರೀನಿಧಿವಿಠಲಾಯಗೆ ತಿಳಿಸಿದೆ ಎಲೆಲೋ ೩

## ೬೬

ಸೂರ್ಯಾಂತರ್ಗತ ನಾರಾಯಣ ಪಾಹಿ
ಆರ್ಯ ಮಾರುತಿ ಪಂಚಪ್ರಾಣ ಪ

ಭಾರ್ಯಳೆಂದೊಡಗೂಡಿ ಸರ್ವಜೀವರೊಳಿದ್ದು
ವೀರ್ಯ ಕೊಡುತಲಿರ್ದ ಶರ್ವಾದಿ ವಂದ್ಯಾತಿ ಅ.ಪ.

ದ್ರುಪದನ ಸುತೆ ನಿನ್ನ ಕರೆಯೆ ಅಂದು
ಕೃಪಣ ವತ್ಸಲ ಶೀರೆ ಮಳೆಯೇ
ಅಪರಿಮಿತವು ನೀರ ಸುರಿಯೆ ಸ್ವಾಮಿ
ಕುಪಿತ ದೈತ್ಯರ ಗರ್ವ ಮುರಿಯೇ
ಜನಸೋ ಜನರ ವಿಪತ್ತು ಕಳೆದೆ
ಈ ಪರಿಯ ದೇವರನೆಲ್ಲಿ ಕಾಣೆನೊ
ತಪನಕೋಟ ಪ್ರಕಾಶ ಬಲ ಉಳ್ಳ
ಕಪಿಲರೂಪನೆ ಜ್ಞಾನದಾಯಕ ೧

ಹೃದಯ ಮಂಟಪದೊಳಗೆಲ್ಲ ಪ್ರಾಣ–
ದದುಭುತ ಮಹಿಮೆಯ ಬಲ್ಲ
ಸದಮಲನಾಗಿ ತಾವೆಲ್ಲ ಕಾರ್ಯ
ಮುದದಿ ಮಾಡಿಸುವ ಶ್ರೀನಲ್ಲ
ಹದುಳ ಕೊಡುತಲಿ ಬದಿಲಿ ತಾನಿದ್ದು
ಒದಗಿ ನಿನಗೆಲ್ಲ ಮದುವೆ ಮಾಡಿದ
ಪದುಮಜಾಂಡೋದರ ಸುದತಿಯ
ಮುದದಿ ರಮಿಸೆಂದು ಒದಗಿ ಬೇಡುವೆ ೨

ಎನ್ನ ಬಿನ್ನಪವನ್ನು ಕೇಳೊ ಪ್ರಿಯ
ಮನ್ನಿಸಿ ನೋಡೊ ದಯಾಳೋ
ಹೆಣ್ಣಬಲೆಯ ಮಾತು ಕೇಳೂ ನಾನು
ನಿನ್ನವಳಲ್ಲವೇನು ಹೇಳೋ
ನಿನ್ನ ಮನದನುಮಾನ ತಿಳಿಯಿತು
ಕನ್ಯಾವಸ್ಥೆಯು ಎನ್ನದೆನ್ನದೆ
ಚೆನ್ನ ಶ್ರೀನಿಧಿವಿಠಲ ಪ್ರಾಯದ
ಕನ್ನೆ ಇವಳನು ದೇವ ಕೂಡಿಕೊ ೨

## ೬೭

### (ಜಗನ್ನಾಥದಾಸರು)

ಸೇರಿ ಸುಖಿಸು ಮಾನವ
ಗುರು ಚರಣ ಸರೋಜವ ಪ

ಸೇರಿದ ಶರಣರ ಘೋರ ಪಾತಕವೆಂಬ
ವಾರಿಧಿ ಭವಕೆ ಸಮೀರ ಜಗನ್ನಾಥ
ಸೂರಿವರ್ಯ ದಾಸಾರ್ಯರಂಘ್ರಿಯನು ೧

ತಾರತಮ್ಯವ ತಿಳಿಯದೆ ಕಲಿಯುಗದಿ ಮುಕ್ತಿ-
ದಾರಿಕಾಣದೆ ಭವದಿ ಬಿದ್ದ ಜ-
ನರುದ್ಧಾರ ಮಾಡಲು ದಯದಿ ಬ್ಯಾಗವಾಟದಿ
ನರಸಿಂಗಾಖ್ಯ ವಿಪ್ರಗಾರ ದೋಳುದ್ಭವಿಸಿ
ಶ್ರೀರಮಾಪತಿಯ ಚಾರು ಕಥಾಮೃತ
ಸಾರವ ಧರೆಯೋಳು ಬೀರಿದಂಥವರ ೨

ಮೇದಿನಿಯೊಳು ಚರಿಸಿ ವಾಕ್ಯಾರ್ಥದಿ ಬಹು
ವಾದಿಗಳನೆ ಜಯಿಸಿ ಎನಿಸಿದರು ಪೂರ್ಣ
ಬೋಧ ಮತಾಬ್ಧಿಗೆ ಶಶಿನೃಪ ಮಾನ್ಯರೆನಿಸಿ
ಶ್ರೀದ ಪ್ರಹ್ಲಾದನನುಜ ಸಹ್ಲಾದರೆ ಇವರೆಂದು
ಸಾದರ ಬಿಡದ ಪಾದಪಂಕಜಾರಾಧಕರಿಗೆ ಸುರಪಾದರೆನಿಪರ ೩

ಕ್ಷೋಣಿ ವಿಬಂಧ ಗಣದಿ ಸೇವೆಯಗೊಂಡು
ಮಾನವಿ ಎಂಬ ಕ್ಷೇತ್ರದಿ ಮಂದಿರ ಮಧ್ವ
ಸ್ಥಾಣುವಿನೊಳು ಮುದದಿ ಕಾರ್ಪರವೆಂಬ
ಕಾನನದಲ್ಲಿ ಕೃಷ್ಣವೇಣಿ ಕುಲದಿ ಮೆರೆವ
ಶ್ರೀನಿಧಿ ನರಪಂಚಾನನಂಘ್ರಿಯುಗ
ಧ್ಯಾನದಿ ಕುಳಿತ ಮಹಾನುಭಾವರನು ೪

## ೬೮

### ಶ್ರೀಹರಿಯ ಸ್ತುತಿ

ಅಂಬುಜಾಕ್ಷನೆ ಪಾಲಿಸೊ ಅಂಬುಜಾಕ್ಷನೆ ಕೇಳು
ಕಂಬುಕಂಧರ ನಿನ್ನ ನಂಬಿದ ಜನರನು ಇಂಬಾಗಿರಕ್ಷಿಸುವ ಪ

ಹರಿಯೆ ನೀ ಭಕುತರ ಸುರತರುವೆಂದು
ಅರಿದು ನಿನ್ನಡಿಗೆ ಬಂದು ಕರುಣಾಸಿಂಧು
ವರವೇನು ಎನ್ನ ಪರಿಚರ್ಯವೆಲ್ಲವನು
ಜರಿದು ಎನ್ನನು ಪೊರಿಯೆಂದು ಭಕ್ತರ ಬಂಧು
ಕರಿವರದನೀತರಿವಿದುರುಳನ ಪೊರೆವಿ ಸುಜನರ
ಅರವಿದೂರನೆ ಸ್ಮರಣೆಮಾತ್ರದಿ ತರಣಿಸುತನ
ಪುರದಭಯವನು ಪರಿಹರಿಸುವಿ ೧

ಭವರೋಗವೈದ್ಯ ನೀ ಅವಧಿಯೂ ಇಲ್ಲದೆ
ಸ್ವವಶವ್ಯಾಪಿಯಾಗಿ ದಿವಿಜಯ ಪೊರೆವಿ
ಭಕುತರ ಕಾಯ್ವಿ ಅವನೀಲಿ ಜನಿಸಿದ
ಪವನ ವೈರಿಯ ಕವಿಶಿ ಮೋಹದಿ ಕೆಡಿಶಿದಿ
ನರನನ್ನು ಪೊರದಿ ಅವನಿಪಿತ ನಿನ್ನ
ಯುವತಿ ವೇಷವ ಕವಿಗಳೆಲ್ಲರು ಸ್ತವನ ಮಾಳ್ಪರು
ಪವನ ಪ್ರಿಯನೆ ಭುವನ ತಾತನೆ
ಶಿವಗೆ ವರವಿತ್ತೆ ಪವನನಯ್ಯನೆ ೨

ತರಳ ಪ್ರಹ್ಲಾದನ ಪೊರೆದು ಪಾಂಚಾಲಿಗೆ
ವರವಿತ್ತೆ ಕರಿಪುರಾಡರಸರ ಪ್ರಭುವೆ
ಸುರತರು ವೇಷಶರಣಾಗತರನು ಪೊರೆವನೆಂಬ ನಿಜ
ಬಿರುದನು ಮೆರಿಸುತ ಶಿರಿಯಿಂದೊಪ್ಪುತ

ವರ ಭಕ್ತಾಗ್ರೇಸರ ನರಪಾಂಬರೀಷನ ಪೊರೆವಂಥ
ಸುರಪತಿ ಶಿರಿವತ್ಸಾಂಕಿತನೆ ೩

## ೬೯

ಇಲ್ಲಿಲ್ಲ ಸ್ವಾಮಿ ಅಲ್ಲಿಲ್ಲ ಎಲ್ಲವೂ ಸುಳ್ಳೆಂಬ
ಖುಲ್ಲ ಜನರುಗಳಿಗಿಲ್ಲಿಲ್ಲ ಪ

ಸತಿಸುತರುಗಳೆಲ್ಲ ಅತಿಹಿತರೆನ್ನುತ
ರತಿಪತಿಪಿತನ ಮರೆತು ಇಪ್ಪ ಜನರಿಗೆ ೧

ಮಿಗಿಲಾದ ಮಹಿಮೆಯ ಜಗದೊಳು ತೋರುವ
ಅಗಣಿತ ಮಹಿಮಗೆ ಸೊಗಸದ ಜನರಿಗೆ ೨

ಶರಧಿಶಯನನಾದ ಶ್ರೀವತ್ಸಾಂಕಿತನನ್ನು
ಮರೆತು ಮರಳುಗೊಂಡು ಕರಗಿ ಕುಂದುವ ಜನರಿಗಿಲ್ಲಿಲ್ಲ ೩

## ೭೦

ಉಡಪಿಯ ಕೃಷ್ಣ ಯನ್ನ ನುಡಿ ಲಾಲಿಸೋ ಪ

ಸಡಗರದಲಿ ನೀನು ಮಡದಿವೃಂದ ಬಿಟ್ಟು
ಕಡಲಪಯಣದಿಂದಲಿ ವಂದು ಬಿಡದೆ ಭಕ್ತರಿಗೆಲ್ಲ
ವಡೆಯನಾಗಿ ನೀನು ಷಡುರಸ ಅನ್ನವ ಕೊಡುತನಿಂತಿಹೆ ೧

ಪ್ರಾಣಪತಿಯು ಅತಿ ಜಾಣನೆಂದೆನಿಶೆ ನೀ
ಕಾಣಿಸುವಿ ನರಪ್ರಾಣಿಗೆ
ಮಾಣವಕನೆ ನೀ ಜಾಣನೆಂದೆನುತಲಿ
ಧ್ಯಾನಮಾಡಿ ಮೋದಿಸುವರು ೨

ಧರೆಯೊಳು ರಜತಪೀಠ ಪುರದೊಳೂ ನೆಲೆಸಿಪ್ಪ
ಸುರವೃಂದನುತ ಬೇಗ ಸಲಹೆನ್ನ

ವರಮಧ್ವ ಮುನಿನುತ ಸರಸಿಜಭವ ವಂದ್ಯ
ಶ್ರೀವತ್ಸಾಂಕಿತ ವೆಂಕಟಪತಿಯೇ ೩

## ೭೧

ಎಂದಿಗೆ ನೀ ಯೆನ್ನ ಮುಂದಕೆ ಬರುವೆಯೊ
ಸುಂದರ ಮೂರುತಿಯೆ ನಂದದಿ ಭಕುತರ
ವೃಂದಗಳೆಲ್ಲವ ಸಂದೇಹವಿಲ್ಲದೆ
ಮುಂದಕೆ ಕರದೊಯ್ವೆ ಪ

ಪಂಕಜಾಕ್ಷನೆ ನೀನು ಕಿಂಕರ ಜನರಾ-
ತಂಕಗಳೆಲ್ಲವ ಶಂಕಿಸದೆ
ವೆಂಕಟನಾಮಕ ಸಂಕಟಪರಿಹರವವ-
ಳಾಂಕರನರವ ನಿಶ್ಶಂಕೆಯಿಂದಲಿಯಿತ್ತು ೧

ಆರುವೈರಿಗಳೆನ್ನ ಗಾರುಮಾಡುವರಯ್ಯಾ
ಆರು ಕಾವರು ಇಲ್ಲಾ ಮಾರಜನಕನೆ
ಪಾರುಗಾಣಿಸದೆ ನೀ ದೂರಗೈಸಲು ಯನ್ನ-
ನಾರು ರಕ್ಷಿಪರೊ ದೋಷವಿದೂರನೆ ಪೇಳೋ ೨

ಯರಬೆರಡೆನಾಗಿತ್ತು ಪೊರಿಯೋ ದೇವ್ವರ ದೇವ
ಕರುಣಾಬ್ಧಿ ನೀನೆಂದು ವರವೋದು ಶ್ರುತಿಯು
ಶರಣಾಗತನನ್ನು ಪೊರೆಯದೆ ಬಿಡುವಂದು
ಸರಿಯೇನೋ ಕರುಣಾಳು ಸಿರಿವತ್ಸಾಂಕಿತನೆ ೩

## ೭೨

ಕರುಣದಿ ಬಂದು ನಿನ್ನ ಚರಣ ಕಮಲವೆನ್ನ
ಶಿರದ ಮೇಲಿಟ್ಟು ನೀ ಪೊರಿಯೊ ಕೃಪಾರಸ ಸುರಿಯೋ

ಗರುಡಧ್ವಜ ನೀನು ಸ್ಮರಮಣ ನಿನ್ನ ಭಕುತರ ಸುರಧೇನೆಂದು
ಕರೆವರು ನಿನ್ನನು ಪ

ಸರಸಿಯೊಳ್ಕರಿರಾಜ ಭರದಿಂದ ತನ್ನವುದ್ಧರಿಸೆಂದು ಮೊರೆಯಿಡೆ
ಪೊರೆದೆಯಲ್ಲೊ ಶಿರಿಯೊಳುನುಡಿಯದೋ ಶರಣಾಗತರನ್ನು
ಪೊರೆವೆನೆಂಬ ನಿಜ ಬಿರಿದನು ಮೆರಿಸಿದಿ ೧

ಆಗಮವಂದಿತ ನಾಗಭೂಷಣ ತಾತ
ಮೇಘವಾಹನ ಸುತನ ಬ್ಯಾಗ ರಕ್ಷಿಸಿದಿ
ಭಾಗವತರ ಪ್ರಿಯ ಜಾಗುಮಾಡದೆ ಎನ್ನ-
ದಾಗಲು ರಕ್ಷಿಸೆಂದು ಬಾಗಿ ಬೇಡುವೆನು ೨

ಕಾವನು ನೀನಲ್ಲದೆ ಯಾವ ದೇವರನು ನಾ
ಆವಲ್ಯು ಕಾಣೆನು ಭಾವಜಜನಕನೆ
ಶ್ರೀವಾಸುದೇವನ ಗೋವೃಂದ ರಕ್ಷಕನೆ
ಭಾವಿ ಬ್ರಹ್ಮನ ಪತಿ ಶ್ರೀವತ್ಸಾಂಕಿತನೆ ೩

## ೭೩

ಕಾಯೋ ಬಾರೋ ಹರಿ ಈಯ್ಯೋ ವರ ಧೋರೀ
ಜಾರಚೋರಖರ ಅರಿನಾಶಕಾರಿ ಪ

ವಾಯುದೇವಪಿತ ತೋಯಜಾಕ್ಷಿ ಸೀತಾ
ಪ್ರಿಯ ನೀನು ತ್ರಾತ ರಾಯ ಜಗನ್ನಾಥ ೧

ಕಾಮನಯ್ಯ ನೀನು ಮಾಮನೋಹರನು
ವಾಮನಾದಿ ನೀನು ರಾಮನಾಮಕನು ೨

ಕರಿರಾಜನನ್ನು ತ್ವರಿತಾದಿ ಕಾಯ್ದಿ
ಶ್ರೀವತ್ಸಾಂಕಿತ ಹರಿ ವೆಂಕಟೇಶ ೩

## ೭೪

ಕೊಳ್ಳೇಗಾಲದ ಲಕ್ಷ್ಮೀನಾರಾಯಣ ಯನ್ನ
ಸೊಲ್ಲ ಲಾಲಿಸಿ ಬೇಗ ಸಲಹು ದೇವಾ
ಕ್ಷುಲ್ಲಕರೂ ಯನ್ನ ಖುಲ್ಲ ಮಾನವನೆಂದು
ತಲ್ಲಣಗೊಳಿಸೋರು ಭವನಾವಾ 	ಪ

ಓಡಿಬಂದೆನೊ ನಿನ್ನ ನೋಡಬೇಕೆನುತಲಿ
ಗಾಡಿಕಾರದೇವ ತ್ವರೆಯಿಂದ ದೂಡಬ್ಯಾಡೊ ನನ್ನ
ರೂಢಿಯವಳಗೆ ನೀ ನೀಡು ನಿನ್ನಯ ಪಾದ ಮುಕುಂದಾ 	೧

ಅಭಯವ ನೀಡಯ್ಯಾ ಇಭರಾಜವರದನೆ
ಉಭಯ ಸುಖಪ್ರದ ನೀನೆಂದು
ಅಭಿನಮಿಸುವೆನಯ್ಯ ಶಬರಿಯಂಜಲನುಂಡು
ಬುಜೆಗಧವಕೊಂಡಿ ವಿಬುಧವಂದಿತನೆ 	೨

ಮೆರೆಯುವಿ ನೀ ಬಲು ಉರಗರಾಜಶಾಯಿ
ವರವಿಪ್ರನಿಕರದಿಂ ಪೂಜೆಗೊಂಡು
ಥರಥರದಲಿ ನೀ ಪೊರಹಿದೆ ಭಕ್ತರ
ಮರೆಯಬ್ಯಾಡ ನನ್ನ ಶಿರಿವತ್ಸಾಂಕಿತನೆ 	೩

## ೭೫

ಗೋಪಾಲಕೃಷ್ಣರಾಯ ತಾಪತ್ರಯಗಳೆಲ್ಲ
ನೀ ಪರಿಹರಿಸು ಜೀಯ್ಯಾ 	ಪ

ವಿದ್ಯಾಶ್ರೀ ಸಿಂಧುತೀರ್ಥ ಶುದ್ಧ ಪದ್ಧತಿಯಿಂದ
ಶುದ್ಧ ಪೂರ್ವಕ ನಿನ್ನ ಭಜಿಪೆನು ಅನುದಿನ
ಮುದ್ದುಮೋಹನ ನೀನು ತಿದ್ದಿ ಸರ್ವರ ಹೃದಯ
ಬದ್ಧನಾಗಿರುತಿ ಪ್ರಸಿದ್ಧ ಮೂರುತಿ ವೇಣು 	೧

ಸುರಪನ ಗರ್ವವ ಹರಣವ ಮಾಡಿ ನೀ
ವರವಿತ್ತೆ ಕಾಳಿಂಗ ಉರಗನಿಗೆ
ಸುರರ ವೃಂದಗಳೆಲ್ಲ ಪೊರೆವುತ ಸರ್ವದಾ
ವರ ಕಲ್ಪತರುವೆಂದು ಮೆರೆಯುವಿ ಧರೆಯೊಳು ೨

ಗಿರಿಯನು ಪೊತ್ತು ನೀ ಪೊರೆದಿಹ ತುರುಗಳ
ಮರೆಯೋದು ಯನ್ನನು ಸರಿಯೆನೊ ಹರಿಯೆ
ಶರಣ ರಕ್ಷಕ ಬೇಗ ಕರುಣಾಳು ಕಾಯಯ್ಯ
ಶ್ರೀವತ್ಸಾಂಕಿತನಾದ ವರಜಾರಚೋರ ವೇಣು ೩

## ೭೬

ಜಯ ಜಯವೆಂಬೆ ನಾನು ಶ್ರೀವರ ನಿನಗೆ ಪ

ಜಯವೆಂಬೆ ಶ್ರೀವರನೆ ಭಯ ದೋಷವರ್ಜಿತನೆ
ಅಯನ ವತ್ಸರಗಳೆಂಬ ನಿಯಮವು ಇಲ್ಲದವನೆ ಅ.ಪ.

ಕಾಲನಾಮಕ ನೀನು ಕಾಲನಾಮಕ ಚಕ್ರ ಸಾಲಾಗಿ
ತಿರುಗಿಣಿ ಪಾಲಿಸುವಿ
ಪಾಲಗಡಲಿನಲ್ಲಿ ಆಲದೆಲೆಯಮೇಲೆ ಕಾಲನು
ನೀಡಿ ನೀ ಮಲಗಿರುವಿ ೧

ಸೃಷ್ಟಿಕರ್ತನು ಸೃಷ್ಟಿಪಾಲಕ ನೀನು ಶಿಷ್ಟ ಜನರಭಿಪ್ರದ ನೀನು
ಕಷ್ಟಲೇಶವಿಲ್ಲದೆ ಶಿಷ್ಟ ಜನರುಗಳರಿಷ್ಟವೆಲ್ಲವ ನೀ ಕಟ್ಟಿ ಕೆಡಹುವಿ ೨

ಭೂವಲಯದಿ ಭವನಾವಿಕನೆ ಯನ್ನ ನಾನೀಪರಿಯಲಿ ನೀಯೋ
ಶ್ರೀವಾಸುದೇವನೆ ಭಾವಜನಯ್ಯನೆ ಕಾವ ಭಕ್ತರ
ದೇವ ಶ್ರೀವತ್ಸಾಂಕಿತನೆ ೩

## ೭೭

ದಯಮಾಡೋ ರಂಗ ಹೇ ಕೃಪಾಂಗ ಪ

ದಯಮಾಡಿ ನೀಯೆನ್ನ ಭಯವ ಪರಿಹರಿಸು ಚಿ-
ನ್ಮಯ ಮೂರುತಿ ಸುಖಮಯ ಮಂದರಧರ ಅ.ಪ.

ಪತಿತ ಪಾವನ ನೀನು ಪತಿತಾಗ್ರೇಸರ ನಾನು
ಜತನದಿ ಭಕುತಿಯ ಪಥವ ತೋರಿ ನೀನು ೧

ಮುಕ್ತಿ ಫಲಪ್ರದ ಶಕ್ತಿಯು ನಿನ್ನ ವ್ಯತಿರಿಕ್ತವಲ್ಲವೆಂದು
ಭಕ್ತಿಯುವರವಳು...[?] ೨

ಕಾಮಧೇನು ನೀನು ಕಾಮನಯ್ಯನು ನೀನು
ಕಾಮಿತಫಲದಾತ ಮಾಮನೋಹಕ ತ್ರಾತ ೩

ಸೃಷ್ಟಿಪಾಲಕ ನಿನ್ನ ಯಷ್ಟೆಂತವರ್ಣಿಪೆ
ಅಷ್ಟು ಕರ್ತೃತ್ವಕ್ಕೆ ಶಿಷ್ಟಮೂರುತಿ ನೀನೆ ೪

ಭಾರಿಭಾರಿಗೆ ನಿನ್ನ ಆರಾಧಿಸುವರ
ಚಾರುಚರಣವನು ತೋರೊ ಮಾರಜನಕ ೫

ಸಕಲಕ್ಕು ನೀ ಮುಖ್ಯ ಶಕಟಭಂಜನ ಕೇಳು
ಪ್ರಕಟನಾಗಿಯೆನಗೆ ಶಕ್ತಿಯ ನೀಡೋ ೬

ಭೂವಲಯದೊಳು ನಾ ಆವಲ್ಯಪೋಗಲು
ಕಾವಲು ನೀನೇ ಶ್ರೀವತ್ಸಾಂಕಿತನೇ ೭

## ೭೮

ಧರೆಯೊಳು ನಾ ಬಂದು ಇರುಳು ಹಗಲು ನಿನ್ನ
ಸ್ಮರಣೆಯ ಮಾಡದೆ ಪರರ ಬಾಗಿಲ ಕಾಯ್ದೆ

ಮುರಲೀಧರ ಶ್ರೀಕೃಷ್ಣ ಪೊರಿಯೊ ತಪ್ಪನು ಕ್ಷಮಿಸಿ
ಗೊಲ್ಲರ ಸಖದವನೇ ಶ್ರೀವತ್ಸಾಂಕಿತನೇ
ನಾರದನಂದನ ನೀನು ಗಾರುಮಾಡಿಯೆನ್ನ
ದೂರಗ್ರಹಿಸಲು ಈಗ ಆರು ಕಾಯರೋ
ಜಾರ ಚೋರ ಕೃಷ್ಣ ಮಾರಜನಕ ನೀನು
ಪಾರಗಾಣಿಸು ದೇವ ಶಿರಿವತ್ಸಾಂಕಿತನೇ

## ೭೯

ನೋಡಿರಯ್ಯ ಶ್ರೀರಾಮನ ಮೂರ್ತಿಯ
ಪಾಡಿರೊ ಮಹಿಮೆಯನು ಪ

ಅಗಣಿತ ಮಹಿಮನು ತ್ರಿಗುಣ ವರ್ಜಿತನು
ಸುಗುಣೇಂದ್ರತೀರ್ಥರಿಂದ ಬಗೆಬಗೆ ಪೂಜೆಗೊಂಬ ೧

ಸಂಜೀವವನು ತಂದ ಅಂಜನಸುತನಯ್ಯ
ನಂಜನಗೂಡೊಳಿಪ್ಪ ಕಂಜಾಕ್ಷಕರುಣಿಯ ೨

ವಾರಿಜ ಭವಪಿತ ಮಾರುತ ಗತಿಪ್ರಿಯ
ವಾರಿಧಿಬಂಧಕ ಶ್ರೀರಮಾಧವನನ್ನು ಮಂಗಳ ಪುರದೊಳು
ಮಂಗಳವಾರದಿ ಮಂಗಳದಿ ಮೆರೆದನಂಗನಪಿತನನ್ನು ೩

ವರ ರಾಘವೇಂದ್ರರ ಕರುಣಾಗ್ರೇಸರ ಶ್ರೀವತ್ಸಾಂಕಿತನಾದ
ಅರವಿದೂರನನ್ನು ೪

## ೮೦

ನೋಡೆ ದಯದಿ ಶಿರಿ ನಿನ್ನ ಮಡದಿ ಪ

ನೋಡಿ ನೀ ದಯದಿ ನೀಡು ಕರುಣ ದಯ–
ಮಾಡು ತ್ವರಿತದಿ ಬೇಡುವೆ ಮುದದಿ ಅ.ಪ.

ಮಾಮನೋಹರ ನೀ ಪ್ರೇಮದಿಂದಲಿ ಬಂದ-
ಜಾಮೀಳನ ಪೊರದಾ ಶಾಮಸುಂದರನೇ
ಭಾರಿ ಭಾರಿಗೆ ಎನ್ನ ದಾರಿದ್ರ್ಯವನಧಿಯ
ತಾರಿಸಬೇಕೆಂದು ಶೇರಿದೆ ನಿನ್ನನ್ನು 	೨

ಮರೆಯುವುದುಚಿತವೆ ಶಿರಿಯ ರಮಣ ನೀನು
ತರಳ ಧ್ರುವನನ್ನ ಪೊರೆದಂಥ ದೇವ ನೀ 	೩

ಆರ್ತರಕ್ಷಕ ನೀನು ಪಾರ್ಥನಾ ಸೂತನು
ಸಾರ್ಥಕ ಮಾಡು ಲೋಕ ಕರ್ತೃ ದಯಾಪರನೆ 	೪

ಸರಸಿಜನಾಭನಾದ ಸಿರಿವತ್ಸಾಂಕಿತ ನೀನು
ಮರೆಯಬ್ಯಾಡೆನ್ನಯ ಮೊರೆಯನು 	೫

## ೮೧

ರಥಾರೂಢ ಮಾರುತ ವಂದಿತ ಯನ್ನಾ
ಪಥವ ತೋರೋ ಬೇಗ ಮುಂದಿನ
ಪಥವ ತೋರೋ ಬೇಗ 	ಪ

ಸತೀಸುತರುಗಳು ಅತಿಹಿತರೆಂಬುದು
ಮತಿಗಳ್ದು ಸದ್ಗತಿಯನು ಪಾಲಿಸು 	ಅ.ಪ.

ದೀನ ಜನರ ಸುರಧೇನುವೆ ನೀ ಬಂಧು
ಆನತ ಜನರನು ಮಾನದಿಂದ ಕಾಯೋ 	೧

ಹನುಮ ಭೀಮ ಮಧ್ವ ಮುನಿನುತ ದೇವನೀ
ವನರುಹದಳನೇತ್ರ ಅನಿಮಿಷರೊಡೆಯ 	೨

ದುಷ್ಟ ಜನರುಗಳರಿಷ್ಟಗೋಸುಗ
ಶಿಷ್ಟಿಲಿ ಬಂದು ಸುಜನೇಷ್ಟಪ್ರದನಾದಿ 	೩

## ೮೩

ಶ್ಯಾಮಸುಂದರನೆ ನೀನು ಪ್ರೇಮಾದಿ ಕಾಯೊ

ಧರೆಯೊಳು ನಾ ಬಂದು ಥರಥರದಲ್ಲಿ ನೊಂದು
ಮರುಗಿದೆ ತೋರ್ನಿನ್ನ ಚರಣಕಮಲವಾ

ಅನ್ಯನೆಂದರಿಯದೆ ನಿನ್ನವನೆಂದೆನ್ನ
ಮನ್ನಿಸಿ ಈಗಲೇ ಬನ್ನ ಬಿಡಿಸು ಬಾರೋ

ಶ್ರೀವತ್ಸಾಂಕಿತ ನೀನು ಶರಣಾಗತ ನಾನು
ಪೊರೆಯದೆ ಬಿಡುವದು ಥರವಲ್ಲ ಶ್ರೀಹರಿ
ಸರಸಿಜನಯನ ಬ್ಯಾಗ ಬಾರೊ ನಿನ್ನ

## ೮೪

ಚರಣಕಮಲವನು ತೋರೋ

ಮನವೆಂಬ ಮನೆಯನು ನಿರ್ಮಲಗೊಳಿಸು
ತನುಮನಧನದಾಶೆಯ ನೀ ಬಿಡಿಸೊ

ಆರು ಮಂದಿಯು ಯನ್ನ ಗಾರುಮಾಡುವರು
ಪಾರಗಾಣಿಸು ಬೇಗ ಶ್ರೀ ರಾಮದೇವ ೨

ದಶರಥಸುತ ನೀನು ಶಶಿಮುಖಿಕಾಂತನು
ಶಶಿಧರನುತನೀ ಅಪಮಸಾಹಸನೊ

ಮೂರಾವತ್ಸೇಗಳಲ್ಲು ದೂರಾಪೋಗದೆ ನೀ
ಕಾರುಣ್ಯದಿಂದ ಯೆನ್ನ ಶೇರಿರು ಹರುಷದಿ

ಸಿರಿವತ್ಸಾಂಕಿತ ನೀನು ತರಣಿಸುತನ ಸರವ
ಕರಕರೆ ಬಿಡಿಸಲು ಸುರರ ವೃಂದವ ಬಿಟ್ಟು

## ೮೫

ಸರಸಿಜನಯನಾ ಹೇ ಶ್ರೀನಿವಾಸ ಪ

ಸರಸಿಜಭವಪಿತ ಸರಸಿಜಾಕ್ಷಿಧವ
ಉರಗಶಯನ ನೀ ಉರಗಭೂಷಣವಂದ್ಯ ಅ.ಪ

ಮೂರುಲೋಕದೊಡೆಯನಾದವ ನೀನು
ತೋರೋ ನಿನ್ನ ಮಹಿಮೆಯಾ
ಗಾರುಗೊಂಡಿಹೆ ಪಾರವಾರದೊಳು
ತೋರಿ ನಿನ್ನಯ ಪದ ಸೇರಿಸುತಿರವ ೧

ಬಾಲಕನ ಕಲಭಾಷೆಯ ಮಾತೆಯು ಬೇಗ
ಲಾಲಿಸುವ ತೆರದಿ ಪಾಲಿಸೆನ್ನಾ ಶ್ರೀಲಲಾಮ ನೀ
ಕುಲಲಾವರದನಾದಿ ನೀಲಮೇಘಶ್ಯಾಮಾ ೨

ದಾನವಾಂತಕ ನೀನು ಶಿರಿವತ್ಸಾಂಕಿತ
ದೀನಜನರ ಸುರಧೇನು
ಏನು ತಪ್ಪಿದ್ದರೂ ನೀನು ಕ್ಷಮಿಸು ಇಂದು
ದೇನುವರರ್ಪಿಸಿದಿ ಪ್ರಾಣೇಶವಂದಿತ ೩

## ೮೬

ಸಲಹದೆ ಬಿಡಲಾರೆ ನಿನ್ನ ಪಾದ ಸಲಹವೆ ಬಿಡಲಾರೆ
ಕಲಿತ ಕಲ್ಮಶವನ್ನು ಸುಲಭಾದಿ ಓಡಿಸು ಪ

ಅಂದು ಆ ಕರಿರಾಜ ಸರಸಿಲಿವಂದಿಸಿದಾ ಪಾದ
ಸಂದೇಹವಿಲ್ಲದೆ ಬಂದು ಪೊರೆದ ಮುಕುಂದ ನಿನ್ನಯ ಪಾದ ೧

ನಾರಿಯು ನಿನ್ನ ನೆನದಾ ಮಾತ್ರದಿ ಶೀರಿಯ ಮಾಳೇಗರದಾ
ದಾರಿದ್ರ್ಯಭಯವನ್ನು ದೂರ ಓಡಿಸಿದಂಥ ಮಾರಮಣನಾ ಪಾದ ೨

ಕಮಲನಾಭ ನೀನು ದೇವರ ದೇವ ಸುಮನಸರೊಡೆಯನು
ಕಮಲಾಕ್ಷ ನಿನ್ನಯ ಅಮಿತ ಮಹಿಮೆ ತೋರಿ ಭ್ರಮೆಯ ಹರಿಸು ೩

ಆರು ವೈರಿಗಳು ಮಿತಿಮೀರಿರುವರು ಕೇಳು
ನೀರಜಾಕ್ಷಯನ್ನಾರು ಕಾಯುವರೊ ಧೀರ ನೀನೇ ಪೇಳು ೪

ಪೊರೆಯದೆ ಬಿಡದಿರು ಶಿರಿನುತಚರಣವನ್ನು ತೋರು
ಶಿರವತ್ಸಾಂಕಿತನಾದ ನರಸಖ ನಿನ್ನಯ ಕರುಣವ ಬೀರು ೫

## ೮೭

ಸ್ಮರಿಸುವೆ ಹರಿಯನು ದುರಿತವ ಕಳಿವನು ಪ

ಮರಿಯಾನು ಭಕುತರ ಜರಿವನು ದುರುಳರ
ಪೊರೆವನು ಸುಜನರ ಭರದಿಂದ ಶಿರಿವರ ೧

ಕರಿರಾಜಾನೀತನ ಕರಿಯಲು ಆ ಕ್ಷಣ ತ್ವರಿತಾದಿ ಈ ಜಾಣ
ಪೊರೆದನು ಬಲು ಘನಾ ೨

ಕರುಣಾಳು ಈತನು ಸುರರೊಳು
ಮರಿಯಾನು ನಮ್ಮನು ಶ್ರೀವತ್ಸಾಂಕಿತನು ೩

## ೮೮

ಗಂಗಾಜನಕಗೆ ಮಂಗಳಾರುತಿಯನೆತ್ತಿ
ಮಂಗಳಾಂಗಿಯರು ಸಂಗೀತ ಪಾಡುತ ಪ

ಅನಿಮಿಷೇಶನು ಆನಂದಾತ್ಮಾ ಪ್ರಾಕೃತನು
ಅನಿಲವಾಸಾನಂತಾನಂತಾನಂತನಂತರೂಪನು ೧

ಲಕ್ಷ್ಮೀವಾಸನು ಕುಕ್ಷಿಯೊಳ್ ಬ್ರಹ್ಮಾಂಡಧರನು
ಲಕ್ಷಣಾಗ್ರಜನು ಸುಕ್ಷೇಮದಿಂದಿಡುವ ನಾಮ ೨

ಕರುಣಪೂರ್ಣನು ಸ್ಮರಿಪರ ಭವವಿದೂರ
ಸರಿಮಿಗಿಲಿಲ್ಲದ ಸಿರಿವಿಠಲ ನಾಮಧೇಯ ೩

೮೯

ಮಂಗಳಂ ಜಯ ಮಂಗಳಂ
ಮಂಗಳಂ ಗಂಗೆಯ ಪೆತ್ತವಗೆ
ಜಯಮಂಗಳಂಗಂಧಿನಿ ಸುತ ಪ್ರಿಯಗೆ ಪ

ಮಂಗಳಂ ಶ್ರೀರಂಗ ತುಂಗ ವಿಕ್ರಮನಿಗೆ
ಮಂಗಳಂಗಾಂಗೇಯ ಪ್ರೀಯನಿಗೆ ೧

ಸುರಪ ತನಯನನ್ನು ಪರಮ ಹರುಷದಿಂದ
ಪೊರದು ಪಂಚಾಲಿಗೆ ವರವಿತ್ತಗೆ
ಶಿರಿಯೆಂದೊಪ್ಪುತ ತಾನು ಕರುಣಾಸಾಗರನೆಂದು
ಸುರರ ಮಧ್ಯದಲ್ಲಿ ಮೆರೆವಗೆ ೨

ಆವಾವಸ್ಥೆಯಲ್ಲಿ ನಿರಾವಲಂಬನವಿತ್ತು
ಕಾವ ಮಹಾತ್ಮ ಶ್ರೀಭೂವರಿಗೆ ಆಲುಪಾಲಕನಾಗಿ
ಮಾವನ ಮಾಡುಹಿದ
ಶ್ರೀ ವತ್ಸಾಂಕಿತ ವೆಂಕಟೇಶಗೆ ೩

## (ಆ) ದೇವ, ಗುರುಸ್ತುತಿ

### ೯೦

### ಅವತಾರತ್ರಯ

ಪ್ರಾಣಪತಿ ಕಾಯೊ ನೀ ಜಾಣ ಜಗತ್ರಾಣಾ
ಕಾಣದೆ ನಿನ್ನ ಮಹಿಮೆ ಧ್ಯಾನಿಸದೆ ಮರುಳಾದೆ ಪ

ಸೂತ್ರ ನಾಮಕ ನೀನು ಛತ್ರಪುತದೊಳು ನೆಲೆಶಿ
ಶತ್ರು ಪುಂಜವ ನಿಮಿಷ ಮಾತ್ರದಲಿ ತುಳಿದಿ

ಗಾತ್ರದಲಿ ನೀ ಲಾಲಿಸು ಪಾತ್ರನೆಂದೆನಿಸೆನ್ನ
ಕೃತ್ರಿಮದ್ವಿಜ ಸ್ತೋತ್ರ ಪಾತ್ರ ಕೃಷ್ಣನ ದಾಸ ೧

ಕಾಮನೃಷನು ಹಿಂದೆ ರಾಮನಾಜ್ಞವ ತರಿಸಿ
ಆ ಮಹಾಸುರರೇ ಮಧಾಮವನು ಸಾರೆ
ಈ ಮಹಿಯೊಳಗೆ ನಿಸ್ಸೀಮನೊಬ್ಬನೆ ಯೆಂದು
ಭೂಮಿಯಲಿ ನಿನ್ನ ಗುಣ ಸ್ತೋಮವನು ತೋರಿಸಿದೆ ೨

ಅವತಾರ ತ್ರಯಗಳಲಿ ಸ್ವವಶವ್ಯಾಪಿ ಲಕ್ಷ್ಮೀ –
ಧವನ ಮನವರಿತು ನೀ ಅವತರಿಸಿದೆ
ಯುವತಿ ವೇಷದಿ ಗೌರೀಧವನ ಮೋಹಸಿದಂಥ
ಶ್ರೀವತ್ಸಾಂಕಿತನಾದ ಅವನಿಗೊಡೆಯನ ದಾಸ ೩

## ೯೧

ಪ್ರಾಣೇಶಗೆ ಮಂಗಳಂ ಮಂಗಳ ವಾಯುಕುಮಾರನಿಗೆ
ಜಯಮಂಗಳ ಅಂಗನೆ ಸುತಗೆ ಮಂಗಳ ಭುಜಗಭೂಷಣ
ದೇವಗುರುವಿಗೆ ಮಂಗಳ ಭಾರತಿ ರಮಣನಿಗೆ ಪ

ತ್ರೇತಾಯುಗದಲ್ಲಿ ಖ್ಯಾತರಾದ ಸುರರ
ಘಾತಿಸಿ ಬಡಿದಂಥಾ ವಾತಾತ್ಮಜ
ಪ್ರೀತಿಲಿ ರಾಮನ ಖ್ಯಾತ ದೂತನಾಗಿ
ಭೂತಳದೊಳತಿ ಖ್ಯಾತಿಯ ಪಡೆದಂಥ ೧

ದ್ವಾಪರದಲಿ ತಾ ಭೂಪ ಭೀಮನಾಗಿ
ಗೋಪಾಲಕನ ನಿಜ ದಾಸನಾಗಿ
ಪಾಪಿ ಖೂಳರ ಸಂತಾಪವ ಬಡಿಸುತ
ಗೋಪಾಲಸಖನ ಪ್ರತಾಪವ ಪೊಗಳಿದಂಥ ೨

ದುರುಳ ಮತಗಳೆಲ್ಲ ಮುರಿಯಲೋಸುಗ
ಅವಸರದಿಂದಲಿ ಬಂದು ಕಲಿಯುಗದೀ

ಶಿರಿವತ್ಸಾಂಕಿತನಿಗೆ ಪರಮಪ್ರಿಯವಾದ
ವರಮಧ್ವಮತವನ್ನು ಧರೆಯೊಳು ತಂದಂಥ ೩

## ೯೨

### (ರುದ್ರದೇವರು)

ಬಾರೋ ಬ್ಯಾಗನೆ ಗಿರಿಜಾರಮಣನೆ ಪ

ನಾರದನುತ ಪಾದಾರವಿಂದ ತೋರಲು ಅ.ಪ

ಭಕುತರ ವೃಂದಕೆ ಭಕುತಿ ಮುಕುತಿಯಿತ್ತು
ಯುಕುತಿಲೆ ಪೊರೆಯುವ ಶಕುತಿಯ ತೋರಲು ೧

ಭೂಮಿಯೊಳಿಹ ಸರ್ವ ಪಾಮರ ಜನರಿಗೆ
ಕಾಮಿತಫಲವೆಲ್ಲ ಪ್ರೇಮದಿ ಈಯಲು ೨

ಮಡದಿಯ ನುಡಿಗೆ ನಿನ್ನಡಿಗೆ ಬಂದಂಥ
ಬಡವನ ಪೋದಂತೆ ತಡವ ಮಾಡದೆ ಈಗ ೩

ಶಿರಿವತ್ಸಾಂಕಿತನೆಂದು ವರಶ್ರುತಿಗಳು ನಿನ್ನ
ಕರೆದು ತ್ರಿಜಗದ ನರಪನೆ ಈಗಲೆ ೪

## ೯೩

### (ಜಗನ್ನಾಥದಾಸರು)

ತಂಗೀ ನೋಡಿದೇನೆ ಇಂದು ಪ

ಕಂಗಳ ಧಣಿ ರಂಗವೊಲಿದ ಮಹಾತ್ಮರ ಅ.ಪ

ದ್ವಾಪರದಲ್ಲಿಯ ಶಲ್ಯರು ಇವರಂತೆ
ತಪಸಿ ಪ್ರಹ್ಲಾದನ ಅನುಜರು ಇವರಂತೆ

ಕಪಟರಹಿತ ಕಲ್ಕೀರ ಭೂಪನ
ರೂಪರೇಶೆಯ ನಿರ್ಮಿಸಿ ಮೆರೆದವರ ೧

ಎಂಥ ಪುಣ್ಯವಂತರು ನಮ್ಮ ಹಿರಿಯರು
ಇಂಥ ಮಹಾತ್ಮರ ಸೇವಿಸಿ ಬದುಕಲು
ನಿಂತು ಮನದಿ ಇವರ ನಾಮ ಭ್ರಾಂತಿಯಾಗಲು
ಸಂತೋಷದಿ ಶಾಂತ ಹೊಳೆ ಹರಿಸುವರನು ೨

ಶಿಷ್ಟ ಸದಾಚಾರ ಸೃಷ್ಟಿಸಿ ಜಗದಲಿ
ಶ್ರೇಷ್ಠ ದಾಸರೆಂದು ಖ್ಯಾತರಾಗಿಹರ
ಅಷ್ಟಮಾಂಗ ಸಾಷ್ಟಾಂಗದಿ ಎರಗಲು
ಸೃಷ್ಟೀಶ ಸಿರಿವತ್ಸಾಂಕಿತನ ತೋರ್ವರ ೩

೯೪

(ಬಾಲಕೃಷ್ಣ ವರ್ಣನೆ)

ಕಾಡದಿರೆನ್ನನು ಕಂಸಾರಿ ಕೃಷ್ಣಾ ಕಾಡದಿರೆನ್ನನು ಪ

ಹಳ್ಳದ ತಡಿಯಲ್ಲಿ ಮಳಲು ತೋಡಿ ತೋಡಿ
ಗೊಲ್ಲಿತೆರೊಡನಾಡಿ ಕಲಿತ್ಯೋ ಬೆಡಗಾ
ಅಹಿನೇರಿ ಹುಡುಗಾ ಮಾಡಿದಿ ತುಡುಗಾ ೧

ನೀರಿಗ್ಹೋಗುವಾಗ ದಾರಿಗಡ್ಡಕಟ್ಟಿ
ನಾರಿ ನೀನಾರೆಂದ್ವಿಚಾರಿಸುವೀ
ದೂರದಲ್ಲಿರುವಿ ಬದಿಯಲ್ಲಿ ಬರುವಿ
ಬೇರೆ ಕರೆವೆ ಈ ಬುದ್ಧಿ ತರವೆ ೨

ವರ ಕದರುಂಡಲಗಿ ಹನುಮಯ್ಯನೊಡೆಯನೆ
ನಿನಗೆಣೆಯಿಲ್ಲವೊ ವನಜನಾಭಾ
ವನಿತೆಯರೆಲ್ಲಾ ಒಲಿಸಿದೆಯಲ್ಲಾ
ಮನುಜನಲ್ಲಾ ಮಾಯದ ಗೊಲ್ಲಾ ೩

೯೫

ಜೋ ಜೋ ಜೋ ಜೋ ಜೋ ಕೃಷ್ಣ ಪರಮಾ–
ನಂದ ಗೋಪಿಯ ಕಂದ ಮುಕ್ಕುಂದ ಜೋಜೋ ಪ

ಪೆಟ್ಟಿಗೆಯೊಳಗಿದ್ದ ಪರಿಪೂರ್ಣ ಕಾಮಾ
ಮುಟ್ಟಿ ಭಜಿಸೊ ಮಹಾಯತಿಗಳ ಪ್ರೇಮಾ
ತೊಟ್ಟಿಲವೊಳಗೆ ಮಲಗಿದ್ದ ಶ್ರೀರಾಮಾ
ಘಟ್ಯಾಗಿ ತೂಗಿರಿ ಯತಿಗಳ ಸ್ತೋಮಾ ೧

ಪತವಳಿನುಟ್ಟು ಬಂದರು ಸುರರಾಗ
ಘಟಣಿ ಬಿದ್ದೀತೆಂದು ಮಹಪುಣ್ಯವೀಗ
ವಟಪತ್ರ ಕಲ್ಪನ್ನ ತೂಗಿರಿ ಬೇಗ ಶ್ರೀರಾಮಾ
ಘಟ್ಯಾಗಿ ತೂಗಿರಿ ಯತಿಗಳ ಪ್ರೇಮಾ ೨

ಪಾಕಶಾಸನ ಬಂದು ಮಳೆಗಳ ಕರೆಯೆ
ಗೋಕುಲವನು ಕಾಯ್ದ ಮಹಿಮೆಯು ಸರಿಯೆ
ಲೋಕದೊಳಜಭವರಿಗೆ ದೊಡ್ಡ ಧೊರೆಯೆ
ಶ್ರೀಕಾಂತ ಸರ್ವೋತ್ತಮ ನೀನೆ ಶ್ರೀಹರಿಯೆ ೩

ಆಲದೆಲಿಮ್ಯಾಲೆ ಮಲಗಿರೊ ಕಂದಾ
ಮ್ಯಾಲ ಕಲ್ಪವನು ದೃಷ್ಟಿಸಿದ್ಯೋ ನಿನ್ನಿಂದಾ
ಬಾಲನ ಪಡದ್ಯೊ ನಾಭಿಕಮಲದಿಂದಾ
ಪಾಲಾಬ್ಧಿ ಶ್ರೀರಮಣ ಮುಕ್ಕುಂದಾ ೪

ಮಾಮುನಿ ಸತ್ಯಬೋಧರಾಯರಿಂದ
ಪ್ರೇಮದಿಂದಲ್ಲೆ ತೂಗಿಸಿಕೊಂಬೊ ಛೆಂದಾ
ಸ್ವಾಮಿ ಕದರುಂಡಲಗಿ ಹನುಮಯ್ಯಗಾನಂದ
ಪ್ರೇಮದಿಂದಲ್ಲೆ ತೂಗಿದರು ಗೋವಿಂದ ೫

## ೯೬

ಬಾಯಿ ತೆರೆದ ಬಗಿಯೇನೊ ದೇವದೇವ
ತೋಯಜದಳ ನೇತ್ರನೆ
ನೀಯೆನಗಿದು ಪೇಳ್ಯೆ ನಿಜವಾಗಿ ಲಕ್ಷ್ಮೀನಾ
ರಾಯಣ ನರಸಿಂಹನೆ ಪ

ಅಸುರನ ಉದರವ ಹಸನಾಗಿ ಬಗೆವಾಗ
ಬಾಯ ತೆರೆದಿಯಾ

ಬಿಸಜ ಭವಾಂಡವು ಬಸುರೊಳಗಿದ್ದ ಉ–
ಬ್ಬಸಿಗೆ ಬಾಯ ತೆರೆದಿಯೊ ೧

ಮಡದೀಯ ರೂಪಕ್ಕೆ ಮರುಳಾಗಿ ಅದರಿಂದ
ಬಿಡದೆ ಬಾಯ ತೆರೆದಿಯಾ
ದೃಢದಿ ಪ್ರಹ್ಲಾದನ ಒಡೆಯ ರಕ್ಷಿಸೊ
ನುಡಿಗೆ ಬಾಯ ತೆರೆದಿಯೊ ೨

ಗುರು ಸತ್ಯಬೋಧರಾಯರ ನಿತ್ಯಭಜನೆಗೆ
ಬರಿದೆ ಬಾಯ ತೆರೆದಿಯೊ
ವರ ಕದರುಂಡಲಗಿ ಹನುಮಯ್ಯನೊಡೆಯನೆ
ಕರವ ಮುಗಿವೆ ಕರುಣಿಸೊ ೩

## ೯೭

ಮುದದಿ ನಕ್ರನ ಕೊಂದು ಸಲಹಿದ
ಸದುಭಕುತರ ಬಂಧು ೧

ನಾರಿಯು ತನ್ನ ಕರೆದಾ ಮಾತ್ರದಿ
ಸೀರೆಯ ಮಳೆಗರೆದಾ
ಕ್ರೂರ ಖಳರ ಮುರಿದಾ ಪಾಂಡವ–
ರಾರಣ್ಯದಿ ಪೊರೆದಾ
ನಾರಗೆ ಅಜಮಿಳ ನಾರಾಯಣನೆನೆ
ಪಾರುಗಾಣಿಸಿದಪಾರಗುಣನಿಧಿಯಾ ೨

ಒಂದು ಬಾರಿಗೆ ಶ್ರೀಶನ ನೆನೆದರೆ
ಬಂದ ದುರಿತ ನಾಶಾ
ಬೆಂದದ್ದು ಬಹುಪಾಶಾ ಅವಗಿ–
ನ್ನೆಂದಿಗಿಲ್ಲವೊ ಕ್ಲೇಶಾ

ತಂದೆ ಕದರಂಡಲಗಿ ಹನುಮಯ್ಯನೊಡೆಯ ಗೋ-
ವಿಂದನ ನೆನೆದವರೆಂದಿಗು ಧನ್ಯರು ೩

## ೯೮

ಸಂಸಾರವೆಂಬ ಸರ್ಪದ ಬಾಧೆಯನ್ನು
ಕಂಸಾರಿ ಕೇಳು ಸೈರಿಸಲಾರೆ ಇನ್ನು ಪ

ಕಚ್ಚಿ ಬಹುಕಾಲ ಕಡಿಮ್ಯಾಗಲೊಲ್ಲದು
ಹೆಚ್ಚುತಲೆ ವೋಗುತಿದೆ ಪೇಳಲೇನು
ಅಚ್ಯುತನೆ ನಿಮ್ಮ ನಾಮ ಮಂತ್ರದೌಷಧಿಯನ್ನು
ಮುಚ್ಚಿ ಕೊಡುಯೆಂದು ಮನದಲ್ಲಿ ನಿಂದು ೧

ಮತ್ತೆ ಮಹಾಪಾಪವೆಂಬ ವಿಷ ತಲೆಗೇರಿ
ತತ್ತರಿಸಿ ಕಳವಳಗೊಳಿಸುತಲಿದೆ
ಉತ್ತಮರಾ ಜ್ಞಾನವೆಂಬುತ್ತಾರವನೆ ಕೊಟ್ಟು
ಹತ್ತುನೂರು ನಾಮದೊಡೆಯ ಹರಿಯೆ ಸಲಹೆನ್ನ ೨

ಬೆಂದ ದುರ್ವಿಷಯಗಳು ಹಂದಿನಾಯ್ಗಳಿಗುಂಟು
ಎಂದು ದೊರೆವುದೋ ದ್ವಿಜಾಗ್ರಕುಲವು
ಎಂದಾದರೂ ಒಮ್ಮೆ ಬಯಸುವಂತಿ ಭಕುತಿ ಕೊಡು
ತಂದೆ ಕದರುಂಡಲಗಿ ಹನುಮಯ್ಯನೊಡೆಯಾ ೩

## ೯೯

ಹಲವು ಚಿಂತೆ ಮರೆವುತಿದೆ ಹರಿ ನೆನೆದರೆ ನಮ್ಮ
ಕುಲವೆ ಉದ್ಧಾರವಾಗುವ ಕಾಲವೊ ಪ

ಕೊಲೆ ಅನೃತ ಕಳವು(ದಶಬಾರ ಪಟ್ಟಾರ) [?]
ಸಲೆ ಬಯಸಿ ಸರ್ವರಲಿ ನೆನೆವುತಿದ್ದೆ

ಒಲಿದು ವೈಕುಂಠಪತಿ ಒಮ್ಮೆ ನೆನೆದರೆ ಮನಕೆ
ಬಲು ಹರುಷವಾಗುವ ಭಾಗ್ಯವೆಲ್ಯೊದಗಿತೊ ೧

ಸತ್ಕರ್ಮಗಳ ಲೇಶ ಸ್ವಪ್ನದಲಿ ತಿಳಿಯದು
ಮತ್ತತನದಲಿ ನಡೆದ ಮೂರ್ಖನಿಗೆ
ಎತ್ತಲಿಂದೊದಗಿತೊ ಎನಗೆ ತಿಳಿಯದು ದೇವ
ಉತ್ತಮನ ನೆನೆನೆನೆದು ಉಬ್ಬೇರುತಿಹದೊ ೨

ಬಂದ ಕಾರ್ಯವ ಬಿಟ್ಟು ಮಂದಮತಿತನದಿಂದ
ಬೆಂದ ದುರ್ವಿಷಯದಲಿ ಬಳಲುತಿದ್ದೆ
ತಂದೆ ಕದರುಂಡಲುಗಿ ಹನುಮಯ್ಯನಾ ಪಾದ
ಹೊಂದಿದಾ ನೆವದಿಂದ ಹೊಸ ಪರಿಯ ಕಂಡೆ ೩

## ೧೦೦

### ಲಕ್ಷ್ಮೀದೇವಿ

ರಮೆ ವೆಂಕಟರಮಣನರಸಿಯೇ
ನಮಿಸುವೆ ನಮ್ಮಮ್ಮ
ಅಮಿತ ಮಹಿಮಳೇ ಆದಿ ಲಕುಮಿಯೇ
ಅನುದಿನ ಸಲಹಮ್ಮ ೧

ಅಜತ ನಾಮಕನೆ ಆದಿ ದೈವವೆಂದು
ತ್ರಿಜಗಮ ತಿಳಿವಂತೆ
ನಿಜ ಪುರುಷನಿಗೆ ವನಮಾಲೆಯ ಹಾಕಿ
ಭಜಿಸಿದೆ ಬಲವಂತೆ ೨

ಕಮಲಜ ಮೊದಲಾದ ಸುಮನಸರಿಂದಲಿ
ಕ್ರಮದಿ ಪೂಜೆಗೊಂಬೆ

ಸಮನಿಲ್ಲದ ಸೌಭಾಗ್ಯವ ಕೊಡು
ನೀ ಮಹ ಜಗದಂಬೆ ೩

ಕಮಲವಾರಿಧೆ ಕಮಲಲೋಚನೆ
ಕರವೀರ ಪುರಧೀರೆ
ವರ ಕದರುಂಡಲಗಿ ಹನುಮಯ್ಯನೊಡೆಯನ
ಉರದೊಳು ಸ್ಥಿರವಾಸೆ ೪

## ೧೦೦(ಅ)

### ತುಳಸಿದೇವಿ

ಶರಣು ಹೊಕ್ಕೆನು ಕಾಯೆ ಶ್ರೀ ತುಳಸಿ ತಾಯೆ
ನಾರಾಯಣನ ಪ್ರೀಯೇ
ತರಣಿಕೋಟಿ ದಿವ್ಯ ಪ್ರಕಾಶ
ಹರಿಚರಣಕಮಲಕಾಭರಣಿಯೆನಿಪಳೆ ಪ

ಉದಧಿಯೊಳುದಿಸಿದಮೃತವ
ಮುದದಿಂದಲಿ ಶ್ರೀಧರನು ನೋಡಿ ಸ್ವೀಕಾರವನು ಮಾಡಿ ಆ–
ನಂದಲಾನಂದ ಬಾಷ್ಪಗಳು ಉದುರಲಕ್ಷಿಯೊಳು
ಉದುಭವಿಸಿದೆಯೆ ನೀನು ಪದುಮಮುಖಿಯೆ ನಿಮ್ಮ
ಅದುಭುತ ಮಹಿಮೆಯು ಪದ ಕವಿಗಳಿಗೆಲ್ಲ ಪೊಗಳಲಸಾಧ್ಯ ೧

ನಿಮ್ಮ ಮೂಲ ಮಧ್ಯಾಗ್ರದಲಿ ಬ್ರಹ್ಮಾದಿ ಸುರರು
ಸುಮ್ಮನದಿಂದ ಒಲಿದಿಹರು
ಒಮ್ಮನದಿಂದ ಸ್ತುತಿಸಲು ಶುಭಗುಣವಂತೆ
ಧರ್ಮಾರ್ಥ ಕಾಮ ಮೋಕ್ಷಗಳ ಗಮ್ಮನೆ ಕೊಡುವ
ನಮ್ಮಮ್ಮಗೊಲಿದು ನಿನ್ನಮ್ಮಿದವರಿಗಾಧರ್ಮದ ನಿಧನೆ (?) ೨

ನಿಷ್ಠೀಲಿ ನಿಮ್ಮ ಭಜಿಸುವ ಭಕುತರಿಗೆ ಬಂದ
ಕಷ್ಟವ ಕಳೆದು ಕೈವಿಡಿದು
ದುಷ್ಟ ಸಂಗವನೆ ಬಿಡಿಸಿ ಇಹಪರದಲ್ಲಿ ವಿಷ್ಣುಭಕ್ತರಿವರೆಂದೆನಿಸಿ
ಶ್ರೇಷ್ಟ ಕದುರುಂಡಲಗಿ ಹನುಮಯ್ಯನೊಡೆಯನು ಶ್ರೀ–
ಕೃಷ್ಣನ ಲೋಕದಿ ಸಂತುಷ್ಟಬಡಿಸುವಾ ೩

## ೧೦೧

### ಹನುಮಂತ ದೇವರು

### (ದಂಡಕ)

ಅಂಜನಿಯ ಉದರದಿಂ ಪುಟ್ಟುತಾರ್ಭಟಿಸುತಲಿ
ಕಂಜಮಿತ್ರಂಗೆ ಹಾರ್ದೆ ಧೀರಾ ವಾಯುಕುಮಾರಾ
ರಣರಂಗಧೀರಾ ಕದನಕಂಠೀರಾ
ದಿನಮಣಿಯ ಪಿಡಿದು ನುಂಗುವೆನೆಂಬೊ ಸಮಯದೋಳ್
ಬರಲು ದೇವತೆ ನಿಕರಗಳೆಲ್ಲಾ ಬೆದರಿಸಿದಿ ಎಲ್ಲಾ
ಭಾಪು ಭಲ ಭಲ್ಲ ಭಾರತಿಯ ನಲ್ಲ
ಸೂರ್ಯಸುತನಂ ಕಂಡು ಪಂಪಾಸರೋವರದಿ ಭಾಸ್ಕರಾನ್ವಯಗೆರಗಿ–
ದೆಂದು ಜಯ ಜಗದ್ಬಂಧು ಕಾರುಣ್ಯಸಿಂಧು
ಸೀತಾಪತಿಯ ಕರುಣದಿಂದ ಗಗನಕ್ಕೆ ಖ್ಯಾತಿಯಿಂದಲಿ
ಬ್ಯಾಗ ಬೆಳದಿ ವೃಷಿಗಳನಳದಿ ದೈತ್ಯರ ತುಳದಿ
ರಾಮಮುದ್ರಿಯ ಕೊಂಡು ಅಜನಸುತ ಸಹಿತಾಗಿ ನೇಮದಿಂ
ಶರಧಿಯಂ ನೋಡಿ ದುರಿತಗಳ ದೂಡಿ ಪಾಡಿ ಕೊಂಡಾಡಿ
ಕೋಟಿ ಸಿಡಿಲಬ್ಬರಣೆಯಿಂದ ಜಲಧಿಯ ಜಿಗಿದು ದಾಟಿದಿ ಲಂಕಾಪುರ–
ವನ್ನು ಪೇಳಲಿನ್ನೇನು ಭುಜಬಲವನ್ನು
ತೃಣಬಿಂದು ಋಷಿಯ ಕಾಣುತಲಲ್ಲಿ ಕುಣಿದಾಡಿ ಪರಿಪರಿಯ ಚೇಷ್ಟೆ–
ಗಳಿಂದ ಮಾಡಿದ್ಯೆ ಛಂದ ಅಂಜನೆಯ ಕಂದ
ಪುನಹ ಲಂಕೆಗೆ ಹಾರಿ ಲಂಕಿಣಿಯ ಸಂಹರಿಸಿ ಭೂಜಾತೆಯನು ಅರಸು–
ತಲ್ಲಿ ಅತಿರೋಷದಲ್ಲಿ ತಿರುತಿರುಗುತಲ್ಲಿ
ರಾಮನಾಮಾಮೃತವ ಜಿಹ್ವಾಗ್ರದೋಳ್ ಸುರಿವ ಭೂವಿಜಯ

ಚರಣಮಂ ಕಂಡು.... ಮಾಡಿದ್ಯೆ ಗಂಡು
ರಘುವರನ ಮುದ್ರೆಯನಿತ್ತು ನಿಜಮಾತೆಗೆ ಹರುಷಬಡಿಸಿದಿ ಹನೂ–
ಮಂತಾ ಗುರುಮುನಿಯ ಶಾಂತಾ ದಿವಸಾಧಿಪತಿಕೋಟಿತೇಜದಿಂ
ಮೆರೆವಂಥಾ ಜಯ ಹನುಮ ಭೀಮ ಬಲವಂತಾ
ಬಾಲದಿಂ ಬೆಂಕಿಯಂ ಹಚ್ಚಿ ಲಂಕಾಪುರವ ಲೀಲೆಯಿಂದಲಿ ದಹನಮಾಡಿ
ಸುತ್ತ ಓಡ್ಯಾಡಿ ದೈತ್ಯರಂ ಕಾಡಿ
ಸುರನಿಕರವಂದು ಆಕಾಶಮಾರ್ಗದಿ ಎಲ್ಲ ದೇವದುಂದುಭಿನಾದ ಗೈದು
..................................ಮಹಿಮೆ ಹೌಧೌದು
ತ್ರಿಭುವನದೊಳಗಧಿಕನ್ಯೆ ಕದರುಂಡಲಗಿರಾಯಾ ಅಭಯಮಂ ಕೊಡು
ಎನ್ನ ಧೊರೆಯೆ ನಾ ನಿನ್ನ ಮರೆಯೆ
ಅಗಡಿಪುರದಲಿ ನಿನ್ನ ಕೃಪೆಯಿಂದ ಪೇಳ್ದೆನ್ಯೆ ಸೊಗಸಿನಿಂದ ಇಡು
ಮಹಾರಾಯ ಅವನಾಯುಗೇಯಾ ಹನುಮಂತರಾಯಾ
ಶ್ರೀಹನುಮಂತಗೌಡರ್ ಬಹಾದ್ದೂರರನ್ನು ಸರ್ಪಸುತಪುರದಲ್ಲಿ
ಕಾಯ್ವ ಇಷ್ಟಾರ್ಥವೀವ ಭಕುತ ಸಂಜೀವ
ಶ್ರೀ ಹನುಮಂತ ದಂಡಕವ ಕೇಳ್ದರ್ಗೆ ಇಹಪರದಿ ಶ್ರೀಹರಿಯೆ
ಬಂದು ಅವರಲ್ಲಿ ನಿಂದು ಕಾರುಣ್ಯಸಿಂಧು
ಜಯಸ್ತೇ ಯಶಸ್ತೇ ನಮೋ ನಮಹಾ ಶ್ರೀ ಪರಾಕು ಪರಾಕು

## ೧೦೨

ಅಂಜಲ್ಯಾತಕೋ ಅಖಿಳ ಭವದುರಿತನೆ
ಅಂಜನೆಯ ಸುತಗೆ ಆರೋಪಿಸಿದ ಬಳಿಕ ಪ

ಪಾತಕವು ಬಿಡದೆಂದು ಪರಿಪರಿಯ ಚಿಂತಿಸುತ
ಯಾತಕೆನ್ನಭಿಮಾನ ನಾಥನಿರಲು
ಮಾತಪಿತರಲ್ಲಿ ನಿರ್ಮಿತಮಾಡಿ ನಿಲ್ಲಿಸಿದ
ಆತನಾಜ್ಞೆಯಾದಂತೆ ಆಗುವುದಲ್ಲದೆ ೧

ಗುಡ್ಡದಂತೆ ದುರಿತ ಘೋರಿಸುವೆನೆನುತಲಿ
ಅಡ್ಡಬಂದಾಗ ಓಡಿಸುವೆನೆನುತ
ಅಡ್ಡಬಂದಾಗಂತ್ಯ ಕಾಲದಲಿ ರಕ್ಷಿಸುವ
ದೊಡ್ಡ ಕಂಗಳನೆಂಬ ಧೊರೆಯ ಹೊಂದಿದ ಮೇಲೆ ೨

ಸೃಷ್ಟಿಯನು ಮಾಡಿದ ಇಷ್ಟ ದೇವತೆ ನಿಮ್ಮ ಬಿಟ್ಟವನೆ
ಭ್ರಷ್ಟ ಚಿಂತೆಯು ಬೇಡವೋ
ಕಷ್ಟಗಳ ಕಳೆವ ಕದರುಂಡಲಗಿ ಹನುಮಯ್ಯನ
ನಿಷ್ಠೆಯಲಿ ಭಜಿಸಿ ನಿಶ್ಚಿಂತನಾಗಿರು ಮನವೆ ೩

## ೧೦೩

ಎಷ್ಟು ಪೊಗಳಲಿ ನಾನು
ಎನ್ನೊಡೆಯ ನಿನ್ನ ವಿ–
ಶಿಷ್ಟ ಮಹಿಮೆಗಳನು
ಭಕ್ತರಿಗೆ ಬಂದಾ ಕಷ್ಟ ಕಳೆಯುವೆಯೋ ನೀನು
ಸುರಕಾಮಧೇನು
ವಿಷ್ಣುವೇ ಪರದೈವವೆಂದು
ದುಷ್ಟರಾಕ್ಷಸರನ್ನೆ ಕೊಂದು
ಸೃಷ್ಟಿಪಾಲಿಪ ಶ್ರೀ ರಮೇಶನೇ
ಇಷ್ಟ ಭಕುತರೊಳು ಶ್ರೇಷ್ಠನೆನಿಶಿದಿ ಪ

ತಾಯಿಯೂ ಬಂದು ಸೇವೆಗೆ ರಘುಪತಿ
ರಾಯನಲೆ ನಿಂದು ಬಯಸಲಿಲ್ಲಾ ಒಂದು
ಶ್ರೀಹರಿಗೆ ಬಂದು
ಕಾಯಬೇಕು ಸುಗ್ರೀವನೆನುತಲಿ
ತೋಯಜಾಕ್ಷಗೆ ಪೇಳಿ ವಾಲಿಯ ಉ–
ಪಾಯದಿಂದಲಿ ಕೊಲಿಸಿ ರವಿಜಗೆ ಸ–
ಹಾಯ ಮಾಡಿದಿ ವಾಯುತನಯನೆ ೧

ಕಡಲ ಬೇಗನೆ ಹಾರೀ ಶ್ರೀರಾಮನ
ಮಡದಿಗುಂಗುರ ತೋರಿ ಅಲ್ಲಿದ್ದ ಅಸುರರ
ಜಡಿದೆ ಬಲು ಹೊಂತಕಾರಿ
ಮಾಡಿಯೊ ಸೂರಿ
ಒಡೆಯಗ್ವಾರ್ತೆಯ ಪೇಳಿ ಶೀಘ್ರದಿ
ನಡೆಸಿ ಸೈನ್ಯವ ದಶಮುಖನ ಶಿರ
ಹೊಡೆಸಿದಾಕ್ಷಣ ಲೋಕಮಾತೆಯ
ಒಡಗೂಡಿಸಿದೆಯೋ ಶ್ರೀರಾಮಚಂದ್ರಗೆ ೨

ಮೂರು ರೂಪವ ತಾಳ್ದಿ ಮಹಯೋಗ್ಯ ಜನರಿಗೆ
ಸಾರ ತತ್ವವ ಪೇಳ್ದಿ
ಶರಣ್ಹೊಕ್ಕ ಜನರಪಾರ ದುಃಖವ ಶೀಳ್ದಿ
ಮೊರೆಯ ಕೇಳ್ದಿ
ಧೀರ ಕದರುಂಡಲಗಿ ಹನುಮಯ್ಯ
ಸೇರಿದೆನೊ ನಿನ್ನಂಘ್ರಿ ಕಮಲವ
ಗಾರು ಮಾಡದೆ ಸಲಹೊ
ಕರುಣವಾರಿಧಿ ನೀಯೆನ್ನನೀಗಲೆ ೩

## ೧೦೪

ಭಾರ ನಿನ್ನದು ದೇವಾ ಭಕುತ ಸಂಜೀವಾ ಪ

ದೂರ ನೋಡದೆ ಪೊರೆಯೊ ದುರಿತಗಳ ತರಿಯೊ ಅ.ಪ.

ಮೂರನೆ ಗುಣದಿಂದ ಮತ್ತನಾಗಿ ಬಹಳ
ಮೂರು ವಿಧ ವಿಷಯಡಲಿ ಮಗ್ನನಾದೆ
ಮೂರುಖಾಗ್ರೇಸರಿಗೆ ಮುಂದಾವಗತಿಯ್ಯೆಯ
ಮೂರಾವತಾರವುಳ್ಳ ಮರುತಾತ್ಮಜನೆ ೧

ಆರು ಮೂರರ ದ್ವಾರದ ಸ್ಥಿರದ ಮನೆಯೊಳಗೆ
ಆರು ವೈರಿಗಳು ಕಂಡಾವಾಗಲೂ
ಆರು ಬಿಡಿಸದ ಬವಣೆ ಬಡಿಸುತಲೈದಾವರೆ
ಆರೆರಡು ಪೆಸರುಳ್ಳ ಅಂಜನಾತ್ಮಜನೆ ೨

ಪಂಚೇಂದ್ರಿಯಗಳು ಕೂಡೆ ಪರಿಪರಿ ಬಗೆಯಿಂದ
ಪಂಚಮಹಾ ಪಾತಕಕೆ ಎಳೆಯುತಾರೆ
ಪಂಚಕಷ್ಟಕೆ ಗುರಿಯು ಆಗಲಾರೆನು ಪ್ರಾಣ
ಪಂಚಪದಕವೇ ಕದರುಂಡಲಗಿ ಹನುಮಯ್ಯ ೩

೧೦೫

## ಶ್ರೀಹರಿ ಸ್ತವನ

ಅರ್ಜುನಗಾನಂದಾ ಮಾಡಿದ ಗೋವಿಂದಾ ಪ

ರಥದಿ ಮಂಡಿಸಿ ಚತುರತನದಲಿಂದಾ
ಚತುರ ಹಸ್ತದಿಂ ವಾಜಿಯಂ ಪಿಡಿದು
ರಥಕನ ಬೆನ್ನಿಂದಿಟ್ಟುಕೊಂಡು ಸಾ-
ರಥಿಯು ತಾನೆ ಅಶ್ವವ ನಡಿಸುತಲಿ
ರತಿಪತಿಪಿತನತಿಚಮತ್ಕಾರದಿಂ
ಪೃಥಿವಿಯ ಮೇಲೆ ನರನಟನ ತೋರುತಲಿ
ಪತಿತ ಪಾವನನು ಫಲ್ಗುಣ ಸಖನು
ನುತಿಸಿದವರ ನೆರೆ ಪಾಲಿಸುತಿಹನು
ಅತುಳ ಶಂಖದಿಂ ಭೌಂ ಭೌಂ ಎನಿಸುತ
ರಥದ ಗಾಲಿ ಛಿಟ್ ಛಿಟ್ ಛಿಟಿಲೆನುತ
ಕುದುರೆ ಖುರಪುಟಧ್ವನಿ ಫಳ್ ಫಳ್ ಫಳ್ಳೆ
ನುತ ಸ್ಯಂದನವನು ಮುಂದಕೆ ದೂಡುತ
ಗೋವಿಂದನು ರಭಸದಿ ಭಕ್ತನೂಳಿಗಾ ೧

ಮಂದಜಭವ ಮುಖ್ಯಾಮರ ವೃಂದವು
ನಂದತನುಜನಾರಂದಲೀಲೆಯಂ
ಛಂದದಿ ನೋಡುತ ನಭೋಮಾರ್ಗದೊಳ್
ಬಂದು ಕುಸುಮಗಳ ವೃಷ್ಟಿಯ ಸುರಿದು
ಸಿಂಧುಶಯನ ನಾಮಾಮೃತ ಸುರಿದು
ಬೃಂದಾರಕ ನಿಕರವು ಕೈಯೆತ್ತಿ
ಇಂದುಕಲಾಧಿಪ ಪ್ರಾರ್ಥನೆ ಸೈ ಸೈ
ಎಂದು ದೇವದುಂದುಭಿ ಧೋಂ ಧೋಂ ಕಂಸಾ-
ಳದರವ ಖಿಣಿಖಿಣಿ ಖಿಣಿ ಭೇರಿ

ನಾದ ಖಡ್ ಖಡ್ ಖಡಲ್ ಭಾರಿ ತಾ-
ಳದಿಂ ಡಿಮಿಡಮರುಗದಿಂ ತಿಧ್ಧಿಮಿಧಿಂಕಿಟತಾ
ಹತಜಂತರಿಧೂಂ
ಹತಜಂತರಿ ಧೂಂಗತರಿ ಕಿಣಿಕಿಣಿಕಿಣಿ ಎನುತ
ನರ್ತನಗೈವುತ ತೆರಳುತ ೨

ಮಂಗಳ ರವದಿಂ ಜಯಜಯ ಎನಿಸುತ
ಮಂಗಳಾಂಗಿ ರುಕ್ಮಿಣಿ ವಲ್ಲಭನು
ರಂಗಿನಿಂದ ರಥವಿಳಿದು ಗೆಳೆಯನ
ಮುಂಗೈಯನೆ ಪಿಡಿದು ಅಂಗಜನಯ್ಯ
ರಂಗುಮಣಿಯ ಉಂಗುರದಿ ಒಪ್ಪುತಲಿ
ಭಂಗಾರಕೆ ಮಿಗಿಲೆನಿಪ ದುಕೂಲದಿ
ಶೃಂಗರದಲ್ಲಿ ಉತ್ತುಂಗ ಪರಾಕ್ರಮ
ಅಂಗಳದೋಳ್ ನಲಿದಾಡುತ ರಂಗನು
ತಿಂಗಳ ಕುಲದೀಪನ್ನ ನೋಡುತಲಿ
ಭೃಂಗಾಳಕ ರಖುಮಾಪತಿ ಪಾಂಡು-
ರಂಗ ಕದರುಂಡಲಗೀಶನ ಒಡೆಯನು ತಾ ೩

## ೧೦೬

### ಕದರುಂಡಲಗಿ ಹನುಮಂತದೇವರು

ಇಂಥಾ ಕೀರ್ತಿಯ ಮೂರ್ತಿನ್ನಾರೇ ನೋಡಮ್ಮಯ್ಯ ಪ

ಸಂತತ ಸೀತಾಪತಿಯ ಧ್ಯಾನರೊಳು
ಕಂತುವಿನಸ್ತ್ರವ ಖಂಡಿಸಿದೊಡೆಯಾ ಅ.ಪ.

ಕಾಶಿ ರಾಮೇಶ್ವರ ಮಧ್ಯದ ದೇಶದಿ ಸೂರಿ ಸುಲಿಗೆ ನೋಡಮ್ಮಯ್ಯ
ಸಾಸಿರ ಶತ ತುರಗಾವಿ ಪಲ್ಲಕ್ಕಿಯ ಸರದಾರರ

ನೋಡಮ್ಮಯ್ಯ ಭೂಸುರರಾಯರು ಸೀಮೆಯ ಸುತ್ತಲು
ಗಾಸಿಯ ಮಾಡದೆ ಗ್ರಾಮವ ಕಾಯ್ದ ೧

ತಾರಣ ನಾಮ ಸಂವತ್ಸರ ಶುದ್ಧ ವೈಶಾಖದಿ ನೋಡಮ್ಮಯ್ಯ
ಧರೆಯೊಳು ಕಲಹ ವಿಪರೀತವದರೊಳು ರಣಮಂಡಲ ನೋಡಮ್ಮಯ್ಯ
ಊರೆಲ್ಲ ಮೊರೆಯಿಡೆ ಈಕ್ಷಿಸಿ ಮಹಿಮೆಯ
ತೋರುವ ಅಭಯ ಪ್ರಸಾದವ ಕೊಡುವಾ ೨

ಸಕಲ ಜನರು ಎಲ್ಲಾ ಸ್ವಾಮಿಯಿಂದುಳಿದೆವು
ಜಯ ನಮೋ ಎನೆ ನೋಡಮ್ಮಯ್ಯ
ಅಕಲಂಕ ಶೇಷಾನೃಪ ಶ್ರೀ ರಾಮರ ಸೇವಕಮಣಿ ನೋಡಮ್ಮಯ್ಯ
ಲೋಕದಧಿಕ ಗುರು ಕದರುಂಡಲೀಶಾ
ಬೇಕೆಂದು ನಿಂತಾ ಶ್ರೀ ಹನುಮಂತ ೩

## ೧೦೭

### ಶ್ರೀ ವ್ಯಾಸರಾಯರು

ಚಂದ್ರಾ ಧರೆಯೊಳು ಮೂಡಿದಾ
ಪ್ರಹ್ಲಾದನೆಂಬ ಚಂದ್ರಾ ಪ

ಹೊಂದಿದವರ ಹೃದಯಾಂಧಕಾರನೀಗುವ ಗುಣ–
ಸಾಂದ್ರ ವ್ಯಾಸರಾಜೇಂದ್ರನೆಂಬುವ ಅ.ಪ.

ವಿಕಸಿತಸತ್ಕುಮುದಕೆ ಬಂಧೂ ಖಳ
ಮುಖಾರವಿಂದವಳಿದು ಕೊಂದೂ
ಸುಖದಿ ಕುಳಿವ ಬುಧಚಕೋರ ತತ್ವ
ಪ್ರಕಾಶಕರ ಚಂದ್ರಿಕಾಪೂರ್ಣನೆಂಬ ೧

ಹೇಯಮತಗಳೆಲ್ಲವ ಮುರಿದೂ ಬಲು
ಬಾಯಿಬಾರದೆ ನಿಲ್ಲಲು ಜರಿದೂ

ಮಾಯಿಚೋರರು ಪಲಾಯನಗೈಯಲು
ನ್ಯಾಯಾಮೃತಮಯ ವೃಷ್ಟಿ ಕರೆಸಿದಾ ೨

ಕಂಡೂ ಗೋಪಾಲಕೃಷ್ಣನ ಪದವ ಕದ–
ರುಂಡಲಿಗೀಶ ಭಕ್ತನಾಮೋದವ
ಕೊಂಡು ಭೂಮಂಡಲವ ಪಂಡಿತ ಜನಮನ
ತಾಂಡವವಾಡಿದ ತರ್ಕತಾಂಡವ ಮಾಡಿದ ೩

## ೧೦೪

### ಶ್ರೀ ಸತ್ಯಪರಾಯಣರು

ನೋಡು ಮನವೆ ಸತ್ಯಪರಾಯಣರ ಪದಗಳ
ಬೇಡು ಬೇಡು ಬೇಡಿದಿಷ್ಟವೀವ ಯತಿಗಳ ಪ

ಮಾರುತಿಯ ಬಲದಿ ದಕ್ಷಿಣ ದೇಶವ ಜೈಸಿದಾ
ಸಾರಸಚ್ಛಾಸ್ತ್ರವನ್ನು ಸ್ಥಿರವಗೊಳಿಸಿದಾ
ನಾರಾಯಣನ ಜಗತ್ಕಾರಣನೆನಿಸಿದಾ
ಧೀರ ಸತ್ಯಸಂತುಷ್ಟ ಕುವರನೆನಿಸಿದಾ ೧

ಭೀಮಸೇನ ಸನ್ಮತ ಸರಿಯಾಗಿ ನಡಿಸಿದಾ
ಪ್ರೇಮದಿಂದ ರಘುಜಿಗೆ ವನಮಾಲೆ ಮುಡಿಸಿದಾ
ತಾಮಸ ಮತದವರ ಮತವ ಮುರಿದು ಹಾಕಿದಾ
ರಾಮನ್ನಾಮ ನುಡಿಸಿ ನುಡಿಸಿ ಹರುಷಬಡಿಸಿದಾ ೨

ವರ ಕದರುಂಡಲಗೀಶನ್ನೊಡೆಯ ರಾಮನ್ನ
ನಿರುಪಮಾನಂದ ತೀರ್ಥ ಸುಪ್ರೇಮನ್ನ
ಕರುಣದಿಂದ ಶಿಷ್ಯನಾಗಿ ಸಂದೋಹಪಾಲನ್ನ
ಸ್ಮರನ ಜನಕಾ ಪಾಂಡುರಂಗನ ಸ್ಮರಿಪಲೋಲನ್ನ ೩

## ೧೦೯

### ಲೌಕಿಕ ಸಂದರ್ಭದ ಹಾಡು

ಯಾತಕೆ ಹೋದೆವು ದುರುಳನ ಮನೆಗೆ
ಪಾತಕಿ ಇವನು ಛೀ ಛೀ ಛೀ ಪ

ಏಳು ಬಿಲ್ಲಿಯ ಕೊಡಲಿಕ್ಕೆ ಬಂದ
ಖೂಳನಿವನು ಈ ಮನೆಯೊಳಗೆ
ತಾಳಲಾರದೆ ಬೀಸಾಟಿ ಬಂದೆನು
ಶ್ರೀಲತಾಂಗಿಯ ರಮಣ ಗೋವಿಂದಾ ೧

ಗುಂಡಪ್ಪನು ಯಾಗುಂಡಪ್ಪನು ರುಬು
ಗುಂಡಪ್ಪನು ನಾನಿವನರಿಯೆ
ಮಂಡರಂತೆ ದಿನಗಳಿವುತಲಿ ನಮ
ಕಂಡು ಮಾನ್ಯ ಮಾಡದೆ ಹೋದನು ೨

ಹರಿಸರ್ವೋತ್ತಮನೆಂದು ಝಾಂಗಟಿ
ಬಾರಿಪ ದಾಸರು ನಾವ್ ಹೌದು
ವರ ಕದರುಂಡಲುಗೀಶನ ಒಡೆಯ ನಮ್ಮ ಪಾಂ-
ಡುರಂಗನ ದಾಸನೆಂದು ತಿಳಿಯದಲೆ ೩

## ಮಹಾನಿಧಿವಿಠಲರು

## (ಮೈಸೂರು ವೆಂಕಟರಮಣದಾಸರು)

### ೧೧೦

ಇಂದಿರೇಶ ಭವಬಂಧನ ಬಿಡಿಸೊ ನಿನ್ನಾನಂದದೊಳಿರಿಸೊ ಪ

ಸಿಂಧುಶಯನ ಗೋವಿಂದ ಮುರಾರೆ ಅಚಿಂತ್ಯಾದ್ಭುತ ಶೌರೆ ಅ.ಪ.

ತಾಳಲಾರೆನೊ ಈ ತಾಪತ್ರಯ ಹರಿಸೊ ನಿನ್ನವನೆನಿಸೊ
ಕಾಲಕರ್ಮ ಕೋಟಲೆ ತಪ್ಪದಲ್ಲ ನೀ ಕೇಳೆನ್ನ ಸೊಲ್ಲ
ಲಾಲಿಸಿ ಎನ್ನನು ಕೇಳೋ ಎನ್ನ ವಾಕು
ಪಾಲಿಸಿ ಎನ್ನನು ಪಾರುಗಾಣಿಸೊ ಫಣಿರಾಜಶಯ್ಯ ೧

ಪರಿಪರಿಯಿಂದಲಿ ಜನ್ಮ ಧರಿಸಿ ಕರೆದುತಂದೆ
ಈ ಜನ್ಮದಿ ನಿಂದೆ ಅರಿಯದವರಂತಿರುವರೆ
ಕಾಯುವ ಕರುಣಿ ನೀನು ದೀನಜನ ಸುರಧೇನು ೨

ಅಂಬರ ಮಣಿಯಂತೆ ಬಿಂಬ ಮೊಳಗ್ಹೊಳೆದು
ದುರಂತ ಕರ್ಮಂಗಳ ಕಳೆದು
ಹಂಬಲಿಸುವ ಭಕುತರ ಬೆಂಬಲಿಗನೆನಿಸಿ
ಸಂತತ ನಿನ್ನ ಸುಖಸಿರಿಯ ಸುರಿಸೊ ೩

ಬಿಂಬವು ಒಲಿದರೆ ಪ್ರತಿಬಿಂಬ ಫಲಸುವದುಂಟು
ಈ ಮಾತು ನಿಘಂಟು ಬಾಂಬೊಳೆ ಹರಿಸಿದ ಹರಿ ಮಾನಿಧಿವಿಠಲ
ನೀನಲ್ಲದಿನ್ನಾರೋ ದೇವರ ದೇವಾ ೪

## ೧೧೧

ದಯದಿಂದಲಿ ನೋಡೊ ಎನ್ನಾ
ಹಯವದನ್ನಾ ಶ್ರೀಹರಿ ಪ

ಬೇಡಿಕೊಂಬೆನೋ ನಿನ್ನಾ ಆನಂದ ಘನ್ನಾ
ವರಗಳ ನೀಡಿ ಅ.ಪ.

ಭಕುತದಿ ಕೂಡಿ ಆಡುವೆ ನೀ ನಿತ್ಯ
ಸುಜನರಿಗೆ ಕಾಡಿ ಕೆಣಕುವ ಈ ಖೋಡಿ
ದುರಿತಂಗಳ ಓಡಿಸಿ ಅನುದಿನ ಸಾಮಗಾನ ಪ್ರೇಮಾ
ಬ್ರಹ್ಮಾದಿಗಳಿಗೆ ಕಾಮಿತಪ್ರದ ರಾಮಾ
ಜಯಜನರುಜಾಪತಿ ಭೂಮಾ ದೈತ್ಯವಿರಾಮಾ
ಪರಿಪೂರ್ಣ ರಾಮಾ ೧

ಶಾಮಸುಂದರ ಶಕಟಾಸುರಮರ್ದನ
ಸಾಮಜವರದನೆ ಮಾತುಳಾಂತಕ
ಮಾಮನೋಹರ ಮದನ ಜನಕನೆ ಕರುಣಿಸಿ ಎನ್ನನು ೨

ಏನು ಬಲ್ಲೆನು ನಾನು ನಿನ್ನ ಮಹಿಮೆಯನ್ನು
ದೀನ ಸುರಧೇನು ಬಣ್ಣಿಸಲಳವೆ ನಿನ್ನ ಮಹತ್ತನ್ನು
ಮುನಿಮೌನಿವರರಿಂದ ಅನಘನೆನಿನ್ನಮಿತ ಗುಣಗಣನ ಕಾಣದೆ
ಲಕುಮಿ ಮನದಲ್ಲಿ ಅನುವು ತಪ್ಪೆ
ದಿವಿಜ ಮನುಜ ಲತೆಗಳೆಲ್ಲಾ ನಮೋ ನಮೋ
ಎಂಬೋರಲ್ಲದೆ ಸ್ವಾಮಿ ನಿತ್ಯ ೩

ಹಾಟಕಾಂಬರಧರ ಶ್ರೀವತ್ಸಲಾಂಛನ
ಜಟಾಮಕುಟ ಕುಂಡಲ ಕೈಟಭಾಂತಕನೆ

ಕಡಲಮಂದಿರ ಕುಟಿಲ ಕಟುಮತಿ
ಖಳರನು ಶಿಕ್ಷಿಸಿ ಕೈಯ್ಯ ಬಿಡದೆ ಎನ್ನಾ
ಮಾನಿಧಿವಿಠಲ ಕಾಲಿಗೆ ಬೀಳುವೆ ೬

## ೧೧೨

ದಯಮಾಡೋ ಹನುಮಾ ದಯಮಾಡೋ ಪ

ಎನ್ನೊಡನಾಡೋ ಬೇಡಿದ ವರಗಳ ಎನಗೆ ನೀಡೋ ಅ.ಪ.

ಅಂಜಾನಿಯ ಕಂದನೆ ಸಂಜೀವನ ತಂದನೆ
ಅಂಜಾದೆ ರಕ್ಕಸರ ಕೊಂದಾನೆ ೧

ಕೀಟಕಾಂತಕನೆ ಕಿರೀಟ ಸಖನೆ
ಪಾಂಚಾಲಿ ಹೃತ್ಕುಮುದ ಚಂದ್ರನೆ ೨

ಆನಂದತೀರ್ಥನೆ ಅಮ್ನಾಯಸ್ತುತನೆ
ಮಾನಿಧಿವಿಠಲನ ದೂತನೆ

## ೧೧೩

ಭಜಿಸೋ ಬೇಗ ಹರಿಯ ಅಜಭವಾಶ್ರಿತ ನಿಜ ದೊರೆಯ ಪ

ಕಾಮಕ್ರೋಧವ ಬಿಟ್ಟು ಮನಸಿನೊಳಗೆ
ರಾಮ ಮೂರುತಿಯಿಟ್ಟು ಪ್ರೇಮ ತಿಳಿದಷ್ಟು
ಆದಷ್ಟು ಕಾಮಿತಾರ್ಥವ ಕೊಟ್ಟು
ಹೇಮಗರ್ಭಭವ ಸೋಮ ಸೂರ್ಯರಿಗೆಲ್ಲ ೧

ನಿಯಮನ ಮಾಡುವ ಮಹಾ ದೈವವ ಬಿಟ್ಟು ಇರಸಲ್ಲ
ಜಗದೊಳಜಾಮಿಳ ಬಲ್ಲ ನಂಬಿ ಕೆಟ್ಟವರಿಲ್ಲ
ಧ್ರುವಬಲ ಇಂಬುಗೊಂಡರಲ್ಲ ತುಂಬಿದ ಸಭೆಯೊಳಾಂಬುಜಾಕ್ಷಿ
ಮಾನಗೊಂಬಾಗ ಅಂಬರ ವೃಷ್ಟಿ ಸುರಿಸಿದ ೨

ಒಂದೇ ಮನದಿ ಭಜಿಸೆ ಭವವೆಂಬೋ ಬಂಧನವ ಬಿಡಿಸುವ
ಮುಂದೆ ಮುಕ್ತಿಯ ಪರಿಸಿ ಕೊಡುವನು ಚಂದದಿ ಅನುಕರಿಸಿ
ಬಂಧ ಮೋಕ್ಷಪ್ರದ ಮಾನಿಧಿವಿಠಲನ
ಇಂದಿಗೂ ಮುಂದಿಗೂ ಬಿಡದೆ ನೀನೆಂದೆಂದಿಗೂ ೩

## ೧೧೪

ಮನ್ನಿಸಯ್ಯ ಮದನಜನಯ್ಯ ಘನ ಮುನ್ನೀರಶಯ್ಯ
ಸ್ವಾಮಿ ಹಯವದನರಾಯಾ ಪ

ಬಾರಿಬಾರಿಗೂ ಈತನ ಮಂದಿರದಲಿ ನಿನ್ನ
ಚೆನ್ನಿಗ ರೂಪವ ತೋರೋ ನಿನ್ನ ಕರುಣದಿ ಅ.ಪ.

ಈಶಾ ಭವಪಾಶಾ ಎಂಬೋ ಬೀಸಿದ ಬಲೆಯೊಳು ಗಾಸಿಗೆರೆದೆನೂ
ರಂಗಾ ಕೃಪಾರಿಣ ವಾಸಿ ಪಂಥಗಳು ವಾಸುದೇವನೆ
ಲೇಸ ಮಾರ್ಗವ ಕಾಣೆ ನಿನ್ನಾಣೆ ದಾಶರಥಿಯೇ
ನಿನ್ನ ದಾಸರ ಕೂಡಿ ಸಂತೋಷಪಡುವ ಸಿರಿಯೆನಗಿತ್ತು
ಸಲೆ ಮೀಸಲವ ಮಾಡೋ ದೇವರ ದಯಾಳೊ ೧

ಪಂಚಭೂತಗಳಲಿ ಪಂಚಾಗ್ನಿಗಳಲಿ ಪಂಚದ್ವಿಗುಣ ಪಂಚರಲಿ
ಮತ್ತೆ ಪಂಚಪ್ರಾಣದಲಿ ಪಂಚವಿಂಶತಿ ಮಾರ್ಗ ತೋರೋ
ಶ್ರೀಕಾಂತಾ ಪಂಚ ಹಿಡಿಸಿ ಪಂಚೊಂದೋಡಿಸಿ ಪಂಚನಾಲಕು ಭಕ್ತಿ
ಕೊಂಚವಾಗದ ಹಾಗೆ ಸಂಚಿತಾಗಮಾ ಮುಂಚೆ ಓಡಿಸೋ
ಶ್ರೀವತ್ಸಲಾಂಛನನೇ ೨

ಶ್ರೀನಿವಾಸನೇ ನಿನ್ನ ಧ್ಯಾನಮಾತ್ರದಿ ಬರುವೋ
ಬಿಗನು ಅಘನಾಶನವೆಂದೊ ನಾನಿಂದೂ
ಬೆಂಬಿದ್ದ ಅಬಲನ ಮನ್ನಿಸೋದಲ್ಲದೆ
ಹೀಗೆ ಮುನಿಸೋರೇನೋ ಶ್ರೀಹರೆ

ಅನಿಲಾಂತರ್ಗತ ಮಾನಿಧಿವಿಠಲ ತನುಮನ
ನಿನ್ನ ಸನ್ನಿಧಿಗೊಪ್ಪಿಸಿದೆನೊ ಮನ ಬಂದುದು ಮಾಡೊ
ಘನತೆ ನಿನ್ನದು ದೇವಾ ದೀನ ದಯಾನಿಧೆ ಉರಗಾದ್ರಿವಾಸಾ ೩

## ೧೧೫

ಯದುರ್‍ಯಾರು ನಿಲ್ಲುವರೋ ಹನುಮರಾಯಾ ನಿನಗೆದುರ್‍ಯಾರು
ನಿಲ್ಲುವರಯ್ಯಾ ಈ ಜಗತ್ರಯದಿ ಪ

ಮದನ ಶರಾರ್ಬತ [?] ಕದನ ಕರ್ಕಶ ಧೀರಮಣಿಯೇ ಅ.ಪ.

ಜನನಿಯ ಜಠರದಿ ಜನಿಸಿದಾಗಲೆ ದಿವಮಂಡಲಕೆ ಹಾರಿದೆ
ದನುಜಾಂತಕ ರಾಘವನ ಸೇವೆ ಮನದಣಿಯೆ
ಮಾಡಿ ದುರಂಧರನೆನಿಸಿದೆ ೧

ದುರುಳ ದುಶ್ಶಾಸನನ ರಕುತವ ಹೀರಿ ಕರುಳು ಬಗೆವಾಗ
ಧುರದಲಿ ಅಷ್ಟು ವೀರರಿದ್ದು ಬಿಡಿಸಿಕೊಳ್ಳಲಾರದೆ
ಮಾರಿ ತಗ್ಗಿಸಿ ಕೆಲಸಾರಿದರಲ್ಲದೆ ೨

ಗುರುಮಧ್ವರಾಯಾ ದ್ವೈತವನು ಸಿದ್ಧಾಂತವ
ಮಾಡಿ ಅದ್ವೈತ ಮತವ ಗೆದ್ದು
ಮಾನಿಧಿವಿಠಲನ ಸೂಸಿ ಪೂಜಿಸಿ ಮೆರೆದೆಯಾ
ಮದ್ಗುರು ಮುನಿಮೌನಿರಾಮಾ ೩

## ೧೧೬

ಯಾರೇನು ಮಾಡುವರೋ ಹರಿಯೇ
ಯಾರಿಂದಲೇನಹುದು ಪ

ವಾರಿಜಾಂಬಕ ಮಾರಜನಕ
ಹಾರ ಕೌಸ್ತುಭ ವಕ್ಷ ಶ್ರೀಶಾ ಅ.ಪ.

ಅಜ ಈ ಜಗ ಸೃಜಿಸಿದನೆ
ಶ್ರೀದೇವಿಯು ನಿಜಗುಣ ನೆಲೆಗಂಡಳೆ
ಭುಜಗಭೂಷಣ ಆಯಕರ್ತನಾದರೆ
ಭಜಕನಾ ಬಯಕೆ ಬಾಯಬಿಡುವದೆ ೧

ಸುರಪ ಸುರರೊಡೆಯನೆ ಧರಣಿ
ಈ ಉರಗೇಂದ್ರ ಪೊತ್ತಿದನೆ
ದುರುಳನ ಭಯಕೆ ಪುರವ ಬಿಟ್ಟೋಡಿದ
ಧರಣಿಯ ದುರುಳನೊಯ್ಯೆ
ವರಾಹರೂಪದಿ ತಂದೆ ನೀ ತಂದೆ ಹರಿಯೇ ೨

ಶ್ರೀಪತಿ ಸುರತತಿಯ ಸೃಜಿಸಿ
ಈಪ್ಸಿತಾರ್ಥಗಳನೆಲ್ಲಾ ಅವರಿಗೆ
ಸ್ವಾಪ್ನಜಾಗ್ರತಿಯಲಿ ಪರಿಪಾಲಿಸೆ
ಮಹಾನಿಧಿವಿಠಲ ನೀನಲ್ಲದಿನ್ನಾರೋ ೩

## ೧೧೭

ಶಾಮಸುಂದರ ಪೊರೆಯೊ ರಘುರಾಮಾ
ಕಾಮಿತ ಫಲವಿತ್ತು ಪ

ಸೋಮಧಾಮ ಸುತ್ರಾಮ ಸುರಾರ್ಚಿತ
ಕರುಣದಿ ದಯವಿತ್ತು ಅ.ಪ.

ತಟಿತ್ಕೋಟಿ ನಿಭ ಹಾಟಕಾಂಬರನೆ
ಘಟಿತವಾದ ಈ ಜಟಿಲ ಶರಧಿಯೊಳು
ನಟ ನಡುವೆ ಸಿಲುಕಿ ಗುಟಕ ನೀರು ಕುಡಿದ ಈ
ಪುಟ [ಟ್ಟ] ಪುರುಷನ ಮೇಲೆ ದೃಷ್ಟಿ ಇಟ್ಟು ನೋಡಿದರೆ
ಪಟುಲವೇನೋ ವಟಪತ್ರಶಯನನೆ
ನಟವಳಿಯೊಳು ಈ ಭಕುತ ಕಟಕಿಯ ಮಾಡೆ ೧

ಚಂಡ ವಿಕ್ರಮ ಕೋದಂಡ ದೀಕ್ಷಾ ಖಂಡ ಮಹಿಮಾರಾಮಾ
ಖಂಡ ಪರಶುಮಾರ್ತಾಂಡ ಸುರಾರ್ಚಿತ ಪಂಡಿತ ರಣಭೀಮಾ
ದುರಿತವೇಕೋ ಗಂಡ ಕಂಠೀರವನೆ ಡಿಂಗರಿಗಾತಿ ಪ್ರೇಮಾ
ಅಂಡಜವಾಹನ ಪಾಂಡವ ಮೂರುತಿ ಕುಂಡಲಗಿರಿಧಾಮಾ ೨

ಘನಚರಿತ ಪ್ರಸನ್ನ ದಯಾಂಬುಧಿ ಇನ್ನಾದರೂ ಈ ಚಿಣ್ಣಗೆ
ಚೆನ್ನಾಗಿ ದೃಷ್ಟಿಯಿಟ್ಟು ಕೃಪೆಮಾಡು ಸನ್ನುತಿಸುವೆ ಮುನ್ನಾ
ಕಣ್ಣೆತ್ತಿ ನೋಡದೆ ಅನ್ನ ದೈವಂಗಳ ಬಿನ್ನವಿಸುವೆ ನಿನ್ನಾ
ಮನ್ಮಥಪಿತ ಭೋ ಮಹಾನಿಧಿವಿಠಲ ಅಹರಹದಿ ನಿನ್ನಾ ಚನ್ನಾ ೩

## ೧೧೮

ನಿನ್ನೊರತು ಇನ್ನಿಲ್ಲ ಹನುಮಾ
ಜಯ ಭೀಮಾ ಗುರುಮಧ್ವರಾಯಾ ಪ

ಅನ್ನವಸ್ತ್ರವ ಕೊಟ್ಟು ಅನ್ಯರಿಗೆ ಬೇಡಿಸದೆ
ಅನುಗಾಲವೂ ಕಾಯೋ ಅನುಪಮ ಚಿಂತನ ೧

ಬಂದ ಬಂದ ಕಂಟಕವನ್ನು ಬಂದು ಬಂದೂ ಬಯಲು ಮಾಡಿ
ಎಂದೆಂದಿಗೂ ಕಾಯೋ ಸುಂದರ ಮೂರುತಿಯೇ ೨

ಕದರೂರು ಹನುಮೇಶ ಹಸನ್ಮುಖವಿಠಲನ
ಮುದದಿಂದಲಿ ಒಲಿಸಿದ ಚದುರ ಮೂರುತಿಯೆ ೩

## ೧೧೯

ನೋಡೋ ಹನುಮ ನಂಬಿದೆ ಭೀಮಾ ವರಮಧ್ವರಾಯಾ ಪ

ತ್ರೇತಾಯುಗದಲಿ ರಾಮನ ಸೇವೆಗೆ ನೇಮದಿ ಬಂದು
ಆ ಲಂಕೆಯ ಬೆಂಕಿಗೆ ಆಹುತಿ ಇತ್ತ ೧

ಹೃದಯವ ಹರಿಸಿದನವ ಮಾಡಿದ
ಹದನವ ತೋರಿಸೋ ಬುಧಜನ ನಮಿತನೆ ೨

ದ್ವಾಪರ ಯುಗದಲಿ ಪರಮಾತ್ಮನ ಪೂಜಿಸಿ
ತೋರಿಸಿದಂಥ ಅಪಾರ ಮಹಿಮನೆ ೩

ಕಲಿಯುಗದೊಳು ಮಹಾ ಖಳಮತಗಳನೆಲ್ಲಾ
ನಿನ್ನ ಸರಳಿಗಳಿಂದೊರಿಸಿದೆ ಅಕಳಂಕ ಮಹಿಮನೆ ೪

ತಂದೆ ಹಸನ್ಮುಖವಿಠಲನ ಚಂದದಿಂದಲಿ ಪಾಡುವ
ಸುಂದರಮೂರುತಿಯೆ ೫

## ೧೨೦

### ಗಣೇಶಸ್ತುತಿ

ಗಣಪತಿ ಎನದೋಷ ಬಿಡಿಸುವುದೊ ಶ್ರೀ–
ಶಾನತಿ ದಾಸಾ ವೆಂಕಟೇಶವಿಠಲನಾ ಪ

ದ್ವಿಪತುಂಡ ಅಪರಾಧ ಎಣಿಸಾದಿರೋ
ಪಾಪಾ ಚತುರೀಪಾ ಗಂಗಾಪಾ ಸಜ್ಜನರ ೧

ಇಭಮುಖ ಅಭಯವನೀಯುವುದೋ
ಕಾಯಾಚಿತ ಮಾಯಮಾಡಯ್ಯ ಪಾಮರಸ ೨

ವರಜೇಶಾ ಶಿರಿಮೊಗ ತೋರುವದೊ
ಜಿರಹಾಕೃತ ಸ್ನೇಹಾ ನರಸಿಂಹವಿಠ್ಠಲನಾ ೩

## ೧೨೧

ಗುರುವರ ಅಮೃತ ಗಜಾನನ ಯನ್ನಾಲಯದಿ ತಗದಾ ಆನನಾ ಪ

ತನುಜನ ತನ್ವೀ ತನುವಿನ ಘನತರ ಬಾಧೆಯು
ಅನುದಿನಾದವರಾ ತೊಳಲಿಸೆ ಅನಷ್ಟೇಕದಂತ
ತನು ರಕ್ಷಿಸಿ ತನ್ನ ಜನರೆಂದೆಣಿಸೆಮ್ಮ ಮನದಿ ನೆಲಸೀದಾ ೧

ಸಂತತಾನಂತ ಚೀಂತೆಯು ಅಂತರ ದುಗುಡವು
ಎಂತು ಕಂಗೆಡಿಸಿ ನೋಳ್ಪವು ಸುತಗಜಾನನ
ಸಂತ ಮಹಿಮ ಎನ್ನಂತ ತಿಳಿದು ತಾ ಚಿಂತೆಯ ತವಿಸಿದಾ ೨

ಶಿರಿಯನ್ನಾ ಗುರುತಾವರಿಯಳು ಮೆರದಿ ಹರನು ಬಂದು
ನಿರುತ ನಿನ್ನನಾ ಸ್ತುತಿಪೆನು ಪರಿಪರಿನುತಿಪುದ
ನರಿತು ಗಜಮುಖನು ನರಸೀಂಹವಿಠ್ಠಲಗೆರಗಿ ಹರಸೀದಾ ೩

## ೧೨೨

### ಶ್ರೀಹರಿಯ ಸ್ತುತಿ

ಅಂತರಂಗದಿ ರಕ್ಷಿಸೊ ನಿಂತು ಭಜಿಪೆನು ನಾ ನಿನ್ನ
ಕಡಲಶಾಯಿ ಪ

ರುಧಿರ ಮೂಲ ಸಾಸ್ಥಿಯ ಕಾಯಾ ಒಳ್ಳೆ
ಮೃದು ನರ ಜಾಲಗಳ ಸುತ್ತಿಹ ಮೈಯಾ
ಅದರೊಳು ನಿನ್ನಾದಿ ಕಾರ್ಯಾ ಮತ್ತೆ
ಸದಮಲ ಪ್ರಾಣೇಶ ನಿನಗೆ ತಾ ಸಹಾಯ ೧

ಸಂತತ ಹರಿಯ ಕೊಂಡಾಡಿ ಮಧ್ವ
ಪಂಥವ ಪಿಡಿದು ದುರ್ವ್ಯಸನವನೀಡಾಡಿ
ಕಂತುಪಿತನ ನಾಮಾ ಪಾಡಿ ಎನ್ನ
ಚಿಂತೆ ತಾರಕನೆಂದು ನಂಬಿದೆ ಕೂಡಿ ೨

ನರದೇಹ ಕೊಡುವವನು ನೀನು ನಿನ್ನ
ಮರೆದಧಮದ ಶಾಸನ ಕರ್ತಾ ನಾನು
ನರಸಿಂಹವಿಠಲನು ನೀನು ನಿನ್ನ
ಕರುಣೆ ತಪ್ಪಿದ ಮೇಲೆ ಜೀವನವೇನು ೩

## ೧೨೩

ಅಗಣಿತ ಗುಣ ನಾ ಮುಗುವೆ ಕರ ಪ

ಪಾಪ ವಿಮೋಚಕ ತಾಪವಿದೂರಕ
ತಾಪತ್ರಯಗಳನೇಕ ಪರಿಹಾರಕ ೧

ದೋಷನಿವಾರಕ ತೋಷಪ್ರದಾಯಕ
ದಾಸಜನರ ಚಿತ್ತವಾಸನಾಯಕ ೨

ಗಗನದೊಳಿರುವಂಥ ಜಗದೊಡೆಯನೇ ನೀನು
ನಿಗಮಗೋಚರ ಶ್ರೀ ನರಸಿಂಹವಿಠ್ಠಲಾ ೩

## ೧೨೪

ಅಷ್ಟಮಿ ನಿಶಿಯೊಳಾದರೂ ಉಷ್ಣನಲ್ಲವೆ ಕೃಷ್ಣಾ ಪ

ಕೇತಕಿ ಕಂಜಜ ಪರಿವೃತನಾದರೂ
ಖ್ಯಾತವಾದಾ ಮೋಹ ಬೀರುವವಲ್ಲದೆ ಪ್ರೀತವು ದೇವಗೆ ೧

ಶತಪತ್ರ ಕೈವಲ ವೇಷ್ಠಿತವಾದರೂ
ಕ್ಷಿತಿಪತಿ ಶಿರದೊಳು ಭೂಷಣವಲ್ಲದೆ
ರತಿಯು ಶ್ರೀಲಕುಮಿಗೆ ೨

ನರಸಿಂಹವಿಠಲ ತಾ ಕೃಷ್ಣನಾದರು
ಸುರವೈರಿ ನಿಶಿಯನು ಕುಡಿವವನಲ್ಲದೆ
ಸ್ಮರಿಪರ ಸುರತರು ೩

## ೧೨೫

ಆದಿಕೇಶವಗರ್ಥಿಯಲಿ ನಾನಾರ್ತಿ ಮಾಡುವೆನು
ಆರ್ತಿ ಮಾಡುವೆ ನಾ ಮಂಗಲಾರ್ತಿ ಮಾಡುವೆನು ಪ

ಶೀಳಿ ದೈತ್ಯನ ಲೀಲೆಯಲಿ ಮಂಗಳೋಲೆ ತಂದವಗೆ
ವ್ಯಾಲತಪ್ಪಿದ ಶೈಲವನು ಬೆನಮ್ಯಾಲೆ ಪಿಡಿದವಗೆ
ಖೂಳಗೆ ತೋರಿದ ... ಪದಗೋಲ ತಂದವಗೆ
ಬಾಲಗೆ ಪಿತ ಗೋಳು ಮಾಡಿದ ಕೇಳಿ ಆ ದೈತ್ಯನ ಶೀಳ್ದವಗೆ ೧

ಭೂಮಿಯ ಬೇಡಿ ನಿಸ್ಸೀಮ ಬಲಿನೃಪನಾ
ಹಮ್ಮು ಕರಗಿಸಿ ಪಾತಾಳಕಟ್ಟಿದವಗೆ

ನೇಮದಲಿ ಕ್ಷಾತ್ರಸ್ತೋಮವ ನಿರ್ನಾಮ ಮಾಡ್ದವಗೆ
ಕಾಮಿ ದಶಶಿರ ನಾಮವಳಿದ ಶ್ರೀರಾಮ ಚಂದಿರಗೆ
ಸೋಮಕುಲದ ಸುನಾಮಿ ವರ್ಗಕೆ
ಪ್ರೇಮರಸ ಸತ್ಯಭಾಮಾವರಗೆ ೨

ಹರನ ಬಲಪಿಡಿದರೀ ತ್ರಿಪುರಸಂಹರೀಸಿದ ಶಿರಿವರಗೆ
ಹರಿಯನೇರಿ ದನುಜಾರನ್ನೆಲ್ಲ ಸವರೀದ ಭೂವರಗೆ
ಶರಣಜನರೊಳು ಕರುಣವಿರಿಸಿ ನಿರುತ ಪೊರೆದವಗೆ
ಪರಮಗುರು ಪವಮಾನಗೊಲಿದಾ ಸುರರೊಡೆಯ
ಶ್ರೀ ನರಸಿಂಹವಿಠಲನಿಗೆ ೩

## ೧೨೬

ಎಂಥಾದ್ದು ರಾಮನ ರೂಪಿನ್ನೆಂಥಾದ್ದು ಪ

ಎಂಥಾದ್ದು ಶ್ರೀರಾಮನ ರೂಪಾ
ನಿಂತು ಭಜಿಪತ್ಯಾನಂದಗೊಳಿಪಾ
ಸಂತ ಕುಮುದ ಮಿತ್ರನು ತಾನೆನಿಪಾ ಆಹಾ
ಚಿಂತಿಪರ ಜಗತ್ರತ್ತಿವಾಸರು ನಿರುತದಿ
ಅಂತರಂಗದ ಜ್ಞಾನ ಚಕ್ಷು ಗೋಚರ ರೂಪಿನ್ನೆಂಥದ್ದು ೧

ಸುಷ್ಟವಾದನಿಷ್ಟಗಳು ಎಷ್ಟು ಬಳಲಿಪವು ಪಗಲಿರುಳು
ಕಷ್ಟಬಡುತಿಹವಷ್ಟಾಂಗಗಳು ಆಹಾ
ದೃಷ್ಟಗೋಚರ ಸ್ವಾಮಿ ಕಷ್ಟಕಳೆದು ನಮ್ಮ
ನಿಷ್ಟಪೊಯ್ದೋಡಿಸೆ ತುಷ್ಟಗೊಳಿಪ ರೂಪಿನ್ನೆಂಥಾದು ೨

ಸ್ಥಿರಮೂರ್ತಿ ನೀನಹುದಲ್ಲೆ ಸುರವೃಂದಕೆ ನೀ ಚೆಂದನಲ್ಲೆ
ನರಪೊಗಳಲು ಸುಳಿಯುವಲ್ಲೆ ಆಹಾ
ಮರುಳು ಮನುಜ ನಾನು ಮರೆದು ಬಳಲಿಪೆನು
ನರಸಿಂಹ ವಿಠಲ ಕರಪ ಮುಗಿವೆ ತೋರಂಥಾದು ೩

## ೧೨೭

ಏಸು ಪರಿ ನೆಲಸಿದೀ ಏ ಸ್ವಾಮಿ
ಏಸು ಪರಿ ನೆಲಸೀದಿ ಏಸುಪರಿ ನೆಲಸೀದಿ
ದಾಸಜನ ಹೃದಯದಿ ಭೂಸ್ವರ್ಗ ಪಾತಾಳ
ಬ್ಯಾಸರ ಮಾಡಿದಿ ಪ

ಎಸೆವ ಚಂಚಲ ಶಿರಿಯು ತವರ್ಕಣ್
ಮಸಕು ಮಾಡಿದಳೇನೋ
ಬಿಸಜಸಂಭವ ವೇದಪಠಣದಿ
ಕುಶಲ ನುಡಿಯನೇನೋ
ಅಸ್ವಧಿಪ ಪ್ರಾಣ ಸೊಸಿಯ ವಾಣಿಯು
ಸ್ವಸುತೆ ಭಾರತೀ ಉಸುರಿಬಿಟ್ಟಳೇನೋ ೧

ಮುಪ್ಪೊಳಲುರಿಗಾನು ಪೌತ್ರನು ವೊಪ್ಪುವ ಮೃಗಣ್ಣಾ
ತಪ್ಪದೆ ಸೇವಿಸುವ ಸುಮನಸರಪ್ಪಣಿತ್ತರೇನೋ
ತಪ್ಪದಾಸರನ ಮುಗಿಪ್ಪ ಗರುಡ ಶೇಷ–
ರೊಪ್ಪಿಗಿಯಿಲ್ಲದೆ ತಪ್ಪಿಸ್ಯೋಡಿ ಬಂದ್ಯಾ ೨

ಸುರಲೋಕವಾಸಾವು ಶ್ರೀಹರೆ ಪರಮಸೌಖ್ಯವಲ್ಲೆ
ಸುರತರುಧೇನುಗಳು ನಿನಗೆ ತಾವ್ ಕೊರತೆ ಮಾಡಿದವೇನೋ
ಸುರಮುನಿಗಂಧರ್ವರ ಗಾಯನ ಬಿಟ್ಟು
ಸರಸವೇನು ಕಂಡಿ ನರಸಿಂಹವಿಠಲ ೩

## ೧೨೮

ಒಂದಾನೊಂದು ದಿನ ನಂದ ಯಶೋದೆಯು
ಕಂದನ ಪ್ರೀತಿಂದಾಡಿಸಲು
ಅಂದುಗೆ ಅರಳೆಲೆ ಬಿಂದಿಗೆ ಮಾಗಾಯಿ
ಚಂದದಿ ಮಗನನ ಮಾತಾಡಿಸಲು ೧

ಉಂಗುರ ಉಡಿದಾರ ರಂಗು ಮಾಣಿಕವು ನೀ–
ಲಾಂಗಗೆ ಎತ್ತಿ ಆಲಿಂಗನೆ ಮೋಹದಲಿ
ರಂಗನ ಎತ್ತಿ ಆಲಿಂಗನ ಮಾಡುತ್ತಾ
ಲಿಂಗನ ಸಹಿತ ಸಮೋಹದಲ್ಲಿ ೨

ಅಂಗನೆ ಗೋಪಿಯು ನರಸಿಂಗವಿಠಲಗೆ
ಮಂಗಳ ವಾಕ್ಯವು ಮೋಹರಿಸಿ
ರಂಗಕುರಂಗ ಚಾತಕ
ಸಂಗದಿ ಪಕ್ಷಿಗಳ ಕರೆಸಿ ೩

## ೧೨೯

ಒಂದೇ ಕರದೊಳು ಅಮ್ಮಯ್ಯಾ ನಿನಗುಣ್ಣಿಸುವೆನು ಕೇಳಮ್ಮಯ್ಯಾಪ

ಮಧುರ ಸುಧಾಘಟವಮ್ಮಯ್ಯಾ ಉದಭವಿಸೆ
ಜಲಧಿಯೊಳಮ್ಮಯ್ಯಾ
ಮಧುವೈರಿ ಜಲಧಿಯೊಳಮ್ಮಯ್ಯಾ ಮುದಬಿಂದು
ಉದುರಲು ಅಮ್ಮಯ್ಯಾ
ಸದಮಲ ತುಲಸಿ ನೀನಮ್ಮಯ್ಯಾ
ಉದಭಿಜಡರುಹುಗೊಂಡಮ್ಮಯ್ಯಾ ೧

ಶಿರಿಕೃಷ್ಣ ಮೆಚ್ಚಿದನಮ್ಮಯ್ಯಾ ಶಿರದೆಡೆಯೊಳಾಂತನು ಅಮ್ಮಯ್ಯ
ವರಗಳನಿತ್ತನು ಅಮ್ಮಯ್ಯ ಹರಿಯರ್ಚನೆಗಧಿಕಳು ಅಮ್ಮಯ್ಯ ೨

ಮಿಸುಪ ವ್ಯಕ್ತಿಯು ಅಮ್ಮಯ್ಯ ನೊಸಲೆಡೆವ ಭೂಷಣವಮ್ಮಯ್ಯ
ಅಸುಬಿಕ್ಷಣಾಳ್ಗಳು ಅಮ್ಮಯ್ಯ ಮಿಸುಕದೆಲೆ ಪೋಪರು ಅಮ್ಮಯ್ಯ೩

ಮಂಗಳಬಲೆಯರು ಅಮ್ಮಯ್ಯ ಗಂಗಾಜಲವೆರೆಯಲು ಅಮ್ಮಯ್ಯ
ಲಿಂಗಪೂಜಿಸಲು ಅಮ್ಮಯ್ಯ ಇಂಗಿತದ ವರಗಳೀವೆಮ್ಮಯ್ಯ ೪

ನರಸಿಂಹವಿಠ್ಠಲ ನಮ್ಮಯ ಸರಿ ನೀನೆ ಬತ್ತಳೆಂದಮ್ಮಯ್ಯಾ
ಪರಿಪರಿಭಕ್ಷಗಳಮ್ಮಯ್ಯ ಆರಂಭಿಸುವೆ ಪರಾಕು ನೀನಮ್ಮಯ್ಯ ೫

## ೧೩೦

ಕಂದ ಕೃಷ್ಣ ನೀನು ಪವಡಿಸಲೆಂದು ನಾ-
ನೊಂದು ಕಥೆಯ ಪೇಳ್ವೆನೋ
ನಂದನನೇ ಒಂದು ಕಥೆಯ ಪೇಳ್ವೆನು ಪ

ಹಿಂದಿನ ಯುಗದಲ್ಲಿ ಶ್ರೀರಾಮನೆಂಬೊರ್ವ
ಕಂದ ಕೌಸಲ್ಯಗಾದ
ಮುಂದೆ ಪೇಳು ಹುಂಕಾರದಿ ಕೇಳಿದೆ
ಚಂದವಾದೀ ಕಥೆಯ ಸುಧೇಯ ೧

ಆತನ ಪತ್ನಿ ಸುಶೀಲೆ ಸೀತೆಯೆಂದು
ಖ್ಯಾತಳಾದಳು ಜಗದಿ
ಮೂಡಿದನೆಂದೆ ಹುಂ ಮಾತೆ ಮುಂದಕೆ ಪೇಳು
ಸೀತಾರಾಮರ ಕಥೆಯು ಸುಶ್ರಾವ್ಯ ೨

ಪಂಚವಟಿಯಲಿ ಸಂಚರಿಸುತ್ತಿರೆ ಪಂಚದ್ವಯಾನನನು
ಕೊಂಚ ಮಾತ್ರ ಹುಂಕಾರವ ನುಡಿ ವಿ-
ರಿಂಚಿ ಪಿತನು ಮುನಿದಾ ಸದ್ದಾದ ೩

ಮಿಥ್ಯಾಯೋಗಿ ಯಾಗಿ ಸತ್ಯಮಹಿಮಳ ತಾ-
ನೆತ್ತಿ ಕೊಂಡೋದನಯ್ಯ
ಒತ್ತರಿಸಿತು ಕೋಪ ಮತ್ತೆ ನುಡಿದ ಹರಿ
ಎತ್ತ ಸೌಮಿತ್ರೆ ಧನುರ್ಧರರ ಧನುರೆತ್ತ ಸೌಮಿತ್ರಿ ಧನುರ್ ೪

ಪುಟ್ಟ ಕೂಸೆ ಆರ್ಭಟವೆಷ್ಟು ಮಾಡುವೆ
ನಿಟ್ಟಿಪುದಸದಳವು

ಥಟ್ಟನೆ ಮಲಗೈಯ್ಯಾ ದಿಟ್ಟೆ ನರಸಿಂಹವಿಠಲ
ಪಟ್ಟರಿಸುವೆನಯ್ಯ ರಂಗೈಯ್ಯಾ ಪಟ್ಟರಿಸುವೆನಯ್ಯಾ ೫

## ೧೩೧

ಕೃಷ್ಣರಾಯ ತಾ ಬಂದಾ ಕೃಷ್ಣರಾಯ ತಾ ಬಂದಾ
ಗೋಕುಲದಿಂದಾ ಬಿಡಿಸ್ಯಾನು ಬಂಧಾ ಪ

ಶಂಖ ಚಕ್ರ ದೋರ್ದಂಡ ಶಂಖ ಚಕ್ರದೋರ್ದಂಡ
ಕೋಟಿ ಮಾರ್ತಾಂಡ ಕಾಂತಿ ಉದ್ದಂಡ ಶಕ್ತಿ
ಖಲಕಂಡ ಕೃಷ್ಣರಾಯಾ ೧

ಆನಂದ ಗುಣಪರಿಪೂರ್ಣ ಆನಂದ ಗುಣಪರಿಪೂರ್ಣ
ವಪ್ಪುವಾಭರಣ ಲಿಂಗಸಂಪೂರ್ಣ ಭಕ್ತಜನ ಕರುಣಾ ಕೃಷ್ಣರಾಯಾ ೨

ಶರಣಜನ ಪರಿಪಾಲಾ ಶರಣಜನ ಪರಿಪಾಲಾ
ಗಾನವಿಲೋಲ ಭಕ್ತವತ್ಸಲ ನರಸಿಂಹವಿಠಲ ಕೃಷ್ಣರಾಯಾ ೩

## ೧೩೨

ಗೋಕುಲ ಬಿಟ್ಟ್ಯಾಂಗಿಲ್ಲಿಗೆ ಬಂದೆ ಶಿರಿಕೃಷ್ಣ ರಂಗಾ
ವ್ಯಾಕುಲದಲಿ ನೀ ಸಾಗರ ತ್ಯಜಿಸಿ
ಜೋಕೆಯಿಂದಲಿ ನಿಜಧಾಮಕೆ ಬಂದೆ ಪ

ಬನ್ನವ ಪಡುತಿಹ ಭಕುತನ ನೋಡಿ ಚಿಂತೆಯ ಮಾಡಿ
ಎನ್ನಂತರಂಗದ ಬಾಧೆಗಳು ಕಾಡೆ ಬಳಲುವುದಾ ನೋಡೆ
ಮನ್ನಿಸಿ ಶರಣನ ಬಾಧಿಸುವ ಪೀಡೆ ಪರಿಹಾರ ಮಾಡೆ
ಪನ್ನಗ ಶಯನ ಶ್ರೀಹರಿಯೇ ಓಡೋಡಿ ಬಂದೆ ೧

ಮೊಕ್ಕಿಹೆನು ಸಂಸಾರಾರ್ಣವದೊಳಗೆ ಬಹು ದುಃಖದ ಅಲೆಗೆ
ಲೆಕ್ಕವಿಲ್ಲದಾ ಜಂತುಗಳದರೊಳಗೆ ಇಂಬಿಲ್ಲಾ ಅಲ್ಲಿಡಿಂಬಕೆ

ಸಿಕ್ಕಿ ಬಳಲುವಂಥ ಭಕುತನ ನೋಡಿ ಬಿಡುಗಡೆ ಮಾಡೆ
ಅಕ್ಕರದಿಂದಲಿ ಭರದಿ ಕಾಪಾಡಲು ಬಂದೆ ೨

ಶರಣರ ಪೊರೆಯುವುದೇ ನಿನ ಗುಟ್ಟು ಬಣ್ಣಿಸಲಿನ್ನೆಷ್ಟು
ಕರುಣಿಸಿ ಬರುವಿ ಸಿರಿಯನು ಬಿಟ್ಟು ಭಕುತರೆ ನಿನಕಟ್ಟು
ನಿರುಪಮ ನಿನ್ನಯ ದಯಕೇನೆನ್ನಲಿ
ಶರಣರ ಪೊರೆಯುವಿ ನರಸಿಂಹವಿಠಲಾ ಬಂದೆ ೩

## ೧೩೩

ದಾವನಿಹನೈಯ್ಯಾ ಕೃಷ್ಣಾ ಎನ್ನ ಕಾವವನು ನೀನಲ್ಲದೆ ಪ

ನಾರಿ ದ್ರೌಪದಿ ನೆನೆಯಲು ಸಭೆಯಲ್ಲಿ
ಶೀರಿ ದಾನವ ಮಾಡಿದೀ ಕೃಷ್ಣಾ
ಘೋರ ದೂರ್ವಾಸ ಮುನಿಯು ನಡುವಿರುಳೆ
ಹಾರೈಸಿ ಬರೆಯನ್ನವಾ ದೇವಾ
ನಾರಿ ದ್ರೌಪದಿಯ ಮೊರೆಯ ದೊರೆಯು ಆಲಿಸೇ
ಆ ರಾತ್ರಿ ಕಾಯ್ದ್ಯೋಬಲೆಯಾ ೧

ಪರಿವಾರದಿಂದ ಕೂಡಿ ಕರಿರಾಜನಂಗ ನಾಟಕಂದ್ಯೆದಲು
ಭರದಿನೆಗಳಿಯು ಪಿಡಿಯಲು ಕಾಲನು
ಇರದೆ ನಿನ್ನನು ಸ್ಮರಿಸಲು ದೇವಾ
ಗರುಡವಾಹನನಾಗಿ ನೀನೈತಂದು
ಕರುಣಿಸಿದ್ಯೋ ಕೊನೆಯ ಗತಿಯ ೨

ದುರುಳ ಹಿರಣ್ಯಕನ ಶೀಳಿ ನರಹರಿಯೆ
ತರಳ ಪ್ರಲ್ಹಾದನ ಪೊರೆದ್ಯೋ ದೇವಾ
ಮರೆಯದಜಮಿಳ ನೆನೆಯಲು ಕೇಳ್ದು ನೀ
ಪರಿಹರಿಸಿದೆ ಯಮಬಾಧೆಯ ದೇವಾ
ನರಸಿಂಹವಿಠಲ ಸ್ವಾಮಿ ಧ್ರುವನನ್ನು
ಪೊರೆದಂತೆ ರಕ್ಷಿಸೆನ್ನಾ ೩

## ೧೩೪

ದೇಶ ತಿರುಗಿಸಿ ಪರದೇಶಿ ಮಾಡಲು ಬೇಡೋ
ಈಶ ನೀ ಘನ್ನಾ ಸಂಪನ್ನಾ ಪ

ಜನಕನಂಶದಿ ಧ್ರುವನು ಸನುಮತವ ಮಂಡಿಸಲು
ಘನರೋಷ ತಾಳಿ ಮಲಜನನಿ ಧೂರ್ತೆ ದೂಡಲು
ವನವಾಸ ಲೇಸೆಂದು ತಿಳಿದು ನಿನ್ನ ನೆನೆಯೆ ತಾ ನಡೆದ
ಘನಮಹಿಮ ಶ್ರೀಮನ್ನಾರಾಯಣ ಸ್ಥಿರಪಟ್ಟವ ನಾಡಿದ ೧

ಖಳ ಕುರುಪಗೊಡೆತನವು ಭಲೆ ಧರ್ಮಗೆ ವನವಾಸವು
ಬಲು ಮಾನವಂತೆ ದ್ರೌಪದಿಯು
ಜಲಜನಾಭನೆ ನೀನೆ ಗತಿಯೆನಲು
ಒಲಿದು ಬೆಂಬಲನಾಗಿ ಪಾಂಡವರ ಪೊರೆದೆ ೨

ವರಮುನಿಯ ಶಾಪದಿಂದರಸನಿಂ ಪ್ರದ್ಯುಮ್ನ
ಕರಿರಾಜನಾಗಿ ಮಡುವೊಳು ಕ್ರೀಡಿಸೆ
ಭರದಿ ನೆಗಳಿಯು ಪೀಡಿಸೆ ಶ್ರೀ–
ಹರಿಯೆಂದು ಮೊರೆಯಿಡಲು ಶ್ರೀ–
ಕರದಿಯುದ್ಧರಿಸಿದೆ ನರಸಿಂಹವಿಠ್ಠಲಾ ೩

## ೧೩೫

ಧರಣಿಪತಿ ನಿನ್ನಯ ಕರುಣವೆಂಬುದೆ ಸಾಕು ಪ

ಉರಗಾದ್ರಿನಿಲಯ ವಾಸಾ ಧರೆ ನರಾಧಮರೆನ್ನ
ಪರಿಪರಿ ಪೀಡಿಸಿ ಜರಿದುಗೈವರು ಪರಿಹಾಸ ಅ.ಪ.

ಹಿಂದೆ ದುರುಳರ ಸಭೆಯೊಳರವಿಂದ ವದನೆಯ
ಮಾನವನು ಬಿಡದೆ ಕಾಯ್ದ
ಕಂದು ಗೊರಳನ ಬೆನ್ನಟ್ಟಿಬರೆ ರಕ್ಕಸನು ಪೆಣ್ಣಾಗಿಯವನುರುಹಿದಿ

ಅಂದು ಸೈಂಧವನ ಕೊಲೆ ಶಪಥವನೆ ಕೇಳ್ದು ನೀ
ನರನನುಡಿ ನಿಜಮಾಡಿದಿ
ಇಂದು ನಾ ಭವತಾಪದಿಂದ ಬಲು ನೊಂದಿಹೆನು ಬಂದು ರಕ್ಷಿಸೋ
ಗೀತವಾದಿ ಕೃಷ್ಣ ೧

ಗಜವರನು ನೆಗಳ ಬಾಧೆಗೆ ಸಿಲುಕಿ ಕರೆಯಲು
ಭರದಿಯವನುದ್ಧರಿಸಿದೀ
ವಿಜಯಸಾರಥಿಯೆನಿಸಿ ಕೌರವನ ಕುಲವಳಿದು
ಪಾಂಡವರಿಗೊಲಿದು ಪೊಂದಿ
ನಿಜ ಬೆರಳಿನಲ್ಲಿ ಗೋವರ್ಧನವ ಪಿಡಿದೆತ್ತಿ ಗೋವಿಂಡು ಸಂತೈಸಿದಿ
ಭುಜಗಶಾಯಿಯೆ ನಿನ್ನ ಭಜಿಸುವೆನು ಮನಮುಟ್ಟಿ ಪಾಲಿಸೈ
ಕರುಣ ಶರಧೀ ಕೃಷ್ಣಾ ೨

ಹರಿವಾಯುಗಳ ಮರೆದು ಪರಿಪರಿ ಭೋಜನಾ
ಉಣಿಸಿ ದೇಹವ ಬೆಳೆಸಿದೆ
ತರಣಿಸುತ ಬಳಗದಿಂದೊಡಗೂಡಿ ಭವಸೌಖ್ಯ
ಸುರಿದು ಆಯುಷ್ಯ ಗಳಿಸಿದೆ
ನಿರುತ ಲೌಕಿಕಕೆ ನಾ ಮರುಳಾಗಿ
ವಿಷಯದಲ್ಯಭಿಮಾನ ತಾಳಿ ಮೆರೆದೆ
ನರಸಿಂಹವಿಠಲ ನಿನ್ನಪರೋಕ್ಷಿತ್ತೆನಗೆ ಪರಿಹರಿಸು
ಕಲಿಯ ಬಾಧೆ ಕೃಷ್ಣಾ ೩

## ೧೩೬

ನಾರಾಯಣ ಅವತಾರ್ದೋಳು ಸ್ವಾಮಿ ನೀ ಗಿರಿಯಾನೆತ್ತಿ
ಗೋಗಳ ಕಾಯ್ದದ್ದು ಮರತೇನೋ ಪಾವನಾತ್ಮನೆ ಪ

ಶ್ರೀರಾಮ ಅವತಾರ್ದೋಳು ಸ್ವಾಮಿ ನೀ ಶಿಲೆಯಾಮೆಟ್ಟಿ
ಪೆಣ್ಣನು ಮಾಡಿದ್ದು ಮರೆತೇನೋ ದೇವ ದೇವಾನೆ ೧

ನರಸಿಂಹವಿಠ್ಠಲ ಕೇಳು ಸ್ವಾಮಿ ನಾ ಪಾದದಾಸ
ನಿರುತದಿ ಪೊರೆವದು ಮರತೇನೋ ಜೀವರಕ್ಷಕನೆ ೨

## ೧೩೭

ನಿಂತು ಲಾಲಿಸಲಿ ರಾಧಾ ಕಂತುಪಿತನ ಪದನಾದ ಪ

ಬಲದ ಕಾಲೆಡದೊಳಿಟ್ಟು ಇಳೆಗೆ ಎಡದ ಪದ ಕೊಟ್ಟು
ಒಲಿದು ಮುರಲಿ ಮುಖವಿಟ್ಟು ಉಲಿಯೆ ಮಧುರ ರವ ಪುಟ್ಟಿ
ಗಿಲುಗಿಲು ಗೆಜ್ಜೆಯ ನುಡಿಸುತಲಿ ಗೊಲ್ಲ
ಬಲಬಾಲರೆಲ್ಲ ನಲಿಯುತಲಿಗೋ
ಕುಲವು ಹರ್ಷದಿ ಬಾಲ ನೆಗವುತಲಿ ದೇವಲಲನೆಯರ
ಪೂರ್ವ ಮಳೆಗರೆವುತಲಿ
ನಾನೆಂತು ಬಣ್ಣಿಸಲಿ ಹರಿಯ ಲೀಲೆಗಳ ಉಲಿಯುವ ಶ್ರುತಿನಾದ
ಜಲಧಿ ಮಂದರನಾದ ಗೆಲುವ ಒಗೆವ ಸುಕರನಾದವು
ಬಲದ ಸಿಂಹದ ನಾದ
ಸಲೆ ವಟುವಿನ ನಾದ ಬಲವಾದ ಪರಶುವಿನತಿನಾದವು
ಬಲವದ್ಬಾಣದ ನಾದ ವಲಿದ ಚಕ್ರದ ನಾದ ಬಲು ಚೆಲ್ವ
ಯಶೋಜಿತ ನಾದವು
ಬಲು ವಾಜಿನಾದಗಳ್ ಕೊಳಲಲಿ ಕೇಳುತ ನಿಂದು ೧

ಪಾಲು ಮೊಸರುಗಳನುಂಡು ಲೀಲೆಯಾಡುತಿರೆ ಕಂಡು
ಬಾಲೆಯರತಿ ಖತಿಗೊಂಡು ಗೋಳಿಡುತಲೆ ಹಿಂಡಿಂಡು
ಲಾಲಿಸೆಮ್ಮ ನಿನ್ನ ಮಗನ ಹಾವಳಿಯ
ಎಮ್ಮಾಲಯದೊಳು ಬೆಣ್ಣೆ ಮೆಲುತಲಿ
ಸಣ್ಣ ಬಾಲೆರಿಟ್ಟ ಪಾಲ್ ಕುಡಿವುತಲಿ ಕೆಳಮೇಲಾಗಿ
ಧದಿಯನು ಸುರಿವುತಲಿ
ಕೇಳೆ ಯಶೋದೆ ಪರಿಪರಿಯಲಿಟ್ಟುಳಿಗಳೇ
ಜಲದೊಳು ಧುಮುಕಿದ

ಕಲಕದ ಚಲವಿಡಿದ ಬಲುಬೇರ ಕೋರೆಯಿಂದಗಿದು ತಿಂದಾ
ಒಲಿದು ಕಂಬವ ನೋಡಿದಾ ಬಲಿಗೆ ಬಾಯಿ ತೆರೆದಾ
ಮೊಲೆ ಕೊಟ್ಟ ಜನನಿಯ ಶಿರಕಡಿದಾ ಕುಲಹೀನೆಂಜಲ ತಿಂದಾ
ಖಳಪೂತನಿಯಳಿದಾ ತಿಳಿಗೆಟ್ಟು ಮೈಬಟ್ಟೆ ಕಳೆದೊಗೆದಾ
ಬಲು ಮಿಂದೇರಿ ವಾಜಿ ಭಟರ ಬೆನ್ನಟ್ಟಿದಾ ನಿಂತು ೨

ಸುರಿವುತಿರಲು ಮಳೆ ಭಾರಿ ಚರಿವಾಘ್ಗಳು ಪೌಹಾರಿ
ಮರೆಯ ಕಾಣದೆಲೆ ಹೋರಿ ಕರವುತಿರಲು ಮುರವೈರಿ
ಭರದಿ ಗೋವರ್ಧನ ನಗವುತಲಿ ತನ್ನ
ಕಿರಿಬೆರಳಲಿ ಕೊಡೆವಿಡಿವುತಲಿ
ಸಣ್ಣ ಕರಗಳಾವುಗಳ್ ಸಲಹುತಲಿ ಮುದ ಗೋವುಗಳ ನೋಡುತಲಿ
ನಾನೆಂತು ಬಣ್ಣಿಸಲಿ ಶಿರಿವರನಾನಂದ ಭರದಿ ವೇದವ ತಂದ
ನೆರೆಶೈಲನೆಗಹಿದ ಧರಾಲಲನೀಯ ನಾಸದಿ ಪಿಡಿದ
ತರುಳಗಭಯನಾದ ಸುರನದಿ ಜನಿಸಿದ ಧರೆ
ದ್ವಿಜರಿಗೆ ದಾನವ ಮಾಡಿದಾ
ಹರಿಗೆ ಯಜಪದ ನೀಡ್ದಾ ಗುರುಪುತ್ರರನೆ ಪಡಿದಾ
ಹರಿಗೆ ಬೆಂಬಲನಾಗಿ ಬೋಧಿಸಿದಾ ನರಸಿಂಹವಿಠಲನ
ಹರಿಯೇರಿ ಮೆರೆವುದು ನಿಂತು ೩

## ೧೩೮

ನಿರುತದಿ ನೆನೆ ನರಹರಿಯ ನರಹರಿಯ ಶಿರಿಧೊರೇಯ ಪ

ಪೋತ ಧ್ರುವನು ತಾ ತಾತನ ತೊಡಿಯಲಿ
ಪ್ರೀತಿಲಿ ಕುಳಿತಿರೆ ಮಾತೆ ದೂಡಲತಿ ಸೋತು ಮನದಿ ಹರಿ
ಸ್ತೋತ್ರವ ಗೈಯ್ಯಲಾತಗೆ ಪದ ನೀಡಿದಾ ೧

ಕಡಿಗ್ಯಾದ ದ್ರೌಪದಿ ಮುಡಿಯ ಪಿಡಿದು ಖಳ
ಬಿಡೆಳೆದೊಯ್ಯೊ ಕಡುದುರುಳ ಸಭೆಗೆ

ಸಿಡಿದೆಳೆಯೆ ಶೀರೆಯನು
ಒಡನೆ ಹರಿಯೆನಲುಡುವಾಸವಕ್ಷೈಸಿತು ೨

ವರ ಪ್ರಲ್ಹಾದಗೆ ದುರುಳ ಹಿರಣ್ಯಕಶು–
ಪಿರದೆ ಪೀಡಿಸಲು ಪರಿಪರಿಯಿಂದಲಿ
ಹರಿಗೆ ಮೊರೆಯಿಡಲು ಕರುಳು ಬಗೆದ ನರಸಿಂಹವಿಠಲನು ೩

## ೧೩೯

ಪಾಷಾಣವಲ್ಲವದು ಭೂಷಣವು ಕರಕೆ
ದೋಷವಾ ದೂರಿಪುದು ತೋಷ ಜನಿಪುದು ಮನಕೆ ಪ

ದಾಸಳುದಕದಿ ಜನಿಸಿ ಶ್ರೀಶಸಂಕಿತ ವಹಿಸಿ
ವಾಸುದೇವನ ಭಜಕರೆದೆ ಪಿರಿದು ಎನಿಸಿ
ದಾಸಜನರಿದನು ನಿತ್ಯದಿ ಪಾಡಿ ಪೂಜಿಸಲು
ಘಾಸಿಯಕ್ಷಯ ಲೋಕಪಥವ ಸಲೆ ಕರುಣಿಪುದು ೧

ಶ್ರೀದೇವಿ ವಲ್ಲಭನು ಭೂದೇವಿ ರಮಣನು
ಸಾಧುಗಳ ಪ್ರಿಯ ಶ್ರೀಗಿರಿನಿಲಯನು
ಮೋದದಲಿ ಶಕ್ತ ಮೌಕ್ತಿಕ ಸ್ವರ್ಣಸರಿಯಲ್ಲ
ಭೇದ ತೋರಲು ದೃಶನ್ಮಾಯಯಂತಿಹ ಸ್ವಾಮಿ ೨

ಭಕ್ತರೊಳು ನಿಜದಾಸ ಯುಕ್ತ ಚಂದ್ರಹಾಸ
ವಕ್ತ್ರದೊಳ್ಗೊಳಸಿಹನು ನರಸಿಂಹದಾಸ
ಮುಕ್ತಿಪಂಥ ಕಂಡನವ ಸಂದೇಹ ಬೇಡಿದಕೆ
ಶಕ್ತ ನರಸಿಂಹವಿಠ್ಠಲ ಸಾಲಿಗ್ರಾಮವು ೩

## ೧೪೦

ಬಲ್ಲಿದರ ತಿಳಿವಾ ಬಲ್ಲವರ್ಗೆ ವಲಿವಾ
ಬಲ್ಲಿದರ ಆಪತ್ತಿಳಿದು ನಿಲ್ಲದೆ ತಾ ಬರುವಾ ಪ

ಪಾಂಡುಸುತನ ಕಾಯ್ದು ಪುಂಡರ ತಾನ್ಹೊಯ್ದು
ಉಂಡೆನೆಂಬೊ ಗೆಳೆಯಗೆ ಉಂಡು ಉಣ್ಣಿಸಿದಾ ೧

ಗಜವರ ಕರೆದಾ ಅಜಮಿಳ ನೆನೆದಾ
ಭಜಕರ ಕಾಮಧೇನು ನಿಜಕರ ತೋರ್ದಾ ೨

ಸಲ್ಲಲಿತ ಮನವಾ ನಿಲ್ಲದೆ ತಾನೀವಾ
ಬಲ್ಲಿದ ನರಸಿಂಹ ವಿಠಲ ಸಲ್ಲುವರ ಪೊರೆವಾ ೩

## ೧೪೧

ಮಂದಗೆ ಭವ ಬಂಧಗೆ ಇಂದು ಶ್ರೀಹರಿ
ಬಂಧ ಜಾಲಗಳಿಂದ ಮೋಚಿಸಿ ಸಾನಂದಗೈದನು ಪ

ಈದ ಗೋವು ಮರೆಯಾದ ವತ್ಸವನು
ಶೋಧಿಸುವಂದದಿ ಬಂದನು ಮಂದಗೆ ೧

ಯೆವೆಗಳು ಕಂಗಳ ಜವದಿ ಓವಂದದಿ
ಭವದೂರ ಬಾಂಧವ ಬಂದನು ಮಂದಗೆ ೨

ಪೆಣ್ಣುವಕ್ಕಿ ತನ್ನ ಸಂಣ ಮರಿಗಳಿಗೆ
ಉಣ್ಣನೀವಂದದಿ ಬಂದನು ಮಂದಗೆ ೩

ಸಿಂಧುರಾಜನು ಕಂದನಾದ ಇಂದು ನೋಡಿ
ಸಂದಣಿವಂದದಿ ಬಂದನು ಮಂದಗೆ ೪

ಇಂದು ನರಸಿಂಹವಿಠಲ ಬಂಧನ ಬಿಡಿಸಲು
ನಂದನಂದನಾಗೆ ಬಂದನು ಮಂದಗೆ ೫

## ೧೪೨

ಮರೆಯದಿರು ಪದಾಂಬುಜ ಮರೆಯದೋಳು ಪದವಾ ಪ

ಧಾರುಣಿಯನೆ ಅಳೆದೀರಡಿ ಮಾಡಿದ ಘನಪದವಾ
ಮುಕಾರಿಯು ತಳ್ತ ವಾರಿಯ ಪಡದನುಪಮ ಪದವಾ ೧

ಕಾಲಿಡುತಲೆ ಕಲ್ಲನು ಬಾಲೆ ಮಾಡಿದ ಪದವಾ
ಕಾಳುರಗನ ಪೆಡೆಯಲಿ ಲೀಲೆಯಾಡಿದತುಳ ಪದವಾ ೨

ವರಶರಣರ ನಾಲಿಗೆ ನಿರುತದಿ ನುತಿಸುವ ಪದವಾ
ಉರೆ ದುರಿತವದುರಿಪ ನರಸಿಂಹವಿಠ್ಠಲನ ಪದವಾ ೩

## ೧೪೩

ಮಾತು ಶ್ರೀಹರಿ ಮಾತು ಬಳಿಸರೀಗ ಪ

ಮಾತು ಕೇಳಿದರೆ ಪ್ರೀತಿಯಣ್ಮದು
ಸೋತು ನಡೆದರೆ ಕಾತರ ಪೋಪುದು ರೀತಿ ನೀತಿ ಬೆಳಗೆ ೧

ಮದನನದು ತಾಪವು ಕನಸಿನೊಳಿರದು
ಮನದಘ ಮಹಿಮಹಿಮನ ಮನೆ
ಯೆನಿಪುದು ಜನನ ಮರಣವಿಲ್ಲಾ ೨

ನರಸಿಂಹ ವಿಠಲನ ಕರುಣವೆ ಸ್ಥಿರವು
ದುರಿತಗಣಗಳು ಸರಿದೋಡುವವು
ಹರಿಕರುಣವ ಒಲವು ೩

## ೧೪೪

ವನಜನಾಭನ ಅಡಿಯು ಮನುಜಾನೀಪತಿಯು ಪ

ಅನುದಿನದೊಳೈತಂದು
ಘನಸಿಂಧುಶಯನನು ಮಿಂದು ದ್ವಾದಶಿಯೊಳಿಂದು
ಸನುಮತದಿಯರ್ಪಿಸಿದ ಎಡೆಯನು
ಘನತರದ ಸಂಭ್ರಮದಿ ಭುಂಜಿಸಿ
ಜನಿಸಿ ಭಕುತಿಯನೆನ್ನ ಮನದಿ ಪ್ರ-
ಸನ್ನನಾದನು ಎನಿತು ಪೇಳಲಿ ೧

ರಕ್ಕಸರಿಗತಿ ವೈರಿ
ಮಿಕ್ಕಾನತರ ಸಹಕಾರಿ ಶ್ರೀಹರಿ ಮುರಾರಿ
ತಕ್ಕ ವಿಜಯಗೆ ಸಾರಥ್ಯಾಗಿ
ಇಕ್ಕರಿಸಿ ಕುರುಪತೀಯನನ್ವಯ
ಅಕ್ಕರದಿ ದ್ರುಪದಸುತೆಯ ಸಲಹಿ
ರುಕ್ಮಿಣೀಶನು ರಕ್ಷಿಪನು ಸಲೆ ೨

ಕರಿವರದ ಶಿರಿಲೋಲಾ
ಪರಮಾತ್ಮ ಶ್ರೀಘನಲೀಲಾ
ಜರರಹಿತ ವಿಮಲಾ
ನಿರುತದೀಪರಿ ಸ್ಮರಿಪ ನರನಿಗೆ
ಕರುಣಸಾಗರನಾಗಿ ಸುರವರ
ತ್ವರಿತದೀವನು ಹರಸಿ ವರಗಳ
ಹರಗೊಲಿದ ನರಸಿಂಹವಿಠಲಾ ೩

## ೧೪೫

ವ್ಯಗ್ರಬುದ್ಧಿಯು ನಿನಗೆ ಶ್ರೀಹರಿಯೆ
ಸುಗ್ರಾಸನವು ನನಗೆ ಅಗ್ರದೈವರು ನೀನೇ ಗತಿಯೊ

ಉಗ್ರತಪದಲಿ ಭಜಿಸುವಾತ್ಮಗೆ
ಉಗ್ರರೂಪವ ತೋರಿ ವಿಧವಿಧಾ-
ನುಗ್ರಹಿಪೆ ಅಮೃತಾನ್ನ ಭೋಜನ ಪ

ಜನಿಸಲಮೃತ ಘಟವು ಸಿಂಧುವಿನೊಳು
ವನಜನಾಭನೆ ವಂಚಿಸಿ ದನುಜ ಕಣಕದು ಇಲ್ಲದಾಗಿ
ಅನುಮಿಷರಿಗತ್ಯಂತಮಿಕ್ಕೆ
ಘನಹರುಷ ತೋರಿದೆಯು ಸುರರಿಗೆ
ನಿನಗೆ ಮೆಲ್ಲಲು ಇರಿಸಲಿಲ್ಲಾ ೧

ಧೀರ ದೂರ್ವಾಸ ಮುನಿ ಶಿಷ್ಯರ್ವೆರಸಿ
ಹೋರಿದಾಹಾರಕ್ಕಾಗಿ ನೀರಜಾಕ್ಷಿಯು
ಘೋರ ಬಂತೆಂದಾ ರಾತ್ರಿಯಲಿ ನೆನೆಯೆ ನಿನ್ನನು
ಆ ರಭಸದೊಳು ಬಹುನಿಮಿಷದಿ
ಸೂರಿ ಮಾಡ್ದೆಯೋ ಇಷ್ಟು ಭೋಜನಾ ೨

ಸಖ ಸುದಾಮನು ಕಾಣಲು ಶ್ರೀಹರಿಯೆ
ಭಕುತಿ ನೋಡಿ ಮೆಚ್ಚಿದಿ
ಮುಕುತಿದಾಯಕ ಪರಮ ಪುರುಷನೆ
ಭಕುತಿ ಭೋಜನವಿತ್ತೆನಗೆ ಸದಾ
ಪ್ರಕಟ ನರಸಿಂಹವಿಠಲನೆ ಬಲು
ನಿಕಟಮನ ಕೊಡು ನಿನ್ನ ಭಜಿಸುವಾ ೩

## ೧೪೬

ಸುಂದರ ಮೂರುತಿ ನಂದ ಕಂದ ಶ್ರೀ ಕೃಷ್ಣನ ಕಂಡೆ
ಇಂದಿನ ದಿನದೊಳು ಧನ್ಯನಾಗಿ ಅಮೃತಾನ್ನವನುಂಡೆ ಪ

ವಿವಿಧ ವಜ್ರವೈಡೂರ್ಯ ಗೋಮೇಧಿಕ ಖಚಿತ ಸುವರ್ಣ ಕಿರೀಟ
ಸುವಿಲ ಸತ್ತಿಲದಿಂದೊಪ್ಪುವ ಮಣಿಕ್ವತ ಗೊಂಚಲೆಸೆವ ಲಲಾಟ

ರವಿಯ ತೇಜ ಪೋಲ್ವ ಮಕರಕುಂಡಲದ್ವಯಯುಕ್ತ
ಕಪೋಲಗಳ್ಮಾಟ
ಭುವನವನದ ಸುಜನಾರವಿಂದ ಮುದಜನಿವೆಂದು
ಕಿರಣದ ನೋಡಾ ೧

ಮಿನುಗುವ ಮೌಲ್ಯವಿಲ್ಲದ ಮಣಿಗಣಾಯುತ
ಚತುರಸುಂದರ ಭುಜಕೀರ್ತಿ
ವನಧಿಜ ಕಂಬುಕಂಧರದೊಳು ಶೋಭಿಪ
ಶಂಪಾಪರಿಯ ವೈಜಯಂತಿ
ಘನತರ ಪೊಳೆವ ಸುವ್ರತ ಮೌಕ್ತಿಕದೇಕಾವಳಿ ಹಾರಪದಗಳ ಪಂಕ್ತೀ
ಕನಕ ಕಂಕಣಕರದುಂಗುರ ಶೋಭಿತದರ ಚಕ್ರಗದಾ ಪದ್ಮವರ್ತಿ ೨

ವರತಟೀ ದೇಶದಿ ಮಿಸುನಿಯ ಮರಕತ ರಚಿತ
ಮೇಖಲಾಲಂಕಾರಾ
ಶಿರಿಯಂಗಚ್ಛವಿಯಂತೆ ಪೊಳೆವ ಪೀತಾಂಬರ ನಿರಿಯ
ಕಟ್ಟಿನ ಸಿಂಗಾರಾ
ಮಿರುಪ ಸ್ವರ್ಣದ ಕಾಲುಕಡಗ ಪೈಜಣ ಜತಿ
ಪಾದದೊಡಪುಗಳು ಪೂರಾ
ನರಸಿಂಹವಿಠಲನರಸಿ ಬಣ್ಣಿಸುದು ಶಿರಿ ಬಮ್ಮುಸುರರಿಗೆ ಘೋರಾ ೩

## ೧೪೭

ಹರಿ ಎನ್ನ ಕೇಳಿದಾ ಮಾತಾ ಶಿರಿಪತಿಯನಾಥಾ
ಹರಿ ಎನ್ನ ಕೇಳಿದಾ ಮಾತಾ ಪ

ಭೂಮಿಯ ದಾನವಾ ಬೇಡಿದಾ ವಾಮ ಮೂರು ಪಾದಾವಾ
ಕಾಮಿತವಿನಿತೆಂದಾಡಿದಾ ಧಾಮುರಾಜ್ಯ ಬ್ಯಾಡೆಂದಾ ೧

ವಟುಕೂಟದಿಟವೆಂದು ನಂಬಿದೆ ಕುಟಿಲನಡಿಗೆ ಮರುಳಾದೆ
ನಟಿಸುವ ವಾಮನೆಂದಾಡಿದೆ ವಿಠಲರೂಪ ತಿಳಿಯದೆ ೨

ಎರಡು ಪಾದದಿ ಭೂಮಿ ಮುಗಿಸಿದಾ ಇರಿಸಲೆಲ್ಲೆ ಮೂರನೆಂದಾ
ಧರಿಸೀಗ ಶಿರದೊಳು ಎಂದಾ ನರಸಿಂಹವಿಠಲ ದಾಸಾ ೩

## ೧೪೮

ಹರಿ ಕೈಪಿಡಿಯೋ ಕೃಪಾವಿರಿಸೋ ದಾಸನಲಿ ಪ

ಸ್ಮರಿಸುವೆನನುದಿನ ಪರತರ ಪರಶಕ್ತಿ
ಸುರವರನೀನಲ್ಲವಿರುವರೆ ಪೊರೆವರು ೧

ಶಿರಿಧರೆ ಸುರನರ ನೆರೆ ಓಲ್ಯೆಸುತ
ಪರಮಪುರುಷ ನಿನ್ನ ಸ್ಮರಿಪರು ನಿರುತದಿ ೨

ಹನುಮ ಭೀಮ ಮಧ್ವ ಮನಮುಟ್ಟಿ ಭಜಿಸುತ
ಘನನೀಲ ದೇವನೆ ನೆನೆವರ ಮನದಲಿ ೩

ಹರಿ ನಿನ್ನ ಧ್ಯಾನವು ಹರಿವುದು ದುರಿತವ
ನರಸಿಂಹ ದೊರೆ ನಿನ್ನ ಮರೆವೆನೆ ೪

## ೧೪೯

ಹರಿಯೆ ನೀನೇ ಪಾಲಿಸೋ ನಿನ್ನ ಪೆರತುಂಟೆ ಕರುಣಿಪರು ಪ

ಶಿರವರನೆ ತವ ಕರುಣಪಾಂಗವು
ಉರುತರದ ಶುಭಕರವು ಶರಣಗೇ
ಸ್ಮರಿಪ ಮಾತ್ರದಿ ಶರಣ ಪ್ರಲ್ಹಾದ
ನಿರುಪಮದ ಪದ ಭರದಿಯ್ಯೆದಿದ ೧

ಮಾರಮಣ ನಿನ್ನ ಶೇರಿ ನೆನೆವರ
ಘೋರ್ರ ಸಂಕಟ ದೂರಗೈವುದು
ಚೀರುತಿರೆ ಕರಿ ಬಾರೆನುತ
ಹರಿಪಾರ ಮಾಡಿದಿ ನೀರಜಾಕ್ಷನೆ ೨

ಪತಿತ ಪಾವನ ನುತಿಪನ ಘನಂ
ತತಿಯುಡಗಿ ಶತವ್ಯಯನೆ ಎನಿಸುವಾ
ಗತಿಕೊಡಲು ನರಸಿಂಹವಿಠ್ಠಲ
ಸ್ತುತಿಸಿದಜಮಿಳ ಗತಿಮುದಪ್ರದ ೩

## ೧೫೦

ಹೆಂಗಳೆಯರು ನಾವು ರಂಗೈಯ್ಯ ಮಾನಂಗಳ ಕಾಯಬೇಕೋ
ರಂಗಭವಪಿತ ಸಂಗ ನಿನ್ನಯ ಹಿಂಗಿ ಬಂದೆವು ಭಂಗ ಬಡುವೆವು
ಮಂಗಚೇತನದಂಬಿಗನು ವಾಸಂಗಳನು ನೆರೆ ಸೆಳೆದಿಹಾನು ಪ

ಗೋಪಿವೃಂದವು ಕೂಡಿ ಚಿತ್ತದ ಸಂತಾಪ ನೀಗಲು ಮಾಡಿ
ಪಾಪಮೋಚಕ ಯಮುನೆಯೊಳಾದಕೋಪರಿಮಿತ
ತೋಷಗೊಳಿಸಲು
ವ್ಯಾಪಿಸಿದೆವಾ ಉಡುಪವನು ಕಡುತಾಪ ಕೊಡುವನು
ಪಾಪಿಯಂಬಿಗ ೧

ಬಯಕೆಯಾ ಹಾರವನು ನಾವೆಲ್ಲರು ವಯನಾಗಿ ಕಟ್ಟಿದ್ದೆವೋ
ಭಯನಿವಾರಣನುಳಿದು ಮೆಲ್ಲಲು ನಿಯಮ
ಮಾಡ್ದೆವು ಮತಿಯು ಪೋದುದು
ನಯನದಿಂದವುಗಳನೆ ನೋಡದೆ ಬಯಲುಮಾಡಿದೆವಿತ್ತೀಕಂಗೆ ೨

ಎಷ್ಟು ಬಳಲುತಿಹೆವೊ ಶ್ರೀಕೃಷ್ಣ ನಿನ್ನಿಷ್ಟಕ್ಕೆ ಬಂದುದೇನೋ
ಇಷ್ಟು ಪರಿಯಲ್ಪರಿವುದೇತಕೆ ಇಷ್ಟ ಮೂರುತಿ ಕೃಷ್ಣನೀಗಲೆ
ದುಷ್ಟ ಅಂಬಿಗನಂಗ ತೊಲಗಿ ಶಿಷ್ಟ ನರಸಿಂಹ ವಿಠ್ಠಲಾದ ೩

## ೧೫೧

## (ಇ) ದಶಾವತಾರ

ಅಂಜಿ ಬಿಡಲಿ ಬ್ಯಾಡೋ ಮುಂದಕೆ ಮುಂದೆ
ಅಂಜಿ ಕೂಡಲಿ ಬೇಕೋ ಹಿಂದಕೆ ಪ

ಅನಿಮಿಷಾಗತ ರೂಪ ನೋಡಿದ್ಯಾ ಮತ್ತೆ
ಘನ ಕಮಲೇಶನೆಂದಾಡಿದ್ಯಾ ಒಳ್ಳೆ
ವನಚದರೆಪಿ [?] ಯೆಂದೋಡಿದ್ಯಾ ಮತ್ತೆ
ಮನುಜ ಮೃಗನ ಕಂಡಂಜಿದ್ಯಾ ನರ–
ಸನುಮತದೀಕ್ಷಿಸು ಮತ್ಸ್ಯಕಚ್ಛಪ ರೂಪಾ
ಧನುಜ ಸಂಹಾರಕಾಗಿ ವರನರಸಿಂಹರೂಪ ೧

ವಟುರೂಪದಿ ದಿಟವೆಂದಾಡಿದ್ಯಾ ಮತ್ತೆ
ಕಠಿಣಪರಷು ಕಂಡೋಡಿದ್ಯಾ ನರ–
ವಟುರಾವಣಾದಿ ಕಂಡಂಜಿದ್ಯಾ ಮತ್ತೆ
ಭಟ ಮುಷ್ಠಿಹರನಂದಾಡಿದ್ಯಾ ನರ–
ಧಟ ಹರವಾಮನ ಪರಶುರಾಮರೂಪ
ಸಟೆಯಿಲ್ಲ ತಿಳಿ ಶ್ರೀ ರಾಮಕೃಷ್ಣರೂಪ ೨

ನನ್ನ ರೂಪವ ಕಂಡಂಜಿದ್ಯಾ ಮತ್ತೆ
ಸುಜ್ಞ ಹಯವದನನೆಂದಾಡಿದ್ಯಾ ಕರಿ
ವಿಘ್ನನಾಶಕ ಬೌದ್ಧಕಲಿಕೆಯು ಧ್ಯಾನ
ಮಗ್ನನಾಗೆವರನ್ನು ಕಂಡಿದ್ಯಾ ನರ
ಪ್ರಜ್ಞವಿರಲಿ ಪತ್ತುಪಾವನ ರೂಪನ
ಸುಜ್ಞ ನರಸಿಂಹವಿಠ್ಠಲನಾಣೆ ಸಾರುವೆ ೩

## ೧೫೨

ಉರಗಪತಿಯ ಮೆಟ್ಟಾನೆ ರಂಗೈಯ್ಯ ಕರದಿ ವಾರಿಧಿ ನಿಚ್ಚನೆ ಪ

ನೀರೊಳು ಪೊಕ್ಕಹನೇ ರಂಗೈಯ್ಯ ಭಾರವ ಪೊತ್ತಿಹನೇ
ಪೋರಾಟೆಗೆ ಇದು ದಾರ ಕಲಿಸಿದರೆನೆ
ನೀರಜಭವರು ನಿರ್ಜರರು ನಗುತಿಹರು ೧

ಕಂದ ಮೂಲವ ಗೆಲುವಾ ರಂಗೈಯ್ಯ
ಬಂದ ಕಂಭವ ನೋಡಿದಾ
ಕಂದ ಇಂಥ ಬುದ್ಧಿ ಎಂದು ಕಲಿತಿಯೇನೇ
ನಿಂದು ಮೇದಿನಿ ಪ್ರಲ್ಹಾದ ನಗುತಿಹರು ೨

ತಿರುಕನಂತೆ ಬೇಡುವಾ ರಂಗೈಯ್ಯ
ಕರದಿ ಕೊಡಲಿವಿಡಿವಾ
ಹರಕುತನವು ತಂದೆ ಯಾಕೋ ನಿನಗೆ ಎನೆ
ಸುರಗಂಗೆ ವರ ಜಮದಗ್ನಿ ನಗುತಿಹರು ೩

ಜಟವ ಬೆಳೆಸಿ ಕಟ್ಟಿಹಾ ರಂಗಯ್ಯ
ಹಟದಿ ಮಾತುಳನಳ್ದಿಹಾ
ಹಟಮಾರಿತನ ನಿನಗ್ಯಾರು ಕಲಿಸಿದರೆನೆ
ದಿಟ ಪವಮಾನಾರ್ಜುನರು ನಗುತಿಹರು ೪

ಅರಿವೆ ತಾನುಡಲು ವಲ್ಲ ರಂಗೈಯ್ಯ
ತುರಗವೇರಲು ಬಲ್ಲಾ
ನರಸಿಂಹವಿಠ್ಠಲ ಸರಿಯಲ್ಲವಿದು ಎನೆ
ಹರಬೊಮ್ಮ ಸುರರು ಗಹಗಹಿಸಿ ನಗುತಿಹರು ೫

## ೧೫೩

ಏನು ಪೇಳಲಮ್ಮಯ್ಯಾ ರಂಗನ ಕ್ರೀಡಾ
ಏನು ದಂಡಿಸಲಮ್ಮಯ್ಯಾ ಶ್ರೀ ಕೃಷ್ಣನ್ನ ಪ

ಜಲದೊಳಗೋಡಿ ಪೋದಾ ಬೆನ್ನಲಿ ದೊಡ್ಡ ಚಲವನ್ನೆ
ಪಿಡಿದು ನಿಂದಾ
ಒಲಿದು ಕೋರೆಯ ತೋರಿದಾ ದುರುಳ
ದೈತ್ಯನ್ನೆಳದೊಡಲವ ಸೀಳಿದಾ
ಬಲಿಯಲ್ದ್ಲೈನ್ಯದಿ ದಾನಬೇಡಿ ತಾಯ ಶಿರವ ಕಡಿದು ತೋರಿದಾ
ಕಲೆವೆಣ್ಣೈದ್ಮೊಲೆಯುಂಡು ಕಳದ್ವಟ್ಟೆ ಹಯವೇರಿದಾ ೧

ಕಾನನದಾ ವರಹನಾದಾ ಆಗಲು ಪಂಚಾನನ ರೂಪನಾದಾ
ದಾನಬೇಡಲು ವಾಮನನಾಗಿ ಸೂನು ಪರಶುರಾಮನಾಗಿ
ಜಾನಕಿವರನಾಗಿ ರಾವಣನಾಗಿ ಮಾನಬಿಟ್ಟು ವಾಜಿಯನೇರ್ದಾ ೨

ಹೊರಗೆ ನಿಗಮ ತೋರ್ದಾ ಬೆನ್ನಲಿ ಬೆಟ್ಟವಿರಿಸಿ ಸುರರಾ ಪೊರೆದಾ
ಧರಾಲಲನೆಯನೆತ್ತಿ ತಂದಾ ದೈತ್ಯನ ಶೀಳಿ ತರಳನಳಲನು ಕಳೆದಾ
ಸುರತಟಿನಿಯಂಗುಟದಿ ಜನಿಸೆ ಧರೆಯ ಪಾವನಗೊಳಿಸೆ
ನರಲೋಕವುದ್ಧಾರ ಜನಕ ಸಿರಿಪಾವನ ನರಸಿಂಹವಿಠಲನ ೩

## ೧೫೪

ಕದವ ತೆಗೆಯಲ್ಯಾಂಗ ಮಧ್ಯರಾತ್ರಿಯಲಿ
ಚದುರ ನಿನ್ನ ಗುರ್ತು ಪೇಳು ಮೊದಲಿನಲಿ ಪ

ನೀರ ಪೊಕ್ಕು ವೇದವನ್ನು.ತಂದಿಹೇನೇ
ಭಾರವನ್ನು ಬೆನ್ನಿನಲ್ಲಿ ಪೊತ್ತಿಹೇನೇ
ಕೋರೆಯ ಮ್ಯಾಲಿಳೆಯನ್ನಿಟ್ಟಿಹೇನೇ
ಕೋರೆದಾಡಿಯಿಂದ ದನುಜನಳ್ದಿಹೇನೇ ೧

ದಾನಬೇಡಿ ಬಲಿಯನ್ನೊತ್ತಿಹೇನೇ
ಮಾನ್ಯವೆಂದು ತಾಯಶಿರ ಛೇದಿಸಿಹೇನೇ
ದಾನವನ ಪತ್ತುತಲೆಯರದಿಹೇನೇ
ದಾನಮಾಡಿ ದೇಹವನ್ನು ಮೆರದಿಹೇನೇ ೨

ಬತ್ತಲ್ಯಾಗೆ ಬೌದ್ಧನೆನಿಸುವೇನೇ
ಕುದುರೆಯಾಗಿ ಧಕ ಧಕ ಕುಣಿಸುವೇನೇ
ಅಧರಪಾನವನ್ನು ನಾ ಬಯಸಿಹೇನೇ
ಚದುರ ನರಸಿಂಹವಿಠಲನೆನಿಸುವೇನೇ ೩

## ೧೫೫

ಕರಿರಾಜ ವರದ ಗುರುರಾಜ ವರದ ಸುರಾಜ
ನಿನ್ನ ನಾಮ ಕೇಳು ಪೇಳುವೆ ಗುಣಮಿತಿ ಮೀರಿ ದನುಜರ ವೈರಿ
ಗುಣಿಜನಕಾಧಾರಿ ನಿನ್ನ ನಾಮ ಕೇಳು ಪೇಳುವೆ ಪ

ಶಣಸೀದ ಸೋಮ ಕನ್ನರಿದಿ ಮೀನನಾಗಿ ವೇದವಾ ತಂದಿ
ಗುಣತಪ್ಪಿದ ಚಲವನು ಬಿಡದೆ ಮುಣಿಗ್ಯೊಳಗೆ ಕೂರ್ಮನಾಪಿಡಿದಿ
ನೊಣಶಣತಾಕ್ಷನ ಬಿಡದಳಿದಿ ಗುಣಿವರಹನಾ ಗಿಳಿಯ ತಂದಿ
ಒಣ ಹೆಮ್ಮೆಲೆ ಮೆರೆವ ಹಿರಣ್ಯಕನನೆ ಶೀಳಿ ಅಣು
ಪ್ರಲ್ಹಾದನ ಪೊರೀದಿ ೧

ವಟುರೂಪಿಲಿ ಬಲಯನು ತುಳಿದಿ ನಟಿಸುವ ವಾಮನನಾದಿ
ಕಟಹಾರದಿ ಕ್ಷತ್ರಿಯರಳಿದಿ ಹಟದಿಂದ ಪರಶುರಾಮಾದಿ
ಭಟ ರಾವಣನಸುವಾನಳಿದಿ ದಿಟರಾಮನೆಂದು ಪೆಸರಾದಿ
ಜಟಿಯ ಪಿಡಿದು ಭೂತಹಟಕೆ ಘಟ್ಟಿಸಿ ಕೃಷ್ಣನೆನಿಸಿದಿ ೨

ಯುವತೀಯರ ವ್ರತವನ್ನಳಿದಿ ಭುವನದಿ ಬೌದ್ಧನಾಗಿ ನಿಂದಿ
ದಿವ್ಯ ಹಯವನೇರಿ ನೀ ಬಂದಿ ಭುವಿ ದುಷ್ಟರಾಂತಕ ಕಲ್ಕ್ಯನೀಡಿ
ತವ ಶರಣರ ಪೊರೆಯುವ ನೆವದಿ ವಿಧವಿಧ ರೂಪ ನೀ ತಾಳ್ದಿ
ತವ ಶರಣ ನಾನು ಶ್ರೀ ನರಸಿಂಹವಿಠ್ಠಲ
ಭವದಿಂದೆನ್ನನು ಉದ್ಧರಿಸೊ ೩

## ೧೫೬

ಕೋಳಿ ಕೂಗಿತು ತಂಪು ಗಾಳಿ ಬೀಸಿತು
ಏಳಯ್ಯಾ ಬೆಳಗಾಯಿತು ಪ

ಧೀರ ಸೋಮಕನಿರಿದು ಮೇರು ಬೆನ್ನಲಿ ಪೊತ್ತು
ಘೋರ ಹಿರಣ್ಯಾಕ್ಷ ಕಶ್ಯಪರ ಶೀಳಿ ಮಾರಿ ಬಲಿಯನ್ನೊತ್ತಿ
ಕಾರ್ತವೀರ್ಯನ ಪೊಡೆದು ಹೋರಿ ರಾವಣ
ಕಂಸ ದಾನವರನಳಿದು
ಶೇರಿ ತ್ರಿಪುರರ ದಹಿಸಿ ಕ್ರೂರ ದುಷ್ಟರ ತರಿದು
ಭಾರಿ ಆಯಾಸದಲಿ ನಿದ್ರೆ ಹತ್ತಿರೆ ಸ್ವಾಮಿ ೧

ವೇದವನು ತಂದೆ ಸುರವೃಂದಕಮೃತವನಿತ್ತೆ
ಮೇದಿನಿಯ ನೆಲಸಿ ಪ್ರಲ್ಹಾದನಾ ಪೊರೆದೆ
ಮೋದಿಗಂಗೆಯ ಜನಿಸಿ ಭೂದಾನ ಮಾಡಿದೆ
ಮೋದದಿಂದಜಪದವಿಯ ಆಂಜನೇಯಗಿತ್ತೆ
ಪೋದ ಮಕ್ಕಳ ತಂದು ಗುರುಪತ್ನಿಗೇ ನೀಡಿ
ವೇದನುತ ನಿರ್ವಸನ ಸುಹಯಾರೂಢನೇ ೨

ಶರಣಜನ ಬಂದು ಸುಸ್ವರದಿಂದ ಪಾಡುತಿರೆ
ತರವೆ ಶ್ರೀಹರಿಯೆ ಈ ಪರಿ ಕಣ್ಣಮುಚ್ಚುವುದೇ
ಸರಿಯೆ ಬೆನ್ಮರೆಮಾಡಿ ಮಣ್ಣನಾಡಾಡುವುದೇ
ಉರಿಮೋರೆಯಿಂದ ತರಳಾಟ ಆಡುವುದೇ
ಪರಶು ಶರ ಚಕ್ರಗಳ ಪಿಡಿದು ಉಡಿಗೆಯ ಮರೆತೆ
ಭರದಿ ತುರಗವನೇರು ನರಸಿಂಹ ವಿಠ್ಠಲಾ ೩

## ೧೫೭

ಘನತರ ದೂರದೊಳು ಸಮಮತದೊಳು
ವನಜನಾಭನತಿ ಮನಸಿಜಾನ್ವಿತನಾದ
ವನಿತೆ ನೀ ದಾರೆಂದಾ ನಿನ್ನೊಳು
ಮನಸೋತೆ ಕೇಳೆಂದಾ ಪ

ಮತ್ಸ್ಯಗಂಗಳಲಿ ಸ್ವಚ್ಛ ಜಲವು ಯಾಕೆ
ಮತ್ಸ್ಯಾವತಾರದ ಉತ್ಸವ ತೋರುವಿ ವನಿತೆ ನೀ ಬಾರೆಂದಾ ೧

ಕೂರ್ಮ ಕಠೋರದ ಹೆರಳು ಭಂಗಾರವು
ಕೂರ್ಮಾವತಾರದ ಮರ್ಮವ ತೋರುವಿ ೨

ಸರಸ ಮೌಕ್ತಿಕದ ಮುರವು ನಾಸದೊಳು
ವರಹವತಾರದ ಕುರುಹು ತೋರುವಿ ೩

ಹರಿಯ ಹಿಡಿಯ ತಂತಿ ಭರದಿ ಬಳುಕುತೆ
ನರಸಿಂಹರೂಪದೆ ಸ್ಮರಣೆ ತೋರುವಿ ೪

ವಾಮನ ಬಾಲೆ ನೀ ಸಾಮಜೆ ಗಮನೆ
ವಾಮನ ರೂಪದ ಸೀಮಾ ತೋರುವಿ ೫

ತಾಮಸಗಿಡಗಳ ಕಾಮಿಸಿ ತಪಿಸುವಿ
ರಾಮನ ಕಾಲದ ನೇಮವ ತೋರುವಿ ೬

ಸ್ಮರಶರದಂದದಿ ಕರದಿ ಕೇತಕಿ ಪುಷ್ಪ
ಪರಶುರಾಮನ ಅರುಹ ತೋರುವಿ ೭

ಎದೆಯೊಳಚಲಸ್ತನ ಮುದದಿ ಧರಿಸಿರುವೆ
ಮಾಧವ ತಾರದ ಸದವು ತೋರುವಿ ೮

ಅಂಗಜ ಬಾಣದಿಂದಂಗದ ಪರವಿಲ್ಲ
ಮಂಗಲ ಬೌದ್ಧನ ರಂಗವ ತೋರುವಿ ೯

ಮನಸಿಜಾಶ್ವವೇರಿ ವನಿತೆ ಕಂಗೊಳಿಸುವಿ
ಘನಕಲ್ಕಿಯ ಪರಿ ವನಪು ತೋರುವಿ ೧೦

ಕುರುಹು ಅರಿದೆ ನಿನ್ನ ಬೆರದು ಸುಖಿಪರನ್ನೆ
ನರಸಿಂಹವಿಠಲನರಸಿ ಬಂದಿರುವೇ ೧೧

## ೧೫೮

ಘೋರವಾರಾ ದುಃಖ ಪಾರಾವಾರಾವಿಲ್ಲ ಸಾಧುತಾ ಸಂಸಾರ ಪ

ನೀರ ಪೊಕ್ಕು ಬಾರಾ ಬೆನ್ನಿನಲಿ ಧರಾ
ಧಾರಿ ನರಹರಿ ಎನಿಸೆ ಅಸಾರ ಸಂಸಾರ
ಧಿಕ್ಕಾರವೆಂಬೇನೇ ಸುರಾರಿ ವೃಂದದ ಸಂಹಾರ ಕಾರಣ ೧

ದಾನಾ ಬೇಡಿ ಮಾತಾ ಹಾನಿ ಮಾಡಿ ಸೀತಾ
ಮಾನಿ ಮಾನಿನಿಯುಳಿಸೆ
ಭೂನಾಥ ಶ್ರೀಯುತ ಭವದಾತನೆಂಬೆನೆ
ದಾನವರಾಂತಕ ದೀನರಪಾಲಕ ೨

ಅರಿವೆಗಳಲ್ಲಾ ಹರಿಯೇರಬಲ್ಲ
ನರಸಿಂಹವಿಠಲೆನಿಸಿ
ಅರಿವಲ್ಲ ಭವಗುಲ್ಲ ತಾಳಲ್ಲಿ ಎಂದೇನೆ
ಅರಿಭವಮಾರಕ
ಸುರಲೋಕದರ್ಶಕ ಸಾಧುತಾ ಸಂಸಾರ ೩

## ೧೫೯

ನಾರಸಿಂಹನೆ ಘೋರರೂಪನೆ ತೋರು ಮೊಗವನು ಕರುಣದಿ
ಚಾರುಗಾತ್ರನೆ ಭೀರು ತ್ರಾತನೆ ಸೇರಿಹೆನು ತವ ಚರಣದಿ ಪ

ಘೋರತರ ಸಂಸಾರ ಶರಧಿಯ ತೀರ ಗಾಣೆನು ಧೀರನೆ
ಪಾರಗಾಣಿಪೊದ್ಧಾರ ಕಾಣೆನುಯಾ ಭವರುಜಹಾರನೆ ೧

ದಾನವನ ತಪಜ್ವಾಲೆಯಿಂದಲಿ ಮಾನುಷರು ಕಳವಳನೆಯಾ
ಸೂನುತಾರಣ ನೆವದಿ ದಿವಿಜರ ಮಾನವನು ನೆರೆ ಕಾಯ್ದೆಯಾ ೨

ದುಷ್ಟಸಂಹರ ಶಿಷ್ಟಪಾಲಕನೆಂಬ ಬಿರುದೆತ್ತಿಹುದಲಾ
ಸೃಷ್ಟಿಗೀಶನೆ ಕಷ್ಟ ತೊಲಗಿಸೋ ಶಿಷ್ಟ ನರಸಿಂಹವಿಠ್ಠಲಾ ೩

## ೧೬೦

ಪರಿಹರಿಸು ದಯಾನಿಧಿ ಶರಣರ ಸಂಕಟವಾ
ಧರೆಯ ತಳದಿ ನಾ ಪರಮಧೀನನು ಮರೆಯದಿಯೋ ಪದವಾ ಪ

ಜಲದೊಳಗೆ ಪೊಕ್ಕರೂ ನಿನ್ನ ಬಿಡುವನಲ್ಲಾ
ಬಲುಬೆಟ್ಟದ ಬುಡದೊಳು ಕುಳಿತರು ಪಿಡಿವೆನಲ್ಲಾ
ನೆಲವಿಡಿದು ಕೋರೆಯಲಿ ತೋರ್ದರು ಅರಿವೆನಲ್ಲಾ
ಗಲವರೆಗೆ ಸಿಂಹಮೊಗ ಧರಿಸಿದರೂ ಸರಿ ಬೆಚ್ಚಿ ಬೆವರೋನಲ್ಲಾ ೧

ಸರಿ ತಿರಕನಂತೆ ನೀ ತಿಳಿದರೂ ಬಿಡುವನಲ್ಲಾ
ಕರತಳದಿ ಕೊಡಲಿಯ ಪಿಡಿದರೂ ಸರಿವನಲ್ಲಾ
ನೆರೆ ಧರಿಸಿ ಜಟವನ ಪೊಕ್ಕರೂ ಬಿಡುವನಲ್ಲಾ
ಕರದಿ ಚಕ್ರವ ಪಿಡಿದು ತೋರಲೆಂದೆಂದಿಗುಜ್ವಲನಲ್ಲಾ ೨

ವಸನಗಳಿಲ್ಲದೆ ನುಸುಳನರಿದೆನಲ್ಲಾ
ಎಸೆವ ಸಮತುರಗವೇರಿ ಪೋಗಲು ಬಿಡುವನಲ್ಲಾ
ದಶರೂಪಿ ನಿನ್ನನು ಬಿಡುವ ಶರಣನಲ್ಲಾ
ಕುಸುಮನಾಭ ಶಿರಿ ನರಸಿಂಹವಿಠ್ಠಲ ಆಲಿಸೆನ್ನ ಸೊಲ್ಲಾ ೩

## ೧೬೧

ಬಂದಿಹೆ ನಂತರಂಗದಿ ನಡಿರಕ್ಷಿಸೊ ನಡಿ ರಕ್ಷಿಸೊ ಪ

ಮತ್ಸ್ಯಕಂಗಳಲಿಟ್ಟು ಕಚ್ಚಪ ಚಿನ್ನಲಿ ಉಚ್ಚಸೂಕರನಿಂದಾಶ್ರಿತವಾಗಿಹೆ ೧

ಶಿರದೊಳು ನರಹರಿ ಧರಿಸಿ ವಾಮನ ಮುಖದಿ
ಕರದಿ ಪರಶುರಾಮನ್ನಿರಿಸಿಹೇನೋ ಸ್ವಾಮಿ ೨

ಹೃದಿ ರಾಮಕೃಷ್ಣರು ಬದಿಗೆ ಬುದ್ಧ ಕಲ್ಕಿ
ಸದಾ ನರಸಿಂಹವಿಠ್ಠಲ ಧ್ಯಾನದೋಳಿಹೆ ೩

## ೧೬೨

ಶ್ರೀನುತ ಕರವರ ಗೀತಾವಾದಿ ಪರಮ ದಯಾಳು ಗುರೋ ಪ

ಜಲಚರರೂಪದಿ ವೇದವ ತಂದಿರೆ ಮತ್ಸ್ಯನೆನಿಸಿದೆಯೋ
ಬಲವಂತನೆನಿಸಿಯದ್ರಿಯ ನೆತ್ತಿದಿ ಬಲುಘನ ಕಚ್ಛಪಾದಿ
ನೆಲಸಿದ ಭೂಗೋಲವನಾಸದಿ ಭಲೆ ವರಾಹವತಾರಿ
ಸಲಹಲು ಪೋರನ ನರಸಿಂಹನೆನಿಸಿ ವಲೆಯುವೆ
ಸ್ಮರಿಸಲು ತಕ್ಷಣದಿ ೧

ವಟುವಾಗಿ ಬಲಿಯನ್ನಿಳಿಗೊತ್ತೀದಿ ದಟಹರ ವಾಮನನಹುದೋ
ಹಟದಿ ಮಾತೆಯ ಶಿರವಾರಿಸಿದಿ ಭಟ ಪರಶುರಾಮ ನೀನು
ಕುಟಿಲ ದುಶ್ಯಾಸನ ಧ್ವಂಸಗೈದಿ ಪಟು ರಾಮನೆನಿಸಿದೆಯೋ
ಶಠರ ಸಂಹರಿಲು ಶ್ರೀ ಕೃಷ್ಣನೆನಿಸಿದಿ ನಿಟ್ಟಿಮದೀಗೆನ್ನ ಕೃಪಾನಿಧಿ ೨

ತರುಣಿ ವೃಂದದ ವ್ರತವನ್ನಳಿದಿ ಪರಮ ಬೌದ್ಧನಹುದೋ
ಕರದ ಖಡ್ಗದಿ ದನುಜರನಳಿಸಿ ವರ ಕಲ್ಕಿರೂಪ ನೀನು
ಪರಬ್ರಹ್ಮ ಪುಟ್ಟುವಿ ಜವದಿ ಪೊರೆಯುವಿ ನುತಿಪರನಾ
ನರಸಿಂಹವಿಠಲ ನಮಿಸುವೆ ನೇಮದಿ ವರಗಳ ನೀಯೋ
ಕಾರುಣ್ಯನಿಧಿ ೩

## ೧೬೩

ಶ್ರೀರಾಮನಾ ಅಡಿವಿಡಿವೆನು ನಾ ಶ್ರೀರಾಮನಾ ಪ

ನುಡಿಯಂತೆ ಮಾತೆಯಾ ಮಡದಿಯಿಂದೊಡಗೂಡಿ
ಬಿಡದೆ ನಡೆದನವನಡವಿ ವಾಸಕೆ ೧

ಕನಕಮೃಗವ ತೋರಿ ಸೊಣಕ ರಾವಣ ತಾನು
ಜನಕ ಸುತೆಯ ನಿಜ ವನಕೆ ಕೊಂಡು ಪೋದಾ ೨

ಕಾಣಾದೆ ಸತೀಯಳೇ ಮಾಣಾದೆ ಪುಡುರೆದಾ (?)
ದಾನವನೆಡೆ ಪೇಳ್ದ ಮಾನಿಜಟಾಯು ೩

ಲಂಕಾ ಪತ್ತನಕೆ ತಾ ಹುಂಕಾರಿಯುರಿ ಇರ್ಕೆ
ಬಿಂಕದಿ ತಾ ರಾಮನಂಘ್ರಿಗೆರಗಿದಾ ೪

ಹರಿಗಳೆಲ್ಲರು ಕೂಡಿ ಶರಧಿ ಹಾದಿಯ ಮಾಡಿ
ವರರಾಮನೊಡಗೂಡಿ ಲಂಕೆಗೆ ನಡೆದರು ೫

ಜಗದೀಶ ರಾಮಾನೆಂದು ಮುಗುದಾ ಹನುಮ ಕರಾ
ಜಗಜ್ಜನನಿಗೆ ಇತ್ತ ಸೊಗಲು ಪುಂಗುರಾ ೬

ದಶಶಿರಾನನ್ವಯ ಉಸುಕಿಲ್ಲದಳೀದು
ಶರಥಸುತನಿಗೆ ವಸುಧೆಯೊಳ್ಸಮರಾರು ೭

ಅನಲಾಮುಖದಿ ತಾನು ವನಿತೇಯ ಕೂಡಿದಾ
ಘನಮಹಿಮನ ಲೀಲೆ ಮನುಜರರಿವರೇ ೮

ಮನಮುಟ್ಟಿ ಭಜಿಸೀದ ಮನುಜಗೊಲಿದ ನಿಜ
ಘನಮಹಿಮನು ಶ್ರೀ ನರಸಿಂಹವಿಠ್ಠಲಾ ೯

## ೧೬೪

ಹುಡದಿಯಾಡುವದೇನು ಮಡದಿಯೋರ್ವಳು ನಾನು
ಜಡಜನಯನತಿಗತಿಗೆ ತೋರುವ ಕಡು
ಮಮತೆಯದು ಸರಿಯಲ್ಲಾ ಪ

ನಾರೊಮ್ಮೈಯವನಾಗಿ ಭಾರಪೊತ್ತವನಾಗಿ
ಭಾರಿ ಸೂಕರನಾಗಿ ಬೆದರಿಪ ಕ್ರೂರಡವಿ ಮೃಗರಾಜನಾಗಿ ೧

ಪೋರಪಟು ತಾನಾಗಿ ಶೀರ್ಪರ ಶುದ್ರತನಾಗಿ
ಆರ್ಭಟಿಪ ಕೋದಂಡ ಕರನಾಗಿ ಧೃತ ಚಕ್ರನಾಗಿ ೨

ತೀರ ಬತ್ತಲೆಯಾಗಿ ಆರೂಢಹಯ ತಾನಾಗಿ
ಸಾರ ಮತ್ತು ಪಾಯ [?] ಕಾಣೆ ಧೀರನರಸಿಂಹವಿಠಲನಾಗಿ ೩

## (ಈ) ಮಹಾಲಕ್ಷ್ಮಿ

### ೧೬೫

ಇಂದೀವರನಯನ ಕೃಷ್ಣಾನಂದಕಾರಿಣಿ ಪ

ಎಂದೆಂದಿಗು ಹೊಂದಿ ನೀನಾನಂದ ಕೊಡುವ ಕಾರಣದಿಂದ ಅ.ಪ.

ಸಿಂಧುಮಥನ ಕಾಲ ಜನಿಸಿ ಸಿಂಧುರಾಜಗೆ ಪುತ್ರಿ ಎನಿಸಿ
ಚಂದಿರನಗ್ರಜೆ ಎನಿಸಿ ಸಿಂಧುಶಾಯಿ ಮಂದಿರಳೆನಿಸಿ ೧

ಕಮಲವದನೆ ಕಮಲಾಕ್ಷಿಯೆ ಕಮಲಪಾಣಿ ಕಮಲ ಚರಣೆ
ಕಮಲಗಂಧೆ ಕಮಲವಾಸನೆ ಕಮಲಾಕ್ಷಣೆ ಕಮಲಾಂಗಿಯೆ ೨

ನರಸಿಂಹವಿಠಲನ ಹೊಂದಿದೆ ಪರಮಭಕ್ತರಘ ಕಳೆದು
ಹರಿಯ ನಾಮ ಜಿಹ್ವೆಗಿತ್ತು ನಿರುತದಿ ಯುದ್ಧ... ದೇವಿ ೩

### ೧೬೬

ನಮಿಪೆ ಶ್ರೀ ಲಕುಮಿ ಸತಿ ಪ

ಪೊಳೆವುದು ಫಣೆಯಲಿ ರಂಜಿಪ ಕುಂಕುಮ
ಗಿಳಿಯ ವರ್ಣದ ಪಚ್ಚ ಪದಕ ಕಂಡೆ ೧

ಮಣಿಯುತ ಕಾಂಚನ ಮೇಖಲ ಕಟಿಯೆ
ನುಣ್ಣಮುತ್ತಿನ ನತ್ತೆಸೆವ ನಾಸಿಕೆಯಳೆ ೨

ಸರಸಿಜಮುಖಿಯಳೆ ಸ್ಮರಿಸುವೆನೀಗಳೆ
ನರಸಿಂಹ ವಿಠಲನರಸಿ ಪ್ರಸನ್ನಮುಖಿ ೩

## ೧೬೭

ಬಂದ್ಯಾ ಬಾ ಮಂದಗಾಮಿನಿ ಚಂದಿರವದನೆ
ಸುಂದರವದನೆ ಬಂದ್ಯಾ ಪ

ಬಂದ ಭಕ್ತವೃಂದಭೀಷ್ಟ ನೀಡ್ವೆನೆಂದು
ಚಂದ ಕರಗಳಿಂದ ಶೋಭಿಸುತಾ ಬಂದ್ಯಾ ೧

ಪದುಮನಿಲಯ ಪದುಮಾನನೆ
ಪದುಮಾಯತಾಕ್ಷಿ ಪದುಮನಾಭನ ರಾಣಿ ೨

ನರಸಿಂಹವಿಠ್ಠಲನರಸಿ ಪ್ರಸನ್ನಮುಖಿ
ಇರಿಸು ಶರಣರಲ್ಲಿ ಕರುಣಾಕಟಾಕ್ಷ ೩

## ೧೬೮

ವನಜಜಾಂಡಾಧಿಪನ ವನಿತೆಯು ಜನಕಸುತೆ
ಭೂಮಿಜೆಯು ಸೀತೆಯು
ಜನನಿ ಗರ್ಭವ ವಡೆದು ಬಂದಳು ದನುಜ ವಧಕೆಂದೇ ಪ

ವಸುಧಿ ಮೇಲತಿ ದುರುಳ ದನುಜರು
ಪೆಸರು ರಾವಣ ಕುಂಭಕರ್ಣರು
ಋಷಿ ಜನಂಗಳ ಮುಖವ ಕೆಡಿಸುತ ಮೆರೆಯುತಿರೆ ಕೇಳ್ದು ೧

ಭವದ ಭಟ ಶ್ರೀರಾಮಚಂದ್ರನು
ಮೂವರನು ಜರ ಕೂಡಿ ಜನಿಸಿದಾ
ಭುವನ ಭಾರವ ಪರಿಹರಿಪೆನೆಂದಭಯ ತೋರುತಲೀ ೨

ಸಿರಿಲಕುಮಿ ನಿಜವರನು ಜನಿಸಿದ–
ನರಿತು ಪರಮಾನಂದದಲಿ ತಾ
ಭರದಿ ಮೈದೋರಿದಳು ಹರಿಗೆ ತಾನರಸಿ ಎನಿಸಿದಳು ೩

ವಾನರರ ಸೇನಾಧಿಪನು ಪವ-
ಮಾನ ಸೂನು ಶ್ರೀ ಹನುಮನೆಂಬುವನು
ದಾನವಾರಿ ಶ್ರೀ ರಾಮಚಂದ್ರಗೆ ಭೃತ್ಯನೆನಿಸಿದನು ೪

ವಿಪಿನ ಚರವ್ಯಾಜದಲಿ ರಕ್ಕಸ-
ರಪರಿಮಿತ ಕೆಡಹಿದನು ಧರಣಿಗೆ
ವಿಪರೀತ ಬತ್ತದ ಶರಧಿಯನು ಹನುಮಂತನ್ಹಾರಿದನು ೫

ಪ್ರತಿಭಟಿಸಿ ಶ್ರೀ ರಾಮಚಂದ್ರನು
ಅತಿಮೆರೆವ ರಾವಣನ ಮಡುಹಿದಾ
ಮತಿವಂತ ಹನುಮನಿಗೆ ಇತ್ತಾ ಚತುರವದನ ಪದಾ ೬

ಧರಣಿ ಮಗಳಿಂಗೂಡಿ ರಾಮನು
ಧರೆಯನೆಲ್ಲವನಾಳಿ ನ್ಯಾಯದಿ
ಸ್ವರಗವಾಸಕೆ ತೆರಳಿದನು ನರಸಿಂಹವಿಠಲನು ೭

## ಅವತಾರತ್ರಯ

### ೧೬೯

ಅಕ್ಷಯ ನೀನಾಮೃತಂ ಕುಕ್ಷಿಯೊಳಗೆ ಪೂರ್ಣವಾಗಿಹ
ಅಕ್ಷಯಾಂತಕನೀಕ್ಷಿಪುದು ಸುಜನರು ಪ

ಇಕ್ವಾಕು ಕುಲಾಧ್ಯಕ್ಷ ರಾಘವನಾ ಶಿಕ್ಷೆಯಲಿ ಪ್ರಾಣ
ರಕ್ಷಕನೆಂದರುಹಲು ಧರೆಗೆ ತಕ್ಷಣದಿ ಮರುದ್ವಾಕ್ಷ
ಮರಕಟ ಕೃತಿಯ ತೋರಿ ಜಲಧಿಯನೆ ಪಾರಿ
ರಕ್ಷಕೇಂದ್ರನ ಪುರಸೇರಿ ರಕ್ಕಸಿಯದೆಡೆಯಲಿ ಜನನಿಗೊಂದಿಸಿ
ಲಕ್ಷಣದುಂಗುರವ ತೋರಿ ರಕ್ಷಸದಕ್ಷರವನಳಿದಾ ೧

ಯದುಕುಲದೊಳುದಯಿಸೆ ಹರಿಯು
ತದನರಿತು ವಾಯು ಉದಭವಿಸಿ ಭೀಮಾಭಿಧಾನದಿ

ಮುದಗೊಳಿಸಲಿಳೆಗೆ ಕುದಿಯುವ ಬಕ ಹಿಡಿಂಬರರಳಿದು
ಕೀಚಕನ ಸದೆದು ಅಧಮಕಾರವ ಕುಲವನಳಿದು
ವಧಿಸಿದಖಿಲ ಬಲವ ತೋರಿ ಮುದವ ಬೀರಿ ಧರೆಯ ಜನಕೆ
ಯಶವ ಗಳಿಸಿದವನ ಇಹಕೆ ಚರಕೆ ೨

ಗುರುವಾಗವತರಿಸಿ ಧರೆಯ ಸುಜನರು
ಕರುಣಾಬ್ಧಿ ಹರಿಯು ಧರೆಯೊಳುಡುಪಿ ಪುರದಿ ಜನಿಸಲಿ
ಸುರರಿಗೆ ತಿಳಿಯಲು ಹರಿಯ ಮತವ ಸೃಜಿಸಲಿಳೆಯಲು
ತದಾಜ್ಞೆಯ ಕೇಳಲು ಭರದಿ ಮಧ್ವನಾಮ ಪಡೆದು
ಹರಿಮತವ ಪಿಡಿಯ ಬೋಧಿಸಲು
ನರಸಿಂಹವಿಠಲನ ಸ್ಮರಣೆಯಗೈದು
ನರಜನ್ಮ ಸಾರ್ಥಕವು ಪರಮಪದವ ಗೈದು ೩

## ೧೭೦

ಆಂಜನೇಯಾ ರಾಮ ಆಂಜನೇಯಾ
ಅಂಜದಾಕ್ಷಣ ಕಂಜನೇತ್ರನೆ
ಸಂಜೀವಿನಿಯಾ ತಂದು ನೀಡಿದಾ ಪ

ಪಸುಳನ್ನೈಯಾ ವಪುವೆಸೆವ ರಾಯ
ಅಸುರವರ್ಗದಸುವ ಮಿಸುಕದಾಕ್ಷಣ ಹಿಸುಕಿ ಬಿಡುತಿಹ ೧

ಭೀಮಸೇನಾ ಭಕ್ತಕಾಮಪೂರ್ಣಾ
ಕಾಮಕೀಚಕಾ ಬಾರ ಪಾಮರರಿದಾ
ಆ ಮಹಾತ್ಮರಾ ನಾಕ ನಾನು ಮೆರೆದಾ ೨

ಶಕ್ತಿಸಾರಾ ಭಕ್ತ ವಿರಕ್ತಿ ಪೂರಾ
ಭಕ್ತವೃಂದಕೆ ಮುಕ್ತಿಪಥ ಮಹಾಪೂರಾ
ಯುಕ್ತಿಯಿಂದಾ ವ್ಯಕ್ತಪಡಿಸಿದಾ ಅವ್ಯಕ್ತರೂಪಾ ೩

ಕ್ಲೇಶದೂರಾ ಪ್ರಾಣೇಶ ವಾರಾ ಗಂಭೀರಾ
ದಾಸಜನ ನುಡಿಯಾ ಗುಣದೋಷ ಹರಣಾ ಅಣಿಮಾ
ವಾಸನ ರಹಿತಾ ಗುಣಗಣಗಡಣಾ ಗರಿಮಾ ೪

ದಿಟ್ಟ ರಾಮಾದಕಾ ಹೃದಯ ಪ್ರೇಮ ಮಧುರಾ
ವಿಠಲನರಸಿಂಹಾ ಎದೆಯಾರವಿಂದ ನಯನಾ
ದಿಟ್ಟನಿಟ್ಟಿಗೇ ಸಾಧನೆಯ ಸಾರುವಂಥಾ ಧೀರಾ ೫

## ೧೭೧

ಏಸುಪರಿ ಈಸಬೇಕೋ ಶ್ರೀಶದಾಸನೇ
ಮತ್ತೂರೇಶ ಭವಸಾಗರದಿ ಏಸುಪರಿ ಈಸಬೇಕೋ ಪ

ಕೂಸಿನಂಕದಿ ಬಾವು ಘಾಸಿಸುವ ಜ್ವರತಾಪನೋಸರಿಸಲೇಶ
ಸಮಯದಿಯೊದಗಲು ಲೇಶವಾದರು ಮಗುವಿನಾಸೆ ಇರದಿರೆ
ಪ್ರಾಣೇಶನೇ ಗತಿಯೆನಲು ಲೇಸುಮಾಡಿದೆ ಸ್ವಾಮಿ ೧

ದಿನಸುಃಖ ಕ್ಷಣದುಃಖ ಅನುದಿನವೂ ದುಃಖ
ಎನಿತೆಂದು ಹೇಳಲ್ಯ ನಿನಗೆ
ಮನದಳಲು ನೀಗಲಸದಳವಾಗಿ ಬಳಲುವೆನು
ತನುವಿನೀ ಸಂಕಟವ ತೊಲಗಿಸ್ಯೆ ಜವದಿ ೨

ಅರಗಳಿಗೆ ನಿನ್ನ ನೆನೆದರೆ ದುರಿತ ದೂರಹುದು
ಭರದಿ ಎನ್ನೊಡೆಯ ಶ್ರೀರಾಮ ಪೊರೆವಾ
ಉರಿವ ಭವ ಕಿಚ್ಚಿನಿಂದುದ್ಧರಿಸಿ ಎನ್ನನು
ನರಸಿಂಹವಿಠ್ಠಲನ ನೆನೆಯೆ ಜಿಹ್ವೆಗನಿಸೊ ೩

## ೧೭೨

ಕಂಡೆನು ಗುರುರಾಯಾ ನಿನ್ನುದ್ದಂಡ ಪರಾಕ್ರಮವಾ
ಕಂಡೆನಾ ಮನಗಾಡೆ ಪಾಂಡುಪಕ್ಷನ ಭೃತ್ಯ
ಮಂಡೆ ಬೋಳಾಗಿಮಾಡಿ ಹಿಂಡು ಖಂಡಿಸಿದ್ಯೋ ಪ

ರಾಮನ ಸೇವೆಗೆಂದೂ ನೀನು ಕಾಮಿಸಿ ಜನಿಸಿದೆಯೋ
ನೇಮದಿಂದಲಿ ಸುರಸ್ತೋಮವ ನೀಗಿ
ಭೂಮಿಜೆಯ ತಂದು ರಾಮನಿಗೊಪ್ಪಿಸಿದ್ಯೋ ೧

ಗೋವಳ ಭೃತ್ಯನಾಗಿ ನೀನು ಅವರಲ್ಲಿ ಪುಟ್ಟಿದ್ಯೋ
ಸಾವಿನ ಬಾಯಿಗೆ ಕುರುವಿಂಡು ಕಟ್ಟಿ ನೀ
ಭೂವನಿತೆಯ ಭಾರ ಪೋಗಲಾಡಿಸಿದ್ಯೋ ೨

ಹರಿಮತ ಏರುವುದಕೆ ನೀನೆ ಸರಿ
ಗುರುಮಧ್ವನೆನಿಸಿದೆಯೋ
ಸರಿಯಾಗಿ ಖಂಡಿಸಿ ಏಕವಿಂಶತಿ ಮತ
ನರಸಿಂಹ ವಿಠಲನ ದಾಸನೆನಿಸಿದ್ಯೋ ೩
ಗಂಧದ ಮರವೇನು ಗಂಧದ ಮರವೇ

## ೧೭೩

ವಿದ್ಯಾಮರವೇ ಉದ್ಯೋಗದ ಮರವೇ ಪ

ಅಂಜನಾ ದೇವಿಯ ನೀ ಜಠರದಿ ಜನಿಸಿ
ಕಂಜರಾಕ್ಷ ಶ್ರೀರಾಮಭದ್ರನ ಭೃತ್ಯನೆನಿಸಿ
ಸಂಜೀವಿನಿಯ ತಂದೆ ಅಂಜದಾರ್ಣವ ದಾಂಟಿ ತಂದೆ
ರಂಜಿಪ ಮುದ್ರಿಕೆಯ ಅವನಿಜಾತಳಿಗಿತ್ತು ಬಂದೆ ೧

ಹೆಸರಾದ ಕೌರವ ಬಲವ ಸವುರಿ ನೀ
ಉಸುರಿಲ್ಲದವರನು ನೆಗಹಿ ನೀ

ಮಿಸುಕದೆ ಅಸುರರ ಅಸುವ ಪೀಡಿಸಿದೆ
ಅಸುನಾಥ ಹರಿಸಿ ನೀನತುಳ ತೋಷವನಿತ್ತೆ ೨

ಧರೆಯೊಳು ನೀ ವರ ಕಾಪ್ಯಪುರದಿ ಜನಿಸಿ
ಹರಿಮತವ ಹರಹಿ ಹರಿಸಿ ರೂಹುಗೊಳಿಸಿ
ಹರಿಪರಬ್ರಹ್ಮನೆಂದರಿಯೆ ಜಗಕ್ಕೆ ಕೋರಿ
ನರಸಿಂಹವಿಠಲನನುಗಾಲ ತೋರುವನು ದಾರಿ ೩

## ೧೭೪

ಗುರುಮಧ್ವಮುನಿರಾಯಾ ಎನಗೊಂಬೊದಗಿದಾನು ಸಹಾಯ ಪ

ಕತ್ತಲೆ ಕವಿದಿತ್ತು ಸುತ್ತಲೆ ಕಾಣದಂತೆ ಇತ್ತು
ಬತ್ತಲೆಯಾಗಿತ್ತು ಕತ್ತಲೆ ಬಟ್ಟೆ ದೃಶ್ಯವಿತ್ತು
ಮತ್ತುರೆ ಭವತಮ ಸುತ್ತಲೆ ಮುಸುಕಿರೆ
ಉತ್ತಮಾನಂದತೀರ್ಥ ಬಿಡು ಉದಯಸಿದಾ ೧

ಹರಿಬೀಜಾವರಿ ಅಲ್ಲಾ ಧರೆಯೊಳು ಸದ್ಗತಿ ದೊರಿಲಿಲ್ಲಾ
ಗುರುವೇ ಇರಲಿಲ್ಲಾ ಧರೆಯೊಳು ಹರಿಯನಾವ ಬಲ್ಲ
ಸುರರೊಳು ಸುರತರುವರ ವಾಡ ಸೂನು
ಧರೆಯೊಳವತರಿಸಿ ಹರಿಪಥ ತೋರಿದಾ ೨

ಎಲ್ಲ ರೋಗಕೆ ಮದ್ದು ಸಲ್ಲುವದಿವರ ನಾಮ ಮುದ್ದು
ಹುಲ್ಲಜನರ ಸದ್ದು ನಿಲ್ಲದೆ ಪೋದಿ ತಡವಿ ಬಿದ್ದು
ಬಲ್ಲಿದ ನರಸಿಂಹ ವಿಠಲನ ನೆನೆಯಲು
ಎಲ್ಲ ಕಾಮಿತಫಲ ನಿಜವೆಂದರುಹದಾ ೭

## ೧೭೫

ಧೀರನೋ ಚೋರನೋ ಹೇರನೋ
ದಾರಿರುವಿ ದೂರ ನಿಲ್ಲೋ ಪ

ಚಾರು ಮರಕಟ ರೂಪವ ತೋರಿ ಮಾಯ ದನುಜಾರಿ
ಚಾರಕನೆಂದು ಸಾರುತಿರುವೀ ಬಾರಿ ಬಾರಿಗೆ ಶ್ರೀರಾಮ
ಆರೈಸಿಸುವಿ ಎಂದೂ ತೋರದಿರು ದಿಟವೆನಗೆ ೧

ರಕ್ಕಸರ ಮಾಯೆಯನು ಲೆಕ್ಕಿಸುವವಳಲ್ಲ ನಾ
ಅಕ್ಕರವ ತೋರದಿರಲು ಮಿಕ್ಕ ಮಾತುಗಳೇಕೆ
ಇಕ್ಕುವೆನು ಶಾಪವನೆನೆ ತಕ್ಷಣದಿ ಮುದ್ರಿಕೆಯನಿತ್ತಾ ೨

ಶ್ರೀರಾಮ ಮುದ್ರಿಕೆಯ ನೋಡಿ
ಪರಮ ನೀ ಭಕ್ತನಹುದು
ಪಿರಿದಾಗಿ ನಿನ್ನ ಕೀರ್ತಿ ನರಸಿಂಹ ವಿಠಲನು
ಭರದಿಂದ ಮಾಳ್ಪನು ಕರವಿಡುವ ಶಿರದೀ ೩

## ೧೭೬

ನಿನ್ನ ಕಂಡೆನು ದೇವ ನಿನ್ನ ಕಂಡೆ
ಘನ್ನ ಮಹಿಮನೆ ಮತ್ತುರೇಶಾ ಕುಂಚೂರವಾಸಾ- ಪ.

ಪನ್ನೀರಿನಿಂದ ನಿನ್ನಂಗವನು ತೊಳೆದು ಬಲು
ಚನ್ನಸಿರಿಗಂಧದ ಪನ್ನೆರಡು ನಾಮ ಚೆಲು
ವನ್ನಿರಿಸಿ ಪಣೆಗೂರ್ಧ್ವ ಪುಂಡ್ರ ರಕ್ತಾಕ್ಷತೆಯನು
ಎನ್ನ ಕೈಯಿಂದಲೇ ಇಡುವಂತೆ ನೀನೆ ಮಾಡು ೧

ಒಪ್ಪಿಹುದು ಕೊರಳಲ್ಲಿ ಶ್ರೀ ತುಳಸಿ ಮಾಲೆ ನ-
ಮ್ಮಪ್ಪ ನಿನ ಮೈಮೇಲೆ ಕುಸುಮ ನಿಕರ
ತಪ್ಪದಲಿ ಓರಂತೆ ಇಪ್ಪ ಭೂಷಣ ನೋಡಿ
ಒಪ್ಪ ನಿನ್ನೋಜೆಯನ್ನೆಷ್ಟು ಪೊಗಳಲಿ ಹಾಡಿ ೨

ಮಾನವನು ನಾಮವು ಜ್ಞಾನಿ ಪವಮಾನನೇ
ಮಾನ್ಯವಾಯಿತೆ ನಿನಗೆ ಆಶ್ಚರ್ಯವೋ

ಮಾನ ರಕ್ಷಕ ಸ್ವಾಮಿ ನರಸಿಂಹ ವಿಠ್ಠಲನೇ
ಪ್ರಾಣದೇವಾನೆಂಬ ನಾಮವಿಟ್ಟಿಹನೋ ೩

## ೧೭೭

ಪ್ರಾಣ ಬಿಟ್ಟು ನಾನಿರಲಾರೆ ಪ

ನಿನ್ನ ಪಿಡಿದು ರಘು ರನ್ನದಶಾಸ್ಯ-
ನನ್ನೆ ಸವಿದು ದಾನವ ಕುಲಬೇರ್ಹಾ-
ವನ್ನೆ ಕಿತ್ತಿ ಜಾನಕಿಯನೆ ತಂದಾ
ನಿನ್ನುಳಿದಿನ್ನುಂಟೆ ಮನ್ನಿಸಿ ಕೇಳ್ವರು
ಕುನ್ನಿಯ ಮಾನವರೇನು ಬಲ್ಲರು ೧

ವಿಕ್ರಮ ಭೀಮನೆನಿಸಿ ದ್ವಾಪರದಿ
ಚಕ್ರಿಯಾಜ್ಞೆಯಿಂದ ದುರುಳ ಮಲ್ಲರ ಭೂ-
ಚಕ್ರಕಪ್ಪಳಿಸಿ ಬಕನನ್ನೇಕ-
ಚಕ್ರಾಖ್ಯನಗರದಿ ಹಿಂಡಿ ಬಿಸುಟೆ ಕುರು-
ಚಕ್ರವರ್ತಿಯ ಕುಲವಳಿದೀ ೨

ಶ್ರೀಶಾನುಜ್ಞದಿ ಧರೆಯೊಳವತರಿಸಿ
ಈಶಮಧ್ವನೆಂಬಭಿದಾನವ ವಹಿಸಿ
ದೋಷನಿತಿಲ್ಲದ ಮತವನೆ ಸೃಜಿಸಿ
ಈಶ ನಿನ್ನಾಣೆ ಜಗದುದ್ಧಾರ ಮಾಡಿದಿ
ದಾಸನಹುದೋ ನೀ ನರಸಿಂಹವಿಠಲನ ೩

## ೧೭೮

ಮುತ್ತೂರೇಶ ಶ್ರೀ ಮರ್ಕಟಾ
ತುಲಸದಲಾಯತಾಕ್ಷ ಶ್ರೀರಾಮದೂತಾ ಪ

ಎತ್ತ ಚಲಿಸದಂತೆನ್ನ ಮನವ ತವ
ಉತ್ತುಮ ಪಾದ ಸರೋಜದೊಳಿಟ್ಟು
ಪತ್ತು ತಲೆಯನರಿಯಡಿದಾವರೆಯನು
ನಿತ್ಯ ಭಜಿಸುವಂದದಿ ಮಾಡಯ್ಯ ೧

ಆಂಜನೇಯಾ ಭೀಕರ ರೂಪಾ ದಾನವ ಘಾತಕರಾ
ವಾಂಛಿತವ ದಾತಾ ಕಂಜಾಕ್ಷನ ಸತಿ ಮೇದಿನಿ ಸುತೆಯಳ
ಮಂಜುಮಾಡಿ ಖಲ ರಾವಣನೊಯ್ಯಲು ಅಂಜದಿರೆಂದವನಿಪ–
ನಿಗಭಯವಿತ್ತು ಮಂಜುಂ ಕಾರ್ಯವ ನೆರೆದಪೆನೆಂದೀ ೨

ಭಾರತೀಯ ಪವನತನಯ ಘನತರ ಕಾರ್ಯಕರ್ತಾ
ಶ್ರೀರಾಮದೂತಾ ಘೋರತರದ ಅಪರಾರ್ಣವನು
ಹಾರಿ ದಾಂಟಿ ಲಘು ದಶಮುಖಪುರವನು
ಶೇರಿ ಮುದ್ರಿಕೆಯಿತ್ತೆ ಜಾನಕೀದೇವಿಗೆ
ವೀರರಾಘವನಂಘ್ರಿಗೆ ಎರಗಿದಿ ನೀ ೩

ದಾನವನಾಶಾ ಜಾನಕೀತ್ರಾತ ದಶರಥಸುತ ಭಜಕಾ
ಆನಂದತೀರ್ಥ ದಾನವ ಕೋಟಿಯ ನಡೆದು ಜವದಿ ನೀ
ಮೌನಿ ಹರಿಗೆ ಸಹಾಯಾಗ್ರಣಿಯಾಗಿ ಹೀನ ರಕ್ಕಸ ದಶ–
ಶಿರವನರಿಸಿ ನೀ ನರಸಿಂಹವಿಠಲನ ದಾಸನೆನಿಸಿದೀ ೪

## ೧೭೯

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಚಾರು ಮರಕಟರೂಪ ತಾಳಿದಾ ಮೂರ್ತಿಗೆ
ಚೋರ ದಶಕಂಠನನು ದಣಿಸಿದವಗೆ
ನೀರಜಾಮುಖಿಗೆ ಮುದ್ರೆಯಿತ್ತ ಕಪಿವರಗೆ
ಶ್ರೀರಾಮ ಧ್ಯಾನದೊಳು ತತ್ಪರಾದವಗೆ ೧

ನೀಚ ಠಕ್ಕನ ಹಿಡಿಂಬಕನೊರಸಿದಾ ಬಲಗೆ
ಕೀಚಕರ ಕಿರ್ಮೀರ ಬಕಕಾಲಗೆ
ನಾಚಿ ನೀರೊಳು ಪೊಕ್ಕು ಕುರುಪತೀಯಂತಕಗೆ
ಆ ಚಕ್ರ ಸೇವೆಯಲಿ ನಿರತನಾದವಗೆ ೨

ಜಗವನುದ್ಧರಿಪ ಬುದ್ಧಿಯ ತಾಳ್ದಯತಿವರಗೆ
ಮಗುವಾಗಿ ಮಧ್ಯಗೇಹದಿ ಜಾತಗೆ
ನಿಗಮ ಗೋಚರ ಶ್ರೀ ನರಸಿಂಹವಿಠಲನ
ಭಕುತಿಯನು ಬೇಡಿ ಅಜಪದ ಪಿಡಿದ ಹರಿಗೇ ೩

## (ಊ) ದೇವತಾ ಸ್ತ್ರೀಯರು

### ೧೮೦

### ಸರಸ್ವತಿ

ಮಂಗಳಾರುತಿಯನೆತ್ತೀರೆ ವಾರಿಜಭವಮುಖಿಗೆ
ಮಂಗಳಾರುತಿಯನೆತ್ತೀರೆ ಪ

ಇಂದು ಬಿಂಬ ಸದೃಶ ವದನೆಗೆ ಲಾವಣ್ಯ ಖಣಿಗೆ
ಅಂದ ಕುಂಕುಮಭೂಷಿತ ಫಣೆಗೆ ಹರಿದ್ರ ಭೂಷೆಗೆ
ಸಂದ ಮೌಕ್ತಿಕ ಚಂಪಕ ನಾಸಿಕೆಗೆ ಚಂದ ಕರುಣಾಭರಣ ಭೂಷಿತೆಗೆ
ಕಂದರ್ಪ ಚಾಪ ಪರಿಭ್ರೂಲತೆಗೆ ಇಂದು ಛವಿಯ ಕಿರೀಟ ಭೃತೆಗೆ
ಹಿಂದೆ ಜೋಲ್ವ ಕನಕವೇಣಿಗೆ ಮಂಗಳಾರುತಿಯನೆತ್ತಿರೆ ೧

ಚಾರುವಸನ ಭೂಷಿತಾಂಗೆಗೆ ವಿದ್ಯುತ್ಸುಕಾಂತೆಗೆ
ಹಾರಪದ ಶಮಿರೂಪ ಕಂಠೆಗೆ ಸುಕಂಬು ಶ್ರೀದೇವಿಗೆ
ಶೀರ ಕಟಿಯೊಳ್ನೆರೆವ ಮೇಖಲೆಗೆ ಸಾರ ವೇದಾಂಗ ಭೂತೆಗೆ
ಭಾರಿ ಭೂಷಣಯುಕ್ತ ವಾಣಿಗೆ ನೀರಜ ಪಲ್ಲವಗಾತ್ರೆಗೆ
ಸಾರಸಾಕ್ಷಿ ಶಿರಿವಂತೆಗೆ ಮಂಗಳಾರುತಿಯನೆತ್ತಿರೆ ೨

ಕರದಿ ವೀಣೆ ಧರಿಪ ದೇವಿಗೆ ಪಾವನ್ನಗಾತ್ರೆಗೆ
ಧರೆಯ ಸೃಷ್ಟಿಕರ್ತನರಸಿಗೆ ಮಂಗಳ ವಾಣಿಗೆ
ಪರಿಪರಿಯಲಂಕಾರ ಭೂಷಿತೆಗೆ ಸರಸ ಕೋಮಲ ಪದ್ಮಪಾತೆಗೆ
ಮರಕತಭೂಷಣ ಭಾಸೆಗೆ ನಿರುತ ಜನಕೆ ವಿದ್ಯಪ್ರದೆಗೆ
ನರಸಿಂಹವಿಠ್ಠಲನ ಬಾಲೆಗೆ ಮಂಗಳಾರುತಿಯನೆತ್ತಿರೆ ೩

## ೧೮೧

### ಪಾರ್ವತಿ

ಪಾಲಿಸೆ ಅಂಬೆ ಗುಣಗಣೆ ಗೌರಿ ಪ

ಕಾಮಿತ ಫಲ ಪರಿಪೂರ್ಣಳೆ
ಚಿಂತಾಮಣಿಗುಣಪೂರ್ಣಳೆ ೧

ಮಂಗಳ ಮೂರ್ತಿಯ ಜನನಿ
ಮಂಗಳಪ್ರದ ಸುರ ಕಾಮಿನಿ ೨

ನರಸಿಂಹವಿಠ್ಠಲದಾಸಿ
ಸರಸಿಜಮುಖಿ ಮೃದುಹಾಸಿ ೩

## ೧೮೨

ನಾನೊಬ್ಬಳ್ಭಾರತದಲ್ಲಿದ್ದೆ ಬಂದೆ ಪೂರ್ವದ ಹಿಂದೆ ಪ

ಬಂದೆ ಬೆಂಕಿಯಿಂದ ನಿಂದೆ ಕನ್ಯೆಯಾಗಿ
ಹೊಂದಿ ಐವರಿಗಾನಂದ ಸುಂದರಿ ೧

ಮಾರಿ ಕೌರವರಿಗೆ ಹಾರ ಪಾಂಡವರಿಗೆ
ಭಾರತಿ ಧಾತ್ರಿಗೆ ಕ್ಷೀರ ಮಾರಪಿತಗೆ ೨

ನರಸಿಂಹವಿಠಲಗೆ ಕರುಣದ ಕರಡಿಗೆ
ಉರಿ ದುರುಳರಿಗೆ ಮರೆ ಶರಣರಿಗೆ ೩

## (ಎ) ಗುರುನಮನ

### ೧೮೩

ಶಿರಿವರನೆ ಕರುಣಾಂಬುನಿಧಿಯಮಲ
ಚರಣಕಮಲವ ಬೇಡುತಿಪ್ಪರ ಪಾದಪಿಡಿವೆನು ನಾನು ಪ

ಶಿರಿಲಕುಮಿ ಸರಸಿಜಭವ ಸರಸ್ವತಿ
ಗುರುಪವಮಾನ ಭಾರತಿ ಮುಖ್ಯರ
ವರ ಪಾದಂಗಳಿಗೆ ನಮಿಸುವೆ ಹರಿಯ ತೋರ್ಪದಕೆ ೧

ಪನ್ನಗಾಶನ ಪನ್ನಗೇಂದ್ರರ
ಪನ್ನಗ ವಿಭೂಷಣ ಸತಿಸುತರ
ಸನ್ನುತಾಂಘ್ರಿಗಳ ಬಿಡದ್ವಿಡಿಪಿ ರಘುರನ್ನರರಪದಕೆ ೨

ಗುರು ಶ್ರೀಪಾದರಾಯ ವ್ಯಾಸರ
ಪುರಂದರ ವಿಜಯಾದಿ ಗುರುಗಳಿಗೊಂದಿಪೆನು
ನರಸಿಂಹವಿಠಲನಂತುಪಾದ್ಯನು ದಾರಿತೋರ್ಪುದಕೆ ೩

### ೧೮೪

## (ಶ್ರೀ ಜಯತೀರ್ಥರು)

ಜಯತೀರ್ಥರೇ ನಮ್ಮ ಸುಮತೋದ್ಧಾರಕರು
ಮಳಖೇಡ ನಿಲಯರು ಪ

ಪೂರ್ಣಪ್ರಜ್ಞರಲಿ ಪಶುರೂಪ ತಾಳಿ ಭಾಷ್ಯಗಳ ಪೇಳಿ
ಜೀರ್ಣಮಲಿನ ಮೂಢಮತಗಳಿಗೆ ದಾಳಿ ಈ ಗ್ರಂಥಗಳ್ಪೇಳಿ
ಪೂರ್ಣಬೋಧ ಗುರುಮತವಾರ್ಧವ ಪೇಳಿ

ಶೀರ್ಣವಾಗಿಹುದೀ ವೈಭವ ಎಂದು ಹೇಳಿ
ಸುಜ್ಞರಾದರು ಮುದ ತಾಳಿ ೧

ಇದೇ ದೇಶಪಾಂಡೆರೊಳುದ್ಭವಿಸೆ ನರಜನ್ಮ ವಹಿಸಿ
ಪದಪಿನಿಂದ ಗೃಹಸ್ಥಾಶ್ರಮವನುಸರಿಸಿ ಸಂಸಾರದಿ ಬೆರಸಿ
ಕುದರಿ ಏರಿ ಪೊಳೆ ನೀರಿಗೆ ಬಾಯಿ ಸರಿಸಿ ಬಹು ನೀರಡಿಸಿ
ಸದಮಲಕ್ಷೋಭ್ಯರು ಪಶುವೆಂದುಚ್ಚರಿಸಿ ಪೂರ್ವ ಜನ್ಮ ಸ್ಮರಿಸಿ ೨

ಕ್ಷಿಪ್ರದಿ ಯತ್ಯಾಶ್ರಮವೆ ತಾಳಿದರು ಟೀಕವ ಕೈಗೊಂಡರು
ಸುಪ್ರಸಿದ್ಧ ಹರಿಮತವನುದ್ಧರಿಸಿದರು ವ್ರತಗಳ ಪೇಳಿದರು
ವಿಪ್ರವರ್ಗಕೆ ಹರಿಮಾರ್ಗವ ತೋರಿದರು ಹರಿಮತ ತತ್ವಜ್ಞರು
ಸುಪ್ರಸಿದ್ಧ ನರಸಿಂಹವಿಠಲತರು ಶತಪತ್ರ ಶೇಷಾಲಂಕೃತರು ೩

## ೧೮೫

### (ಬ್ರಹ್ಮಣ್ಯತೀರ್ಥರು)

ಬ್ರಹ್ಮಣ್ಯತೀರ್ಥರ ಚರಣಾಬ್ಜಯುಗ್ಮವ
ಸಂಭ್ರಮದಲಿ ಸೇವಿಪೆ ಪ

ಅಂಬುಜಬಂಧು ಸನ್ನಿಭಸಾಧುವೆನುತ ಶ್ರೀ
ಕುಂಭಿಣಿ ಮುನಿವರ್ಯರಾ ಆರ್ಯರಾ ಅ.ಪ.

ತಿದ್ದಿದ ಶ್ರೀಪುಂಡ್ರ ಮುದ್ರೆಗಳಿಂದಲಿ ಸಂ-
ಶುದ್ಧಿ ಮಂಗಳಗಾತ್ರರ
ರುದ್ರಗಳೊಲಿದು ಸದ್ವಿದ್ಯೆಗಳನಿತ್ತು
ಉದ್ಧಾರ ಮಾಡಲೆಂದೂ ನಾ ಬಂದೂ ೧

ಶಿಷ್ಯರುಗಳು ತಂದ ಭಿಕ್ಷಾನ್ನಂಗಳನಂದು
ಆಕ್ಷಣ ಮಂತ್ರದಿಂದ
ತಕ್ಷಣ ಕಲ್ಪಸಿದಂತೆ ಗೈದಾ ಧೀರ
ರಕ್ಷಿಸೆಂದೆರಗುವೆ ನಾ ಬೇಡುವೆ ೨

ಕಾಂತೆಯೋರ್ವಳು ತನ್ನ ಕಾಂತ ಸ್ವರ್ಗವನ್ನೈದೆ
ಚಿಂತಿಸುತತಿ ಶೋಕದಿ
ಕಾಂತೆ ವಂದಿಸಲು ಸೌಮಾಂಗಲ್ಯವರವನಿತ್ತು
ಕಾಂತನ ರಕ್ಷಿಸಿದ ಕೋವಿದರಾದ ೩

ಕುಂದದೆ ಸನ್ಮುನಿವೃಂದದೊಡನೆ ಬಹು
ವೃಂದಾವನದಿ ಶೋಭಿಪ
ಇಂದಿರೆಯರಸ ನರಸಿಂಹವಿಠ್ಠಲನ
ಸನ್ನಿಧಿವರ ಪಾತ್ರರಾ ಪೂತಾತ್ಮರಾ ೪

## ೧೮೬

ನಿನ್ನ ನಂಬಿದೆನೊ ಬ್ರಹ್ಮಣ್ಯತೀರ್ಥಾರ್ಯಾ
ಸನ್ನುತಚರಣಪಾವನ ಸುಚರ್ಯಾ ಪ

ಘನ್ನ ಭವದ ಭಯವನ್ನು ಕಳೆದು ಯತಿ
ರನ್ನ ಎನ್ನನು ಧನ್ಯನ ಮಾಡೋ ಅ.ಪ.

ಪುರುಷೋತ್ತಮ ಸುತೀರ್ಥರ ಪ್ರಿಯ ಸುಕುಮಾರ
ದುರಿತೌಘಜೀಮೂತ ಚಂಡ ಸಮೀರ
ಸುರುಚಿರ ತುಳಸಿ ಪಂಕಜಮಣಿಹಾರ
ಧರಿಸಿ ಮೆರೆವೊ ದಿನಕರನವತಾರ
ಕರುಣದಿ ತವ ಶ್ರೀಕರಚರಣಾಂಬುಜ
ದರುಶನವನು ಕೊಡು ಗುಣಗಣನಿಧಿಯೇ ೧

ಸೇವಕಜನರಿಗೆ ದೇವತರುವೆನಿಪ
ಶ್ರೀವಿಠಲನಪಾದತಾವರೆ ಮಧುಪ
ಕೋವಿದ ಜನರು ಸಂಭಾವಿಸಿ ಸ್ತುತಿಪ
ಪಾವನ್ನ ಪಾದಾರ್ಚಿತ ಭಾವಜ ಮುನಿಪ

ಪಾವನ ಸುಮತರ ಜೀವರ ಚಂದ್ರನೆ
ಪಾವನ ಮತಿ ಕೊಡು ನೀ ಒಲಿದೆನಗೆ ೨

ಹರಿಭಕ್ತಿವೈರಾಗ್ಯ ಪರ ತತ್ವಜ್ಞಾನ
ವರವ ಪಾಲಿಸು ಸರ್ವವಿದ್ಯಾಪ್ರವೀಣ
ನರಸಿಂಹವಿಠಲ ಶ್ರೀಹರಿ ಸನ್ನಿಧಾನ
ಕರುಣಾಪಾತ್ರನೆ ದಿವ್ಯವರಪೂರ್ಣಜ್ಞಾನ
ಹರಿಗುರುಭಜನ ತ್ವತ್ಪದ ವ್ಯಾಸಾರ್ಯರ
ಗುರುವೆಂದೆನಿಸಿದೆ ಧರೆಯೊಳು ಮೆರೆದೆ

## ೧೮೭

### ಶ್ರೀ ರಾಘವೇಂದ್ರರು

ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಾಘವೇಂದ್ರನ ಕಂಡಿರೇನಮ್ಮ ಪ

ಅಮ್ಮಾ ನಿಮ್ಮ ಮನೆಗಳಲ್ಲಿ ನಮ್ಮ ಗುರುಗಳ ಕಂಡಿರೇನಮ್ಮ ಅ.ಪ.

ಕಾಲಲಿ ಕಡಾಂವಿಗಿ ಕರದಲ್ಲಿ ದಂಡಕಾಷ್ಟಾ
ಮೈಯೊಳು ಕಾವಿಶಾಟಿ ಪೊತ್ತಿರುವರಮ್ಮ
ಬಂದ ಬಂದ ಜನರಿಗೆಲ್ಲ ಆನಂದ ನೀಡುತ
ಛಂದಾಗಿ ತಾಂವು ಇಲ್ಲಿ ಇರುತಿಹರಮ್ಮ ೧

ಬಂದ ಬಂದ ಜನರಿಗೆ ಅಭೀಷ್ಟವ ನೀಡುತ
ಛಂದಾಗಿ ಅಭಯವ ನೀಡುತಿಹರಮ್ಮ
ಒಂದಿನ ಸ್ವಪ್ನದಿ ಫಲಮಂತ್ರಾಕ್ಷತೆ ಕೊಡುತಲಿ
ಅಂದಿನ ಆನಂದನ ಕಾಣಮ್ಮ ೨

ಬಂದ ಬಂದ ಜನರು ಪ್ರದಕ್ಷಿಣೆ ನಮಸ್ಕಾರ
ತಾಂವ ದಿಂಡು ಉರುಳುವರಮ್ಮಾ

ಬಂದ ಬಂದ ಜನರಿಗೆಲ್ಲಾ ಅಭಯವ ನೀಡುತ
ತಾಂವ ತುಂಗಾ ತಟದೊಳು ಇರುತಿಹರಮ್ಮಾ ೩

ಮೈಯೊಳು ಕೇಸರಿಗಂಧಾ ಪೋಷಿಸಿದಾರಮ್ಮಾ
ಎದುರಲಿ ಶ್ರೀ ಕೃಷ್ಣನ ಪೂಜಿಪರಮ್ಮಾ
ಢಾಳ ಅಕ್ಷಂತಿ ತಿದ್ದಿದ ಅಂಗಾರವು
ಮುದ್ರಿಯು ತಾಂವ್ ಧರಿಸಿಹರಮ್ಮ ೪

ಕರದಲಿ ಜಪಮಾಲೆ ಕೊರಳಲಿ ಕಮಲಾಕ್ಷಿ ತಾವ್
ಧರಿಸಿಹರಮ್ಮಾ ಬಿಡದೆ ನಿರಂತರ
ನರಸಿಂಹವಿಠಲನ ಜಪಿಸುತ
ತಾಂವರಿಂದಾವನದೊಳ್ ಇರುಹರಮ್ಮಾ ೫

## ೧೮೮

ಆನಮಿಸುವೆ ಗುರುವಾ ಮಂತ್ರಾಲಯ ಸ್ಥಾನ ಮಾಡಿದ ಯತಿಯಾ ಪ

ದಾನವರೊಳವತರಿಸಿ ದೈನ್ಯರ ಮಾನನಿಧಿಯು ತಾನು
ಜ್ಞಾನಿಗಳಿಗೆ ಕಾಮಧೇನುವೆನಿಸಿದೀ
ಮಾನಿಯತೀಂದ್ರ ವಿಜ್ಞಾನಪೊಯ್ಯುವನು ಅ.ಪ

ಸದಯ ಸರ್ವದಾಯೆನಿಸಿ ಹೃದಯದಿ ಮುದವಾಂಕುರಿಸುವನು
ವಿಧು ಜೋತಿಯ ಪರಿ ಸದಮಲ ಕೀರ್ತಿಯ
ವಿದಿಶಮಾಗಿ ಭೂತಳದಿ ಉದಯಿಸಿದ ೧

ದೋಷದೂರ ನೆನಿಸೀ ದಾಸರಿಗೀಶನಡಿಯ ತೋರ್ಪಾ
ವಾಸುದೇವನಿಗೆ ನಿಜ ದಾಸನೆನಿಸಿ ಭವ–
ವಾಸದೊಳಿಹ ಪರತೋವೀವನು ೨

ಕರುಣಸಾಗರನೆನಿಸಿ ಶರಣಗೆ ವರಗಳ ತಾನೀವಾ
ಗುರುವೆಂದೆಂಬ ಯಥಾರ್ಥ ಪದವಿ ತಾ
ನರಸಿಂಹವಿಠಲನ ಕರುಣದೊಳಿಹನು ೩

## ೧೮೯

ಕ್ಲೇಶಂಗಳನೆಲ್ಲಾ ನೀಗಿ ಭಾಸಿಪರು ಸದ್ವಿಪ್ರರು
ದಾಸರಾದವರೆಲ್ಲರು ವ್ಯಾಸರಾಯರನ್ನ ಪಾಡಿ ಪ

ಡಿಂಭ ಪ್ರಲ್ಹಾದನೆನಿಸಿ ಕಂಭ ಜಾತನ ಆಯಾ ಪಿಡಿದಾ
ಡಂಭದಯ್ಯನ ಸುವಾನರಸಿ ಕಂಭಣಿಯೊಳ್ ಖ್ಯಾತನಾದಾ ೧

ಯತಿವರ ವ್ಯಾಸನೆನಿಸಿ ಕ್ಷಿತಿಪತಿ ಕೃಷ್ಣನ ಪಿಡಿದಾ
ಒತ್ಯುತಿಗಳೆಲ್ಲವನಳಿಸಿ ಶೃತಿ ಸ್ಮೃತಿ ಸ್ವಾದವ ಪೇಳ್ದಾ ೨

ಗುರು ರಾಘವೇಂದ್ರನೆನಿಸಿ ನರಹರಿ ಪೂಜೆಯ ಗೈದಾ
ದುರಿತಕಾನನ ದುರಿತಾನೆನಿಸಿ ನರಸಿಂಹವಿಠಲನ ನೆನೆದಾ ೩

## ೧೯೦

ನೋಡಿದ್ಯಾ ಗುರುಗಳ ಕೊಂಡಾಡಿದ್ಯಾ
ಈಡಾಡಿದ್ಯಾ ಪಾಪಂಗಳ ಆಹಾ ಪ

ಮನಸಿಲಿ ನೋಡಿದ್ಯಾ ಯತಿಗಳನ್ನ
ನಾಡಿನೊಳಗೆ ಈಡಿಲ್ಲದಿಹ ಈ ಗುರುಗಳಾ ಅ.ಪ.

ಹೊದ್ದ ಕಾವಿಶಾಠಿಯಲ್ಲಿ ಶ್ರೀ
ಮುದ್ರೆ ಹಚ್ಚಿದ ದೇಹಕಾಂತಿಯು ಆಹಾ
ತಿದ್ದಿದ ಅಂಗಾರದ ನಡುವೆ ಅಕ್ಷತೆಯು
ಎದ್ದು ಬರುವಂಥ ಈ ಮುದ್ದು ಗುರುಗಳಾ ೧

ನಿಂತ ಎದುರಲ್ಲಿ ಮುಖ್ಯಪ್ರಾಣಾ ಬೇಡಿ-
ದಂಥ ವರಗಳ ಕೊಡುವ ಜಾಣಾ ಆಹಾ
ಜಗದಂತರದೊಳಗೆ ಪ್ರವೀಣಾ ಸೀತಾ-
ಕಾಂತರೊಳಗೆ ಅತಿಪ್ರಾಣಾ ೨

ಮಂತ್ರಾಲಯದಲ್ಲಿರುವ ಮುದ್ದು ಬೃಂದಾವನದ ನೋಟ
ನಮ್ಮಲಿದ್ದ ಪಾಪಗಳೆಲ್ಲ ಓಟಾ ಅಲ್ಲಿ ವಿದ್ವಾಂಸರ ಜಗ್ಯಾಟ ಆ ಹಾ
ಮುದ್ದುವಾಹನನೆ ನೀನು ನರಸಿಂಹವಿಠ್ಠಲ ದೂತ
ದಾರಿದ್ರ್ಯಗಳೆಲ್ಲವ ಪರಿಹರಿಸುವಂಥಾ ೩

## ೧೯೧

ಯತಿಗಳೊಳಗೆ ಸದ್ಗತಿ ನೀನೇ ಗುರುವರಾ
ಯತಿವರ ರಾಘವೇಂದ್ರ ಪ

ವತಿಯಿಂದ ನಿನ್ನ ನಾಮವೇ ಗತಿಯೆನಿಪಗೆ
ಮತಿಯಿತ್ತು ವಿರಸ ಸಂಸ್ಕೃತಿಯಿದುದ್ಧರಿಪನೀ ಅ.ಪ.

ಮಧ್ವಮುನಿಯ ಕರುಣಾಬ್ಧಿಯ ಚಂದ್ರನೆ ದಯಾರಸ ಸಾಂದ್ರನೆ
ಬುದ್ಧಿಯಿಲ್ಲದೆ ನಿನ್ನ ಮರೆದು ಹಾದಿಯ ತಪ್ಪಿ
ಶುದ್ಧ ಪಶುವೆನಿಸಿದೆ ತಿಳಿಯದೆ ೧

ಆದಿವ್ಯಾಧಿಗಳು ಸೋಂಕುವದುಂಟೆ ಸದಾ
ನಿನ್ನ ನಾಮವ ಪಠಿಪರಿಗೆ
ಶೋಧಿಸಿ ನೋಡಲು ನಿನ್ನ ನಾಮವೆ ಮದ್ದು
ಸರ್ವರೋಗಗಳಿಗೆ ಹಾವಳಿಗಳಿಗೆ ೨

ಸರಸ ತೀರ್ಥ ಪ್ರಸಾದವೆ ಸದ್ಗತಿ ಮೃತ್ತಿಕೆಯೇ ಮುಕುತಿ
ಮರಣವೆ ನಿನ್ನ ಸ್ಮರಣೆಯಾಗದವಗೆ ನರಸಿಂಹವಿಠಲಗೆ
ಪ್ರೀತಿ ನಿನ್ನಲಿ ಭಕ್ತಿ ೩

## ಶ್ರೀ ಸತ್ಯ ಬೋಧರು

### ೧೯೨

ನಿಂದಿಸೋರಿಗೆ ನಿಂದೆಯನು ಕೊಡುವಾ
ಕೊನೆಕಾಮರಿಗೆ [?] ಕೊನೆಯನು ಕೊಡುವಾ
ಘನ ಮಹಿಮಾ ನಮ್ಮ ಸತ್ಯಬೋಧಗುರು
ಅನುದಿನ ನೆನೆಯಲಭೀಷ್ಟವ ಕೊಡುವಾ ಪ

ರಾಮದೇವಾರ್ಚನೆ ನೇಮದಿಂದಲಿ ಗೈದು
ಕಾಮಿತ ಫಲಪ್ರದ ಬಲವೈಯ್ದಿದಾ
ಶೀಮಿಶೀಮಿಯೊಳು ಕಾಮನ್ಯೆಯ್ಯನ ಜನ
ಕಾಮಪ್ರದಾನೆಂಬುದೆ ಸಾರಿದಾ
ಧೀಮಾನ್ ಶ್ರೀಮಾನ್ ಕಾಮಿತೇಷ್ಟದಾ
ಕಾಮನೆಂದು ತಾ ಪೊಗಳಿಸಿದಾ
ವಾಮದೆ ವಗುರು ರಾಮಭಕುತನೆಂದು
ಭೂಮಿಯೊಳ್ಡಂಗುರ ಹೊಡಿಸಿದಾ ೧

ತತ್ವ ತಿಳಿದು ನೋಡಿ ಸತ್ಯ ಸತ್ಯ ಹರಿ
ಮತ್ತುವನಿಗೆ ಭೃತ್ಯವಾದ ಸೂನು
ಉತ್ತಮರೆಲ್ಲರು ಸತ್ಸಮಯವಂತೆ
ಸತ್ಯ ಪ್ರಮಾಣವ ಪೇಳಿದನು
ಸತ್ಯಬೋಧ ರವಿ ಮಿಥ್ಯಾಗತ್ತಲೆಗೆ ತಾ
ಕತ್ತರಿಯೆಂದರುಹಿದನು ಸತ್ಯ ಬೋಧನೆಯನು
ಸತ್ವರಿಂಗೆ ಮಾಡಿ ಮತ್ತವರುದ್ಧಾರ ಮಾಡಿದನು ೨

ವರಸದ್ಗುಣಗಣ ನಿಲಯನೆನಿಸಿ ತಾ
ವರ ಶಿಷ್ಟಾನ್ವಿತ ಮೇಣ್ ವಂದ್ಯನಾದ
ಶಿರಿವರ ಪಾದಾನುಗ್ರಹ ಪಡೆದು ತಾ
ಹರಿಜನಾರ್ತಿತಯ ಛೇದಿಸಿದಾ

ದುರಿತ ತಮರಾಶಿಗಗ್ನಿಯೆನಿಸಿದಾ
ಶರಣರ ಸಂಘ ಬೂದಿಗೈದಾ
ನರಸಿಂಹವಿಠಲನ ಕರಣವ ಪಡೆದು ತಾ
ಗುರುವರ ವರಪ್ರದನೆನಿಸಿದಾ ೩

## ೧೯೩

ಬೋಧರ ನೋಡಿರೈ ಸತ್ಯಬೋಧರ ಪಾಡಿರೈ ಪ

ಮೇದಿನಿಯೊಳು ಬುಧಜನ ಉಡುವೃಂದಕೆ
ಚಂದ್ರಾ ಸದ್ಗುಣ ಸಾಂದ್ರಾ ಅ.ಪ.

ತಾಮರಂಧಂತಮದಿಯಟ್ಟಿದಾ
ಜವನೋಧರ್ಮ ಪ್ರಸ್ರವನೋ
ಕಾಮನೈಯ್ಯನ ಗುಣ ಪಾರಾಯಣರತ ಧ್ರುವನೊ
ಯತಿ ಪುಂಗವನೋ
ರಾಮಾರ್ಚನ ಕೃತ ಪೂತ ಹಸ್ತ ಪಲ್ಲವನೋ ವಿದ್ವದ್ಧವನೋ
ಕಾಮಿತೇಷ್ಟ ಪ್ರದ ಚಿಂತಾಮಣಿಗುಣಯುತನೋ ಜತಸನ್ನುತನೊ ೧

ಯತಿಮಣಿಮಾಲೆಯೊಳತಿ ಮಿನುಗುವ
ಪಚ್ಚದ್ಯುತಿಯೋ ಸಜ್ಜನ
ಗತಿಯೋ ಶ್ರುತಿತತಿನುತ ಶ್ರೀಪತಿಗುಣ ಸುಧಾಸಧೃತಿಯೋ
ಕುನರೂಪ
ಹತಿಯೋ ಯತಿಕುಲರತ್ನಾಕರ ಸಂಜನೀತ
ಪ್ರೋನ್ನತಿಯೋ ಕವಿಜನ
ನುತಿಯೋ ಮಿತೀಮೀರಿ ಕೂಡಿಹ ಭಗವದ್ಭಕ್ತರ ಹಿತವೋ
ಹರಿಸಮ್ಮತವೋ ೨

ನಿರುಪಮ ಸುಖ ತೀರ್ಥವಂಶದಲ್ಲಿ ವರ್ಧನವೋ
ಹರಿಜನಧನವೋ
ಶರಣರ ದುರಿತಗಳಿರದೆ ಕಳೆವ ಹಿತತನುವೋ
ಅಭಯ ಸುಮನವೋ
ಸರುವ ರಾತ್ರಿಯೊಳು ರವಿಯ ತೋರ್ದ ತಪಧನವೋ
ಮದಮರ್ದನವೋ
ನಿರುತದಿ ನರಸಿಂಹವಿಠಲನ ನೆನೆಯುವ ಯಶವೊ
ದಾಸರ ವಶವೊ ೩

## ೧೯೪

ತತ್ವವ ಬೋಧಿಸಿದಾ ಶ್ರೀ ಗುರುರಾಯಾ ತತ್ವವ ಬೋಧಿಸಿದಾ
ತತ್ವವ ಬೋಧಿಸಿ ತತ್ವ ಕರುಣಿಸಿ
ಉತ್ತಮ ಜೀವಿಸಿ ಉತ್ತಮ ಗತಿಯೆಂದು ತತ್ವವ ಬೋಧಿಸಿದಾ ಪ

ಹಿಂದೆಯಾದರು ಸರಿ ಇಂದಾದರೂ ಸರಿ ಗೋ-
ವಿಂದನೇ ಗತಿ ಎಂದೆಂದು ಬಿಡನವನೆಂದು
ಸಂದೇಹವಿಲ್ಲದೆ ಮುಂದೆ ಆನಂದಾತ್ಮಾ ಎಂದು
ತಂದೆಯೇ ಮುಕುತಿಗೆ ಸಾಧನವೆಂದು ೧

ಕನಸು ಮನಸಿನಲಿ ಅನುಗಾಲ ಧ್ಯಾನದಿಂದಲಿ
ಘನಹರಿಯ ನೆನೆಯುತಲಿ
ಮನಕಾನಂದವನೀವನವನಿದಿರಲಿ
ಅನುಮಾನವಿನಿತು ಬಾರಲಾಗದೆನುತಲಿ ೨

ನರಸಿಂಹವಿಠಲನ ಶರಣರ ಸಂಗವು
ಹರಿವಾಯು ಕರುಣಕೆ ಕಾರಣವು
ಮರೆಯದೆ ಹರಿನಾಮ ಸ್ಮರಣೆಯ ಮಾಡಲು
ಹರಿಯೇ ಒಲಿದು ಕರಪಿಡಿವನು ಎಂದು ೩*

---

* (ಟಿಪ್ಪಣಿ: ಇವರು ಯಾವ ಗುರುಗಳು ಅಥವಾ ಸ್ವಾಮಿಗಳು ಎಂಬುದು ಸ್ಪಷ್ಟವಾಗಿಲ್ಲ.)

## ೧೯೫

ಉದ್ಧರಿಸಿ ಸಲಹಿವನ ಮಧ್ವಪತಿ ವಿಠಲಾ
ಶುದ್ಧ ಬುದ್ಧಿಯನಿತ್ತು ಬಿಡಿಸುಮನ ಚಂಚಲಾ ಪ

ಪದಿನಾರ ಶತಕದೊಳು ಮೊದಲು ಜನ್ಮವ ತಾಳಿ
ಸದಮಲ ದಾಸರಾಯರ ಪುತ್ರನೆನಿಸಿ
ಪದುಮನಾಭನ ಪಾಡಿ ಮುದದಿ ಭವನುತ್ತರಿಸಿ
ಯದುಪತಿಯ ಪಾದಾರವಿಂದವ ಪಡೆದನು ೧

ಮತ್ತೆ ಕರ್ದಮ ಬಲದಿ ಉತ್ತುಮರ ಕುಲವಲ್ಲಿ
ಸ್ತುತ್ಯಗುರು ಪೂರ್ಣಪ್ರಜ್ಞರ ಮತದಿ ಜನಿಸಿ
ವತ್ತರದಿ ದಾಸರಾಯರು ಮಾರ್ಗ ಪೇಳಲು
ಮತ್ತೆ ಹರಿಭಕ್ತಿಯಿಂದಲಿ ಜನ್ಮ ತಳೆದಾ ೨

ನಲನಾಮ ವತ್ಸರದ ಫಲಪುಷ್ಪದಮಾವಾಶ್ಯಾ
ಜಲಧಿ ಶಯನನ ದಾಸರಾಯರ ದಿನದಿ
ಸುಲಭ ನರಸಿಂಹ ವಿಠ್ಠಲ ಕರುಣಿ ಸಂತತವ
ಕಲುಷರಹಿತೇನರಗೆ ಬಲದಿ ಒಲಿದಿತ್ತನು ೩

# (ಎ) ಆತ್ಮನಿವೇದನೆ

## ೧೯೬

ಇಂದೀವರಾಕ್ಷ ಬಾ ಮುಕುಂದ ಮುರಹರ ಗೋವಿಂದಾ
ಸುಂದರಾಂಗನೆ ಬಂದು ರಕ್ಷಿಸೋ ಚೆನ್ನಿಗರ ಚಂದಾ ಪ

ತಂದೆ ತಾಯಿ ಬಂಧುಬಳಗ ಇಂದೆನಗೆ ನೀನೇ
ಚಂದದೆನ್ನನ ಮಂದಿರದಿ ನೀ ನಿಂದಿರು ದಯಾಮಯನೆ ೧

ನಿನ್ನ ಪಾದವನ್ನು ಪಿಡಿದನೆನ್ನ ರಕ್ಷಿಸೋ
ಸನ್ನುತ ವಿಚ್ಛಿನ್ನ ಭಕುತರನ್ನು ಸೇರಿಸಿಕೋ ೨

ಬೆರಸ ಬ್ಯಾಡೆನ್ನರಸ ನಿನ್ನ ಸ್ಮರಿಸದಿರ್ಪರಾ
ಶಿರಿವರ ನರಸಿಂಹವಿಠ್ಠಲ ಪೊರೆಯೋ ಭೌಮಾ ೩

## ೧೯೭

ಇಂದು ಶ್ರೀರಮಣಾನೀಗೆ ಭವ ಬಂಧನೇಯನು ನಾ ಪೇಳ್ದೆ
ಇಂದೀವರಾಕ್ಷಗೆ ನಿನ್ನ ನಂಬಿದೆ ಕರದ್ವಂದ್ವ ಜೋಡಿಪೆ ಸಲಹೀಗ ಪ

ತಂದೆ ಪ್ರಪಲ್ಹಾದಗೊಲೀದೀ ಸಲೆ ಬಂದ ವಿಪತ್ತನ್ನ ಕೇಳ್ದಿ
ಅಂದು ಭೂಭಾರವನಿಳುಹಬೇಕೆಂದು ಬಂದು ಕಂಭದಿ ನಡೆತಂದೆ ೧

ಅರುಹೆಲೊ ಹರಿ ಇನ್ನೆಲ್ಲಿ ಪಂಧಿರಣ್ಯಕಶ್ಯಪ ನುಡಿಯಲ್ಲೆ
ನರಹರಿರೂಪದಿ ತಾಳಿ ಕ್ಷಣದಿ ನೀ ದುರುಳ ರಕ್ಕಸರ
ಹೃತ್ಪಟಲವ ಶೀಳಿದಿ
ತಾಮಸರಿಗೆ ನೀ ವೈರಿ ನೀನೇ ದೊರಿ ಎಂಬೋರುದ್ಧಾರಿ
ಪಾಮರನಾನೆಂದು ನೀ ಮರೆಯದೆ ಕಾಯೋ
ಧೂಮನರಸಿಂಹವಿಠಲ ಪಾಲಿಪುದೆನ್ನ ೩

## ೧೯೮

### (ಲಾವಣಿ ಧಾಟಿ)

ಇಲ್ಲೆನುತಾ ಉದರ ಝಣತಾ ಅಕ್ಕಪ್ಪ ವಕ್ಕಪ್ಪ ಪ

ಇಕ್ಕಲ್ಯಾಂಗ ಸ್ವಾಮಿ ನಿನಗೆ ಮಕ್ಕಳ ಮನೆ ಇದು
ಚಕ್ಕಲಿ ಸಜ್ಜಿಗೆ ಗಂಜಿ ಮುತ್ಸೋರಿ ಪಾಯಸಾ
ದಕ್ಕದೀರೆ ತರಲ್ಯಾಂಗ ಮುಕ್ಕೋ ಬೇಕು ಇದ್ಧಾಂಗ
ಸಕ್ಕರಿ ಪರಿ ಭಕುತಿ ಇಕ್ಕುವೆ ಸಮರ್ಪಣ ಮಾಡಿ ೧

ಭವವೆಂಬ ಕಿಚ್ಚನ್ನಾರೆ ಸವಿತ ಭಕ್ತಿ ಭಾಂಡವಿಕ್ಕಿ
ಪವನಸೂನು ಹನುಮಮಧ್ವಧ್ಯಾನದಿ
ಜವದಿ ಎನ್ನ ಮನವ ಕುದಿಸಿ
ಸವಿಯ ಖಾದ್ಯ ಮಾಡಿಯದನು
ಭವದೂರ ಮಂತ್ರವ ಜಪಿಸಿ
ಸವಿಯಬೇಕು ಸಂತತ ಮುದದಿ ೨

ಎಲ್ಲರಂತೆ ಅಲ್ಲ ನೀನು ಇಲ್ಲದ್ದನ್ನು ಬೇಡ್ವೋನಲ್ಲ
ಸಲ್ಲಿಸಿಹನ್ನುವೀನೊಲ್ಲೆ ನಂಬುವಲ್ಲಾ[?]
ಬಲ್ಲಿದ ನರಸಿಂಹವಿಠಲ ಒಲ್ಲೆಂಬುದೀಗುಚಿತವೇ
ಸಲ್ಲಿಸಿದ್ದು ಒಪ್ಪಿಕೊಂಡು ನಿಲ್ಲಿಸೆನ್ನ ಮನದಿಯಂಘ್ರಿ ೩

## ೧೯೯

ಇಷ್ಟೇ ದಯ ಮಾಡಬಾರದೇ ಸೃಷ್ಟಿಕರ್ತಾ ಜಗದ್ರಕ್ಷಾ
ವಿಶ್ವನಾಥಾ ಇಷ್ಟೇ ದಯ ಮಾಡಬಾರದೇ ಪ

ದುಷ್ಟ ವಿಷಯದೊಳಗೆ ಬೆರೆತೆ ಸೃಷ್ಟೀಶ ನಿನ್ನನೆ ಮರೆತೆ
ಭ್ರಷ್ಟ ಮನವನಳಿದು ನಿನ್ನಿಷ್ಟ ಭಕ್ತರೊಳಗೆ ದುಡಿಸುನಿ ೧

ನಿನ್ನದೆಂಬಿ ಮರುಳು ಹಿಡಿದು ಅನ್ನಿಗರನು ಕಾಡಿ ತರಿದು
ಕುನ್ನಿಮನುಜನಂತೆ ಬಾಳ್ದೆ ಘನ್ನನೆ ರಕ್ಷಿಸು ನಾ ಬೇಡ್ವೆ ೨

ಪರರ ಹಾಡಿ ಕಾಲ ಕಳೆದೆ ಪರರ ಬೇಡಿ ಹೊಟ್ಟೆ ಪೊರೆದೆ
ನರಸಿಂಹವಿಠ್ಠಲನರಿಯದೆ ಕರುಣಾನಿಧಿ ಬೇಡದೆ ಪೋದೆ ೩

## ೨೦೦

ಉದ್ಧರಿಸೆನ್ನ ಶುದ್ಧ ಮಧ್ವಮತದ ಧೊರೆಯೆ ಬಿದ್ದು ಪೇಳುವೆ ಪ

ನಾನಾ ಯೋನಿಗಳಲ್ಲಿ ಜನಿಸಿ ಮಾನವ ಜನ್ಮವ ವಹಿಸಿ
ಸಾನುರಾಗದಿ ನಿನ್ನ ಭಜಿಸಿ ಮಾನ್ಯನೆನಿಸಿದೇ ೧

ಎಷ್ಟು ಕಷ್ಟ ಬರಲಿ ಇನ್ನು ದುಷ್ಟ ಮನಸು ಕಳೆದು ಮುನ್ನಾ
ಸೃಷ್ಟಿಕರ್ತಾ ಭೃತ್ಯಘನ್ನ ತುಷ್ಟಿನೀಡ್ವುದೈ ೨

ಸ್ಮರಿಸಿ ನರಸಿಂಹವಿಠಲನ ಭರದಿ ನಿನಗೆ ಮರೆ ಇಡುವೆನಾಗಿ
ದುರುಳ ನರರ ಸಂಗತಿಯನು ಮರಿಸಿ ಪೊರೆವುದೈ ೩

## ೨೦೧

ಎಂಥ ಕರುಣನಿಧಿಯೊ ನಮ್ಮನಂತ ರೂಪನು
ಎಂಥ ಕರುಣನಿಧಿಯೊ ನಮ್ಮನಂತ ರೂಪನು
ಕಂತುಪಿತನು ಸಂತತ ಭಕ್ತರ ಹೃದಯದಿ
ನಿಂತು ಕಾರ್ಯ ಮಾಡುತಿಹನು ಪ

ಏಕದಶಿಯ ನಿಶಿಯೊಳಾನು ತೋಕರುದರಕೆ
ಬೇಕಾದೀತು ನೀಡಿ ಹೊರಗೇಕ ಕಾಲಕೆ
ಕಡದಿದೇಕ ಸರ್ಪಪಾವಕೆ ಶೋಕಹರಣ ಹರಿಯ ನೆನೆ
ವಾ ಕಾಲಕೆ ಮನಕೆ ಆಗಿ ಏಕಮನದಿ ಹಾಡುತಿರಲು
ಶ್ರೀಕರನೆನಕೈಯ ಪಿಡಿದಾ ೧

ಕಡಲಶಯನನನುದಿನದೊಳು ಬಿಡದೆ ಭಜಿಸುತಾ
ಕಡಲ ಮಗಳ ಕರುಣವಿಲ್ಲದೆ ಬಡವನೆನಿಸುತಾ
ಇಡಲು ಹೆಜ್ಜೆ ಮಡದಿಯೆನ್ನನೊಡಸಿ ನುತಿಸುತಾ
ಸಡಗರ ದಿಗ್ವಿಜಯರಾಮ ನುಡಿಯವಿಡಿದ ಧ್ಯಾನತೀರ್ಥ
ರೊಡನೆ ಕಾಣಲು ಪಿಡಿದು ಮುದ್ರೆ ತೊಡಸೊ
ಮನದಿ ನಲಿವ ಹರಿಯು ೨

ಹರಿಗುರುಗಳ ಕರುಣದಿಂದ ಕಾಲ ಕಳೆಯುತಾ
ಇರಲು ಕಾಯಕೆ ವ್ಯಾಧಿ ತೊಡರಿ ಬಾಧೆಗೊಳಿಸುತಾ

ಹರಿ ಪೂಜೆಗೆ ಪರಿವ ಮನವ ಕಟ್ಟುಮಾಡುತ
ಹರಿಯ ಧ್ಯಾನದರಿವು ಹಾರಿ ಉರುಳುತಿರಲು ಧರೆಯ ಮೇಲೆ
ಕರುಣದಿ ನರಸಿಂಹವಿಠಲ ದಣುವನಳಿದು ತನುವ ಪೊರೆದಾ ೩

## ೨೦೨

ಗೀರ್ವಾಣಗೆ ಚಿಂತೆಯ ಬಿಡಿಸಲಿ ಎಂದು
ಚಿಂತಿಪೆನೊಂದೊಂದು
ತಂತ್ರಗಳನು ತದನಂತ ಧ್ಯಾನದಿಂ ಕಂತುಪಿತಗೆ
ನಾನಿಂತು ಬೇಡುವೆನು ಪ

ನರಜನ್ಮಕೆ ಬರುವುದು ತಾ ದುರ್ಲಭವು
ವರಕುಲ ದುರ್ಮಿಳವು ದೊರೆವುದೆ ಭಾಗ್ಯವು
ಧರೆಯೊಳು ಬಂದೀ ಗುರುಕುಲದೊಳು ಪುಟ್ಟಿ
ಗುರುವರಪೂಜ್ಯ ಪರಾತ್ಮನ ಪೂಜಿಪೆ ೧

ನಿಜರೂಪ ತೋರಿದಿ ಪ್ರಲ್ಹಾದನಿಗೆ
ಗಜವರನೆನಹೀಗೆ
ವಿಜಯನ ರಾಣಿಗೆ ದ್ರುಪದಾತ್ಮಜೆಗೆ
ಭಜಕರ ನಿಚಯಕ್ಕೆ
ಕುಜಪ್ರದ ಮೂರ್ತಿಗೆ
ಅಜರಾಮರಿಗೆ ನಿಜಪದ ತೋರೆಂದು ಭಜಿಸಿ ಬೇಡುವೆನು ೨

ಗಂಗೋದಕದೊಳು ಮೀಯಲು ಪಾವನವು
ಮಂಗಲ ತುಲಸೀಯು
ಸಿಂಗಾರದೊಳಧಿಕಾಚ್ಯುತ ಭೂಷಣೆಯು
ನಿನ್ನಾದೇ ವರವು
ಬಂಧುರದೇಹವ ತಾಳಿದೆನಗೆ ನೀ
ಸಂಗಸುಖವನೀಯೋ ನರಸಿಂಹವಿಠಲ ೩

## ೨೦೩

ಚಿಂತೆ ಬಿಡ್ಡಲಿಲ್ಲಾ ಎನ್ನಂತ ತಿಳಿಯಲಿಲ್ಲಾ
ಕಂತುಪಿತನ ಪಾದ ಕಾಣದೇ ವ್ಯರ್ಥ ಸತ್ತೆನಲ್ಲಾ ಪ

ನೀರಮೇಲಣಗುಳ್ಳೆ ಸಂಸಾರವೆಂಬುವ ಬಳ್ಳಿ
ತೋರಿ ಯಡಗೋದಿಲ್ಲ ಆಧಾರ ಗತಿಗೆ ಅಲ್ಲಿ
ನೀರಜದೆನೆ ನೀರಿನ ಸಂಗ
ಶೇರದಿರುವ ಪರಿ ಇರುತಿಹೆ ೧

ಹೆಣ್ಣು ಹೊನ್ನು ಮಣ್ಣು ಜೀವ
ಸಣ್ಣ ಮಾಡುವರಿನ್ನು ಉಣ್ಣುವ ಭವ ಪೆಣ್ಣು
ಫಣಿಗಣ್ಣಗೆ ಬಿಡದಿನ್ನು ಬೆಣ್ಣೆ ಜಲವ ಉಣ್ಣದ ಪರಿ
ಕುನ್ನಿ ವಿಷಯಗಣ್ಣಿಸದಿಹೇ ೨

ಶುಭಗುಣಗಣ ಹೃದಯ ಎನಗಭಯವೀಯೋ ಸದಯಾ
ಪ್ರಭು ನರಸಿಂಹ ವಿಠಲಯ್ಯಾ ನಿನ-
ಗಭಿನಮಿಸುವೆನಯ್ಯಾ ಸುಭಗ ನಿನ್ನ ಪಿಡಿದೆನಯ್ಯಾ
ಶುಭಕರ ಸಿರಿಮೊಗ ತೋರಯ್ಯಾ ೩

## ೨೦೪

ತಪ್ಪಲಿಲ್ಲ ನೀನು ಬಂದೂ
ತಪ್ಪಲಿಲ್ಲ ನಿನಗೆ ನೈವಿದ್ಯವಿಡಲಿಕ್ಕೆ ತಪ್ಪಲಿಲ್ಲ ಪ

ಅಪ್ಪ ನೀನು ಜಗದಪ್ಪನೆಂದರಿದು
ತಪ್ಪದೆ ನೀನಿತ್ತುದನ್ನೆ ಒಪ್ಪಿಸುವೆನು ೧

ಹೊಳೆಯ ನೀರು ಹೊಳೆಗರ್ಪಿಸವಂದದಿ
ಒಲಿದೆನಗಿತ್ತುದೆ ಸಲಿಸುವೆ ನಿನಗೆ ೨

ಅಣುರೇಣು ತೃಣಕಾಷ್ಠ ವ್ಯಾಪ್ತನು ನೀನು
ನಿನಗಲ್ಲದರಿಯೆ ಅನ್ಯರಿಗುಂಟೆ ಅರ್ಪಣ ೩

ನೀನಿತ್ತುದಲ್ಲೆ ಶ್ರೀಹರಿ ಹಣ ಹೊನ್ನು
ಏನೆನ್ನ ಗೌರವ ನಿನ್ನದು ನಿನಗೆ ೪

ಅಲ್ಪವರ್ಪಿಸೆ ನೀನಲ್ಪನೀವಿ[?]
ಕಲ್ಪತರುವಿನೊಲು ನರಸಿಂಹವಿಠ್ಠಲಾ ೫

## ೨೦೫

ತಾಳಲಾರೆನೆ ಜಗದಿ ಬಾಳಲಾರೆನೆ
ನಾಗೇಶಾಂಗಶಯನನ ಸುಖಭೋಗ ಪ

ಎಂದಿಗೆ ಆಗದಿರ್ದೊಡೆ
ತಾಳಲಾರೆನೆ ಜಗದಿ ಬಾಳಲಾರೆನೆ ಅ.ಪ

ಸವತಿ ರುಗ್ಮಿಣಿ ಭವನದಿ ಮು
ದವನೆ ತಾ ಮರೆತು ಕುಳಿತಾ ೧

ಇಂದಿರೇಶ ನಂದಧೀಶ
ಮಂದಿರದೀಗ ಬಾರದಿರಲು ೨

ನರಸಿಂಹ ವಿಠಲನೀಗ
ಭರದಿ ಮೊಗವ ತೋರದಿರಲು ೩

## ೨೦೬

ದಾಸನಾದೆನು ಶ್ರೀಶ ದಾಸನಾದೆನು
ವಾಸುದೇವನಂಘ್ರಿ ಪಿಡಿದು
ಹೇಸಿ ವಿಷಯ ಸುಖವನಳಿದು
ದಾಸನಾದೆನು ಶ್ರೀಶ ದಾಸನಾದೆನು ಪ

ನೀರ ಪೊಕ್ಕು ಭಾರ ಪೊತ್ತು ಕೋರೆಯಿಂದಲಿಳಿಯ ಪಿಡಿದು
ಘೋರ ರೂಪವನ್ನು ತಾಳ್ದ ನಾರಸಿಂಹನನ್ನು ನುತಿಪ ೧

ತಿರಿದು ನೋಡಿ ಪರಶುವಿಡಿದು ಭರದಿ ಪತ್ತು ತಲೆಯನಳಿದು
ಮರಳು ಕಂಸನನ್ನೆ ತುಳಿದ ವರದ ಕೃಷ್ಣನನ್ನೆ ಭಜಿಪ ದಾಸ ೨

ಹುಟ್ಟು ರೂಪವನ್ನೆ ತೋರಿ ಪಟ್ಟಕುದಿರೆಯೇರಿ ಕುಳಿತ
ದಿಟ್ಟ ಶ್ರೀ ನರಸಿಂಹ ವಿಠ್ಠಲನ್ನ ಪಾಡುವಂಥ ದಾಸ ೩

## ೨೦೭

ದಾಸನು ನಾ ನಿನ್ನಯ ಬೇಸರಿಸದ ಸೇವಾ
ವಾಸುದೇವನೆ ಮಾಡುವ ಮನವಾ
ವಾಸುಕಿಶಯನ ನೀ ನೀಡು ದೃಢವಾ ಪ

ಭಾಸುರಾಂಗಿಯ ಶ್ರೀಶನೆ ಒಡ
ದಾಸನ ಸೇವೆಯು ಮನಕ್ಯಾಂಗೆ ಬಂತು
ಶ್ರೀಶನ ಕೌಸ್ತುಭಕೆ ಆಶೆ ತಂತು ಅ.ಪ.

ಅನುಗಾಲದ ನಿನ್ನ ನಾಮದ ಸ್ಮರಣೆಯಾ
ಮನಸಿಜ ಪಿತಗೆ ಮೆಚ್ಚು ಬಾ
ಧ್ಯಾನ ಕೇಳಲು ಕಿವಿ ನಿಮಿರಿಸಿದಾ
ಘನ ಪ್ರಲ್ಹಾದನ ಸ್ಮರಣೆಗೆ ನಿಂತಿರ್ದಾ-
ಘನ ಸಂಪ್ರೀತನ ಎನ್ನೊಳ್ಯಾಂಗ ಕರುಣಿಸಿದಾ
ಮೇಣ್ ಕರಣದಿಂದ ಗಾಯನ ಎನ್ನಯ ಕಾಯಜ ಪಿತಾ
ನಿನಗೆ ಶ್ರಾವ್ಯವಾದುದು ಅರಿಯೆನು ನಾ ೧

ಮೇಣ್ ಪ್ರೀಯವಾದುದು ಹರಿಯೇ ಸುರ
ಮಾನಿಯೆ ಮಾಯೆಯ ಹರಿದು ರಕ್ಷಿಸೇಯಾ
ಗಾನಗೇಯನೆ ಮಮ ಗಾಯನವೆಂತು ಶ್ರಾವ್ಯಾ
ನಿನ್ನ ಮನಕಾನಂದವಾಗುವುದಯ್ಯಾ ೨

ಮತಿವಂತನೆ ನೀ ಮಾಡುವ ಹರಿಪೂಜೆ
ಚಿತ್ತಜಪಿತ ಹರಿಗಾಯ್ತು ಕೇಳ್ ಮುದದಿ ಹೃದಯ ತುಂಬೀತು
ಅತಿ ಮಾನಿನಿಯೆ ವಿಧಿಪೂಜಿತನಿಗೆ ಸರಿ
ಪಾತೆನ್ನ ಪೂಜೆಯಾಯ್ತು ಶ್ರೀ-
ಪತಿ ಶ್ರೀಹರಿಯ ಮನಕೆ ಬಂದೀತು ೩

ಮಾನವ ನಿನ್ನಯ ಹರಿಧ್ಯಾನವ ರಮಾಧ-
ವನು ತಾ ಕೈಕೊಂಡಾ
ತನ್ನ ಹೃದಯಾರವಿಂದದೆಡೆಗೆ ಸೆಳೆಕೊಂಡಾ
ಮುನಿಶುಕ ಮುಖ್ಯರ ಧ್ರುವಾದಿ ಭಕ್ತರಾ
ಮನಗೊಂಡ ಹರಿಯೆನ್ನ ಧ್ಯಾನಕಿಂಬುಗೊಂಡಾ
ಮನದೊಳಗೆಂತು ಆತುಕೊಂಡಾ ೪

ಪುರುಷೋತ್ತಮ ಹರಿ ಪರಮ ದಯಾರ್ಣವ
ಕರುಣದಿ ನಿನ್ನ ಕೈಪಿಡಿದಾ ನಿಜದಾಸನೆಂದೊಡಬಡಿದಾ
ವರಮಹಾಲಕುಮಿಯೆ ಸಿರಿಹರಿಸತಿಯೆ
ನರಸಿಂಹವಿಠಲನ ರಾಣಿಯೆ ಅನುದಿನ ಎನ್ನ ಮನದಿ ನೆಲೆಸೆ ೫

## ೨೦೮

ದೋಷ ದೂರಿಸೈಯ್ಯಾ ಎನಗೆ ನೀ
ತೋಷವೀವುದಯ್ಯಾ ಪ

ಆಸವ ಶ್ರೀತುಲಸೀವಾಸನಿಲಯ ಸ-
ರ್ವೇಶಹರಿಯ ದುರ್ವಾಸ ವಿಠಲರಾಯ ಅ.ಪ.

ರಾಘವ ರಘುಕುಲ ಸೋಮನ ಸದಯ ಸ-
ರ್ವಾಘ ಹರಿದ ನಿಖಿಳಾಗಮಗಳೊಡೆಯ ೧

ಯಾದವ ಯದುಕುಲ ತಿಲಕಾವ್ಯಯ ಮಧು-
ಸೂದನ ತ್ರಿದಶನು ವೇದ್ಯದಾಸ ವಂದ್ಯಾ ೨

ನರಹರಿಕರುಣಾರ್ಣವ ಶರಣರ ಗುರು
ಕರುಣವಿರಿಸು ನರಸಿಂಹವಿಠಲರಾಯ ೩

## ೨೦೯

ನಿನ್ನ ಧ್ಯಾನವ ಕೊಡು ಎನ್ನ ಧನ್ಯನ ಮಾಡು
ಚೆನ್ನ ಶ್ರೀ ಶೇಷಾದ್ರಿ ಸನ್ನಿವಾಸಾ ಪ

ಭೀಷಣವಾಗಿಹ ಭವಸಾಗರದೊಳು
ನಾಶಗೊಳಿಪುವರು ನೆಗಳಿಗಳು
ಬೀಸುವವನುದಿನ ಮೂರು ಘಾಳಿಗಳು
ಈ ಸಂಖ್ಯಾಂಗ ಕೈಪಿಡಿಯೋ ಕೃಪಾಳು ೧

ಭವವೆಂಬ ಕಿಚ್ಚನ್ನ ಸಹಿಸುವ ಪರಿಯೇನೋ
ಯುವತೀ ವಿಷಯ ಸುಖಲುಬ್ಧನಾಗಿಹೆನೋ
ಹವ್ಯವಾಹನನೆನ್ನನಾಡು ಮಾಡಿದೆಯೇನೋ
ಪವನನ್ನೆಯಾತ್ಪತ್ಪದಾಪದ್ಮ ಭೃಂಗನೋ ೨

ಪರಿಪರಿ ದುರಿತಂಗಳಿಂದ ಮನದೆಡೆಯೊಳು
ಹರಿಸೇವಾರ್ಚನೆಗಳಿಗೆ ಅನುವಿಲ್ಲವು
ಪರಮ ಭಾಗವತರ ಜರೆವ ಖಳ ಜನರಾ
ನೆರೆಯಿರದಂತೆ ಮಾಡೊ ನರಸಿಂಹವಿಠ್ಠಲಾ ೩

## ೨೧೦

### (ರುದ್ರದೇವರಿಗೆ ಮೊರೆ)

ನೀಗಿದೆನು ಸಂಸಾರ ಧನ್ಯಾಳಾದೆ
ಮೂಗಣ್ಣ ತಾನೆ ಎನ್ನ ಕೈಯ ಪಿಡಿದಾ ಪ

ರೋಗ ಪರಿದಿತು ಎನಗೆ ಈಗ್ಯಾಕೆ ಔಷಧವು
ಜಾಗು ಮಾಡದೆ ಕಾವೋ ದೇವನಿರಲು

ಭೋಗಿ ಭೂಷಣನು ಭವ ಸಾಗರವ ದಾಟಿಸಿ
ಈಗಲಿಯ ಭೂಮಿಗೆನ್ನಾಮ ಹಮನ [?] ತಪ್ಪಿಸಲಿ ೧

ಬಳಲಿದೆನು ಸಂಸಾರದಳವು ಕಾಣದೆ ನಾನು
ಮುಳುಮುಳುಗಿ ಭವ ದುಃಖ ಶರಧಿಯೊಳಗೆ
ಉಳುಹುವರ ದಾರಿಗಣದೆ ಹರನ ಮೊರೆಯಾಗಲು
ನೆಲಸಿದನು ಕರುಣಾಳು ಎನ್ನಯ ಮನದೀ ೨

ನೀಲಕಂಠಗೆ ಜಯ ಫಾಲನೇತ್ರನೆ ಜಯ
ಮಾಲತೀಧವ ಜಯ ವಂದಿಸುವೆ ಶಿರವಾ
ಮೇಲು ನರಸಿಂಹವಿಠಲನಾಣೆ ಬೇಡುವೆ
ವ್ಯಾಲ ಭೂಷಣ ಮನ್ಮನಾಲಯದಿ ನಿ ನೆಲಸು ೩

## ೨೧೧

ಪಾದಾವ ಕಂಡೆ ಕೇಶವ ಪಾದಾವ ಕಂಡೆ ಪ

ಇಷ್ಟು ದಿನ ಕಷ್ಟಬಟ್ಟು ಶಿಷ್ಟ ಹೆಂಡತಿಯ ನೀಗಿ
ಭ್ರಷ್ಟ ಮನಕೆ ತುಷ್ಟಿ ಇಲ್ಲದೆ
ಇಷ್ಟ ಪುತ್ರರ ಕೂಡಿ ಬಂದು ಪಾದಾವ ಕಂಡೆ ೧

ಬಡಲಾರದ ಭವಣೆ ಬಿಟ್ಟು
ಕಡುಪಾಪಿ ಎಂದೆನಿಸಿಕೊಂಡು
ಬಡತನದಲ್ಲೆ ಬಾಳಿಕೊಂಡು
ಅಡಿಗಡಿಗೆ ನಿನ್ನನ್ನೆ ನೆನೆಯುತ ಪಾದಾವ ಕಂಡೆ ೨

ಸರಿಬಂದದ್ದು ನೀನೇ ಮಾಡಿದಿ
ಮರೆಯೆ ಹರಿ ನಿನ್ನುಪಕಾರ
ಭರದಿ ಎನ್ನ ಕೈಯ ಪಿಡಿದು
ಪೊರೆಯಯ್ಯ ನರಸಿಂಹ ವಿಠಲ ಪಾದಾವ ಕಂಡೆ ೩

## ೨೧೨

ಷಂಡನಾದೆನು ನಾನು ಭಂಡ ಮನುಜಾ
ಕಂಡವರಲ್ಲಿಯುಂಡು ಎಂಜಲವನು ಪ

ಪುಂಡರೀಕಾಕ್ಷ ಶ್ರೀ ಕೃಷ್ಣಗರ್ಪಿಸದೆಡೆ-
ಯುಂಡರದು ಬುಧರರಿವರೆಂಜಲೆಂದು
ತುಂಡ ಜನರಿಂಧನ್ನ ಮುದ್ದು ಮೆರೆದರು ಕೊಬ್ಬಿ
ಕಂಡಿವರೊಳಾದರದಿ ಸವಿಯಗೊಂಡನು ದೇವಾ ೧

ಲಿಂಗಭವನ್ನೈಯ್ಯ ನಿನ್ನೊಲಿಮೆ ಮರೆಯನು ನಾನು
ಮಂಗಳಾಂಗಿಯ ಮೊರೆ ಕೇಳ್ದು ಭರದಿ
ಭಂಗ ಬಹುದೆಂದು ಕಾನನದಿ ಎಂಜಲನುಂಡು
ಅಂಗರಕ್ಷಕನಾಗಿ ಪಾಂಡವರ ಪೊರೆದಿ ಧೊರಿಯೆ ೨

ಸರಸಿಜಾಕ್ಷನೆ ನಿನ್ನ ಕರುಣಪಾತ್ರನು ನಾನು
ಅರಿಯದುಡಿದನು ತೀಕ್ಷಮಿಪುದೀಗ (?)
ಸುರನಿರಲಿ ನರನಿರಲಿ ಪತಿತನಾದವನಿರಲಿ
ಸರಿಯಾಗಿ ಕರುಣಿಸುವಿ ನರಸಿಂಹವಿಠಲ ೩

## ೨೧೩

ಬಾರೋ ನಲಿದಾಡೋ ಜಿಹ್ವೆಯಲಿ ಮೂರಧಿಕಾರೊಡೆಯನೆ
ಬಾರೋ ನಲಿದಾಡೋ ಜಿಹ್ವೆಯಲಿ ಪ

ದಾಸಾ ಬಹು ಮೋಸಕ್ಕೊಳಗಾಗಿಹೆನು ಶ್ರೀಶಾ ಕರಪಿಡಿಯೆನ್ನ
ದೋಷ ಮಹದಾಶಾ ವಹಿಸಿರುವೇನು ಘಾಸಿಯಾದೇನು
ಶ್ರೀಶ ನಿನ್ನಲಿ ಮನ ಮಾಸದಂದಲಿಡು ಈಸುವಂದದಿ
ಮಾಡೋ ಕರುಣಾರ್ಣವದಿ
ಈಶಾ ಘನವೇಷಾ ಬಹುತೋಷ ದಾಸನ ಮಾಡಿಕೊ ಎನ್ನ ೧

ಕಂದೀ ನಾ ಕುಂದೀ ಗೃಹದೊಳಗೆ ಮಂದಿಯಾ ಶೇರಿದೆ
ನೊಂದೇ ಬಹು ಬೆಂದೇ ಮನದೊಳಗೆ ಬಂಧನದೊಳು ಶಿಲ್ಕಿ
ಸುಂದರ ಮೂರುತಿ ಸಂದಣಿಯದೆ ನಾ ಹೊಂದಿದೆನಿನಭವ ಭವ
ಬಂಧನ ಬಿಡಿಸೆಂದು ಬಂದೂ ನೀನೆಂದೂ
ನಾಯಿಂದೂ ದ್ವಂದ್ವಾಪದವಿಡಿದಿದೆ ೨

ಘೋರಾ ನಿಸ್ಸಾರ ಭವದೊಳಗೆ ದಾರಿಗಾಣೆನು
ಮಾರಾ ಬಹುದೀ ರಾಮನದೊಳಗೆ ಶೇರಿ ಕುಣಿವಾನು
ಮಾರಜನಕ ನಿನ್ ಹಾರ್ರೈಶನುದಿನ ಶೇರಿ ಭಜಿಸಿ ನಿನ್ನ
ನರಸಿಂಹವಿಠ್ಠಲ ಸಾರಿ ನಿನ ಕೋರಿ ಪದಶೇರಿ ಆರಾಧಿಸುವೀಗಳೆ ೩

## ೨೧೪

ಭಕ್ತನ್ನ ಮಾಡಿಕೊ ಎನ್ನಾ ನಿಜ ಭಕ್ತನಾಗಿ ನಿನ್ನ
ಭಕ್ತನ್ನ ಮಾಡಿಕೋ ಎನ್ನಾ ಪ

ಸಾರೆ ಕೀಚಕ ಬೇಡ ಓಡಿ ಅದು [?]
ಪಾರಿ ಸಿಡಿವ ಪರಿಜಾಲದಿ ಕೂಡಿ
ಆಡು ಆಗದೆನ್ನ ಕಾಡಿ ಮತ್ತೆ
ಮೂರು ಮಡುವಿನೊಳು ನೋಳ್ವರು ದೂಡಿ ಭಕ್ತನ್ನಾ ೧

ಘೃತ ಭಾಂಡವಿರೆ ನೊಣ ನೋಡಿ ಅಲ್ಲಿ
ಮೃತವಾಗುವ ಪರಿ ಭರದಿ ಈಸಾಡಿ
ಸತಿಸುತಯುತ ಭವನೋಡಿ ಅಲ್ಲಿ
ಮತಿಗೆಟ್ಟು ಮೋಹಿಸಿ ಬಿದ್ದೆನೊದ್ದಾಡಿ ೨

ಉರಿಯ ಕಾಣಲು ಶಿಶು ಐದಿ ತಾ
ಭರದಿಯದರ ಪರಿಯರಿವೋಲುನೊಯ್ದು
ಅರಿದೆ ವಿಷಯದುರಿ ಮೈಯ್ದು ಇನ್ನು
ನರಸಿಂಹ ವಿಠ್ಠಲ ನೀನೇ ಗತಿಯೆಂದೆ ಭಕ್ತನ್ನ ೩

## ೨೧೫

ಭ್ರಷ್ಟನಾದೆನಲ್ಲಾ ಶ್ರೀಹರಿ ಪೂಜೆ ಮಾಡಲಿಲ್ಲಾ
ಸೃಷ್ಟಿಗೀಶ ಕಡು ಕಷ್ಟವ ತೊಲಗಿಸಿ
ಶಿಷ್ಟದಾಗದೊಳು ನಿಷ್ಠೆಯಗೊಳಿಸಿದ ಪ

ದುಷ್ಟ ವಿಷಯ ಪಾದೋದಿ ಜಲದಿನಾ [?]
ಕಷ್ಟದಿಂದೀಸಿನೆಷ್ಟು ಹೈರಾಣಾದೆ ೧

ಸುತ ವ್ಯಾಮೋಹದಿ ಮತಿಯ ಶಿಲುಕಿ ಹರಿ
ಪಥವೆಂಬುದನ ಗತಿ ಗಹನಪ್ಪುದು ೨

ಶರಣವತ್ಸಲೆಂಬ ಬಿರುದನಾಂತ ಶ್ರೀ
ನರಸಿಂಹವಿಠ್ಠಲ ಪೊರೆ ಎನ್ನ ಕರುಣದಿ ೩

## ೨೧೬

ಮಂದಿರವೆಲ್ಲೆ ಹೇ ಲಲನೆ ಬಂಧನವೆಲ್ಲೆ ಪ

ಕಂದನಿಂದ ಮುಂದೆ ಮನೆತನವೆಂದು ನಾನು
ಅಂದು ಬಯಸಿದೆ
ಮುಂದೆ ಗತಿ ಇಂತೆಂದು ನಿನಗೆ ಇಂದು ಸುಗುಣನು
ಬಂದು ಪೇಳಿದಾ ೧

ಸೃಷ್ಟಿಗೊಡೆಯಾ ಶಿಷ್ಟವಿಜಯಾ ನಿಷ್ಠೆಯನ್ನೇ ಪೂರೈಸಿ
ಕಷ್ಟಹರನೆಂಬ ಬಿರುದನು ಆಂತು ಶ್ರೇಷ್ಠ ದೂತನ ಕಳುಹಿಕೊಟ್ಟನು ೨

ಜ್ಞಾನ ಬುದ್ಧಿಯನಿತ್ತು ಶ್ರೀ ಪವಮಾನಪಿತ ನರಸಿಂಹವಿಠಲನು
ಆ ನಾದಾತ್ಮಾ ಎಂಬ ಅಂಕಿತ ಪಡೆದು ಸಾನುರಾಗದಿ
ಕೊಟ್ಟು ಸಲಹುವಾ ೩

## ೨೧೭

ಯಾಕೆ ಬೇಕು ಜನ್ಮವಾದರು ಲೋಕನಾಥನೆ ಪ

ಜೋಕೆ ಮಾಡುತಲೆನ್ನ ಕಾಯದ
ನೌಕ ನಾಯಕ ನೀ ಕರುಣ ಬಿಡೆ ೧

ಮಾತೆ ಕರುಣದೊಳಾತ್ಮಜಗೆ ಸ್ತನವಿತ್ತು ಪೊರೆವಂತೆ
ಪ್ರೀತಿಯಲಿ ತವಜಾತನೆಂದು ಆತುರದಿ ನೀನಾದರಿಸದಿರೆ ೨

ವಾರಿಧರ ನೆರೆ ಚಾತಕಗೆ ನೀರಬಿಂದುವೀವಂತೆ
ಧೀರ ನರಸಿಂಹವಿಠಲನೆ ಕರುಣಾರಸವೆನಗೆ ಬೀರದಿರ್ದೊಡೆ ೩

## ೨೧೮

ವಿಠ್ಠಲ ಪಾಂಡುರಂಗ ಬಂದೆನೊ ನಿನ್ನ ಬಳಿಗೆ ನಾನು ಪ

ಹರಿಪೂಜೆ ಮರದಿಹುದು ಧರೆಯೊಳು ನರಪೂಜೆ ಪಿರಿದಿಹುದು
ಹರಿಜನ ಪರಿಯರೆದು ವಿಷಯಕೆ ಹರಿವುದು ಮನಸರಿದು
ದುರಿತ ಜಲಧಿಯೊಳು ನರಜಲಚರಂಗಳು
ಮರೆದು ನಿನ್ನ ಸದಾ ಸುರಿವವು ಭವಸುಖ ೧

ಒಡಲಿಗೆ ಇಡುತಿಹರು ಷಡುರಸದನ್ನ ಮಡದಿಸುತರು
ನುಡಿದುದೆ ಕೊಡುತಿಹರು ಪೊಡವಿಯೊಳ್ಪಡುಸುಖ ಬಡುತಿಹರು
ಉಡುವಲಿ ಉಣುವಲಿ ಕೊಡುವಲಿ
ವಡನೆ ಹರಿಗಿಡದೆ ಜಡಮತಿಯೆನಿಪರು ೨

ಸೊಕ್ಕು ಸೋಂಕಿತೆನಗೆ ಕಕ್ಕಸಬಡುತಿಹೆನಡಿಗಡಿಗೆ
ಮಕ್ಕಳ ಮೋಹದೊಳಿಗೆ ಶಿಕ್ಕಿ ನಾ ಬಳಲುವೆ ಕಡೆವರೆಗೆ
ಧಿಕ್ಕಾರವೀ ಜನ್ಮ ನರಸಿಂಹ ವಿಠಲ
ಸೊಕ್ಕದೇ ಭವದೊಳು ನೆಕ್ಕದೆ ನಿನ್ನ ನಾಮ ೩

## ೨೧೯

ಸುಂದರ ವದನಾ ಸುಂದರ ನಯನಾ
ಸುಂದರಾನನಾ ಸುಂದರವಾಣಿಯೇ ಪ

ಬಂದಿಹ ಮಹಾರೋಗವನು ಕಳೆವುದೀಗಳೇ
ಸುಂದರ ತನು ನಿನಗಿದೇನು ಅಸದಳವೇ
ಅಂತು ನಿನ್ನನೆ ಬೇಡುವೆನೀಗಳೇ
ರಂಜಕ ವಿಶ್ವ ವಿಶಾಲಾ
ಇಂದೇ ನೆಲಸೆನ್ನಲಿ ನರಸಿಂಹವಿಠ್ಠಲಾ ೧

## ೨೨೦

ಹ್ಯಾಗೆ ಮರೆತೆಯೋ ತಾಯಿ ಎನ್ನ ಶ್ರೀಹರೆ
ಜಾಗು ಮಾಡದೆ ನಾಗಶಯನ
ಬ್ಯಾಗ ಬಂದೆನ್ನೀಗಳೆ ಪೊರೆ ಪ

ನೀರಜಭವ ನಿರ್ಜರ ವಂದಿತ
ಚೋರಾ ಸುರಸ್ತೋಮ ಮಥನ
ಶೇರಿಗೆ ನಿನ್ನಂಘ್ರಿಗಳಲಿ ಘೋರ ದುರಿತ
ಹೀರಿ ಕಾಯಿ ಎನ್ನನಾ ಮುರಾರಿ ೧

ಸನ್ನುತ ನಿನ್ನ ನಾಮ ಪಾಡುವೆ-
ನೆನ್ನ ವಿಷಯನ್ಹಾರೈಸದೆ ಪಾದವೆ
ಎನಗೆ ಗತಿಯೋ ಕಾಯಿ ನೀನೇ
ಅನ್ಯರನೇಕೆ ಹುಡುಕಲಿ ಸುರಕಾಮಧೇನು ೨

ಸೊರಗಿ ಮರುಗಿ ಕೊರಗಿ ಕರಗಿ
ವಿರಸತಾಗಿ ಹೋದೆನಾ ಸಂಸಾರದಿ
ಭರದಿ ನಿನ್ನ ಮರೆಹೊಕ್ಕೆನು ಮುದದಿ
ನರಸಿಂಹವಿಠ್ಠಲ ಕಾಯೋ ಅನಾದಿ ೩

## ೨೨೧

ಹಿಂದೂ ದಾಸ ಇಂದೂ ದಾಸ ಮುಂದೆ ಎಂದೆಂದಿಗೂ ಅರ-
ವಿಂದನಾಭ ವಿಠಲನೆ ಗತಿಯೋ ನೀ ಅವನ ದಾಸ ಪ

ಬಂಧನದಿ ಬಳಲಿದಿ ಬಂದ ದುಃಖವ ನಾಶಿಸಿ
ಹೊಂದಿದಿ ಶ್ರೀ ಹರಿಪಾದ ದಾಸ್ಯವಾ ಮಂದಿರವನ್ನಗಲಿದಿ
ಮೂತಿ ಯಾಕೋ ಭವದ ಭೀತಿ ೧

ಹುಟ್ಟಿದಿ ಹರಿಮತದಿ ಇಟ್ಟ ಹರಿಚಿನ್ಹೆಫಾಲದಿ
ಮುಟ್ಟಿ ಭಜಿಸೆಲೋ ದಿಟ್ಟ ಕೃಷ್ಣನ್ನಾ
ಇಟ್ಟ ಕಲ್ಲಮೇಲೆ ಪಾದವಿಟ್ಟ ವಿಠ್ಠಲನು ಪೊರೆವಾ ೨

ಶಿರಿವರ ನರಸಿಂಹವಿಠ್ಠಲ ಕರುಣದಿ ಪೇಳಿದಾ ನಿನಗೆ
ಮರೆಯದೆ ಸೇವಿಸೋ ಹರಿಮೂರ್ತಿಯಾ
ಶರಣವತ್ಸಲ ಮೂರ್ತಿ ನಿರುತ ಸೇವೆಯ ಕೈಕೊಳ್ಳುವಾ ೩

## ೨೨೨

### (ಐ) ಲೋಕನೀತಿ

ಇಳೆಯೊಳಗೆ ದೇಹತಾಳಿ ಬಂದೆಲ್ಲಾ ತಮ್ಮಾ
ಗಳಸಿ ಮನೆ ಹೆಂಡಿರು ಮಕ್ಕಳಿಟ್ಟಿಲ್ಲಾ
ಬಲಿಸಿ ಹಣ ಹೊನ್ನು ಹೂಳಿಟ್ಟಿಲ್ಲಾ ತಮ್ಮಾ
ಒಲಿದು ಉಂಡಿ ವಿಷಯ ಸುಖವಾ ಪೇಳಲ್ಲಾ ೧

ಮರಕೆ ಗೊಂಬೆಗಳ ತೆರದಿ ಮರಿಗಳೂ ತಮ್ಮಾ
ತೆರಪೀರಾದೆ ಜನಿಸಿದಾವು ಸುತ್ತಲು
ಪರಿಪರಿಯ ಸುಖದುಃಖ ಪಗಲಿರುಳು ತಮ್ಮಾ
ಇರದೆಯೊದಗಿ ದಣಿಸಿದಾವು ನಿನ್ನ ಮರುಳೆ ೨

ಯಮನವರು ಬರುವದು ಮರೆತೇಯ ತಮ್ಮಾ
ರಮಣೀ ಮೋಹಾ ಕೇಳಿರು ನೀನರಿಯಾ

ಅಮಿತ ಧನ ಬಳಗ ಇನ್ನೆಲ್ಲಿಯ್ಯಾ ತಮ್ಮಾ
ನಮೋ ನರಸಿಂಹವಿಠಲ ಎನ್ನಯ್ಯ ೩

## ೨೨೩

ಆದಿಕೇಶವನ ಪಾಡಿ ಸುಜನರು ಮೋದದಿಂದಲಿ ಕೂಡಿ
ಸಾದರದಲಿ ಹರಿಪೂಜೆಯನು ಮಾಡಿ ತವಿಸಿರಿ ಭವ ಬೇಡಿ ಪ

ಅಸ್ಥಿರ ಸಂಸಾರ ಮೇಲು ದುಃಖಪಾರವಾರ ಇಲ್ಲಿ ವಸ್ತಿ ತ್ರಿವಾಸರಾ
ಸ್ವಸ್ಥ ಚಿತ್ತದಿಂದ ಹರಿಯ ನೆನೆಯದಾಗ ಬ್ಯಾಡಿರಿ ಭೂಭಾರ ೧

ನಾರುವ ದೇಹಕ್ಕೆ ಈ ಪರಿ ಹೋರಾಡುವದ್ಯಾಕೆ ಬಿಡದೆ
ಜಾರಿ ಬೀಳುವುದಕ್ಕೆ
ನೀರೊಳು ತೊಳೆದು ಪರಿಮಳತೊಡೆ ಮಲಸೋರದೆ ಪೇಳಿದರೆ ೨

ಮಡದಿ ಮಕ್ಕಳು ಬಂದು ನಿನ್ನ ಕಡೆ ಹಾಸೋಕೆ ಬಂದು ನಿಮಗೆ
ಕಡುತಾಪವು ಮುಂದು ಜಡಮತಿಯಿಂದಲಿ
ಕೆಡಬ್ಯಾಡಿರಿ ಹರಿಪರಮ ದಯಾಸಿಂಧು ೩

ಎಷ್ಟು ಪೇಳಲಿ ನಾನು ನಿಮ್ಮ ಇಷ್ಟ ಮಿತ್ರರೇನು
ಸಂಗಡ ಬಂದು ರಕ್ಷಿಪರೇನು
ಕಷ್ಟಬಟ್ಟು ನೀವು ಘಳಿಸಿ ಹೂಳಿದರೆ ಹುಟ್ಟಿದ್ದಾಯಿತೇನು ೪

ಜಗದೊಳು ನೀ ಕೆಟ್ಟಿ ಮನವಾ ವಿಷಯಕ್ಕೆ ಹರಿ ಬಿಟ್ಟು
ನಗೆಗೇಡು ನಿಮ್ಮ ಬಟ್ಟಿ
ತಗಲು ಮೋಸಗಳಿಗೆ ಹಾದಿಯ ಕೊಟ್ಟಿ ನಿಮ್ಮದಾಯ್ತು
ಮೂರಾಬಟ್ಟಿ ೫

ಬೆಳೆದೀತು ನಿಮ್ಮ ಕಾಯಾ ಅದರೊಳು ತುಂಬಿತು
ಅರಮಾಯಾ ಇನ್ನು
ಕಳದೀತು ನಿಮ್ಮ ಶ್ರೇಯ ತೊಳಲಿ ಬಳಲಿ ಬಲಿ ಬಿದ್ದ
ಕೀಚಕ ಪರಿ ಆದೀತು ನಿಮ್ಮ ಕಾಯಾ ೬

ಹುಟ್ಟಲಿಲ್ಲಾ ಮತಿಯು ನಿಮಗೆ ತಟ್ಟೀತು ಉಪಹತಿಯು
ಇದು ಘಟ್ಟಿಯೆ ಸಂಸ್ಕೃತಿಯು
ಬಿಟ್ಟಿಗಾರರು ನಿಮ್ಮ ಕಟ್ಟುವನಿತರೊಳು ಮುಟ್ಟಿ ಭಜಿಸೆ ಹರಿಯಾ ೭

ಹರಿಯೆ ಇತ್ತನಖಿಳಾ ಈ ಶಿರಿಸತಿ ಭೂ ಭೋಗಗಳಾ
ಮೇಲು ಸರಿಪರಿವಾರಗಳಾ
ನರಸಿಂಹವಿಠಲಗರ್ಪಿಸಿ ಸುಖಿಸುವ ನರವರ ಜನ್ಮವೇ ಸಫಲಾ ೮

## ೨೨೪

ಎಂಥಾದರು ಬಂದರು ಚಿಂತೇ ಇಲ್ಲಾ ಪಂಥವು ಸರಿಯಲ್ಲಾ ಪ

ಚಿಂತೆ ಎಂದೆಂಬುದೆ ಮನಸಿನ ರೋಗಾ ಸಂತಸ ಸಂತ್ಯಾಗ
ಎಂಥೆಂಥ ಮಿಂಚುವ ದೇಹವಿದೀಗ ಕೃಂತನ ವಿಧಿಭಾಗ
ಎಂತಲ್ಲಿ ನೆಲೆಸಿ ಹವಣಿತ ರೋಗಾ ಸಂತತ ಜಡ ಬೀಗಾ
ಅಂತವಿಲ್ಲದ ದೇಹಗೇಹದಿ ತೋರೆ ಕಂತುಪಿತನ ಪದದಾಸ
ನೀ ನೆನ್ನೊ ೧

ಹಿತಾಹಿತವೆಂದಿಗೂ ಕೈಶೇರಿಲ್ಲಾ ಕೃತಿಪತಿ ತಾ ಬಲ್ಲಾ
ಮತಿಗೆಟ್ಟು ಸತಿಯೇ ಗತಿಯೆಂದೆಲ್ಲಾ ಸುತಮೋಹ ಬಿಡಲಿಲ್ಲಾ
ಮಿತಿಮೀರಿ ಪಣ ಭಂಡಾರದೊಳೆಲ್ಲಾ ರತಸುಖರೆ ಡಿಲ್ಲಾ
ಅತಿವೇತಾ ಕೇಸರಿ ಸುಖಗುರಿ ಮುರಿಯಲು ಧೃತಿಗೆಟ್ಟು ಬಳಲುವ
ಸಂಗತಲ್ಯಾರು ತಿಳಿಯೋ ೨

ನೀರಿನ ಬುದ್ಬುದ ಪರಿಸಂಸಾರಾ ದುಃಖದ ಆಗಾರಾ
ಶ್ರೀರಾಮ ಮಂತ್ರದ ಸಾರಾ ನಿಜ ಸೌಖ್ಯದ ದ್ವಾರಾ
ಶೇರಿ ಹಣ ಹೊನ್ನು ಹೆಂಣ ವಿಚಾರಾ ಗಂಜಾಸಮ ತಾರಾ
ಮಾರನ್ನೈಯ್ಯನ ಶ್ರೀ ನರಸಿಂಹನ ಶೇರಿ ಭಜಿಸಿ
ನಿಜಸುಖವನು ಪಡೆಯೋ ೩

## ೨೨೫

ಎತ್ತಣ ಸಂಸ್ಕೃತಿ ಎಲ್ಲಿದೀ ಕಾಯಾ ಸುತ್ತಲೂ ಸಂಕಟವೋ
ಮತ್ತೆ ವೈರಿಗಳ ಮತ್ತೆರಡುಪಟಳ ಸುತ್ತೆ ಭೀತಿಮಯವೋ ಕೃಷ್ಣಾ ಪ

ಸುಂದರ ದೇಹವು ಬಂದುದು ಎಂದಾನಂದ ಭರಿತನಾಗಿ
ಬಂಧು ಬಳಗದ ಪೊಂದಿಕೆಯಿಂದಲಿ ಸಂದಣಿ ಹೆಚ್ಚಾಗಿ
ಚಂದದ ಮಂದಿರ ಕುಂದದ ಧನ ಸುಖದಿಂದ ಯುಕ್ತನಾಗಿ
ಬಂದೆಮದೂತರು ನಿಂದು ಯಳೆಯುವಾಗ
ಸುಂದರ ತನುವೆಲ್ಲಿ ಬಂಧು ಬಳಗವೆಲ್ಲಿ ೧

ಚತುರ ದೆಶೆಗಳಲಿ ಭರದಿ ಸಾಗುವವು ಗತಿಯ ಅರುಹು ಇಲ್ಲಾ
ಚತುರದ ಮೇಲೊಂದತಿ ಕ್ಲೇಶಗಳೀ ದೇಹ ಮುತ್ತಿದವಲ್ಲಾ
ಚತುರದೊಳುಣವಂದತಿ ತಾಪಗಳ್ಮಿತಿ ಮೀರಿ ಕಾಡಿದವಲಾ
ಚತುರಾನನ ಪಿತ ಗರಿಯಿಲ್ಲದನ್ನ ಹಿತರು ತೋರಲಿಲ್ಲಾ ೨

ಪರಿಪರಿ ವಿಷಯಗಳ ಮೆರೆವ ಶಿರಿಯ ಮೇಣರಿವರ್ಗಗಳೆರಗಿ
ಹರಿಯ ನೆನೆವ ಮನ ಕರವಳ ಹೊಯ್ದು ಬೆರಸಿ ಕಾಯವ ತೂಗಿ
ಮರದ ಮೇಲಿಂದ ಕರಬಿಟ್ಟ ತೆರದಂತೆ ಮೆರೆವ ದೇಹಕೆ ಆಗಿ
ನರಸಿಂಹವಿಠಲನ ಕರುಣೆ ಪಡೆಯದಲೆ ಕೊರಗಿ ಕರಗಿ
ಸೊರಗೀ ಕೃಷ್ಣಾ ೩

## ೨೨೬

ಎಲ್ಲಿಹನು ದೇವನೆಂದೆಲ್ಲು ಜನ ನುಡಿವರು
ಸಲ್ಲುವುದೆ ಆಲಿಸಲು ಬಲ್ಲಗೀ ನುಡಿಯು
ಇಲ್ಲೆಂದು ನುಡಿವರ್ಗೆ ಬಲ್ಲನಿತು ಪೇಳುವೆನು
ಪುಲ್ಲನಾಭನ ಚರಿತವಾ ಹಿತವಾ ಪ

ಕಲ್ಲಾಗಿ ಬಿದ್ದಿಪ್ಪಹಲ್ಯೆ ತಾ ಬಲ್ಲಳು
ಎಲ್ಲ ಜಗ ಪಾವನನ ಸುಳ್ಳೆನ್ನಬಹುದೇ

ಅಲ್ಲೆಂದರೀ ನುಡಿಗೆ ಹೊಲ್ಲ ಜಗವ ತುಂಬುವನು
ಕಲ್ಲು ಮುಳ್ಳನು ಉದರದಿ ಜವನಿ ೧

ತೋರೆಲವೊ ಹರಿಯನೆಂದೊದರಾಡೆ ರಕ್ಕಸನು
ಘೋರ ಕಂಭದಿ ತೋರೆ ಹಾರಿ ತಲ್ಷಣವು
ಘೋರ ರೂಪವ ತಾಳಿ ನಾರಸಿಂಹಾಖ್ಯದಿ
ಚೂರ ಮಾಡಿದವನನು ಪರನು ೨

ಧೇನಿಪರ ಮನದೊಳಗೆ ಸಾನುರಾಗದಿ ಹರಿಯು
ಸ್ಥಾನಗೊಳಿಪನು ಮನಕೆ ಆನಂದವೀವಾ
ದಾನವಾಂತಕ ಶ್ರೀ ನರಸಿಂಹವಿಠಲನು
ಆನತರ ನೆರೆ ಪೊರೆವನು ಬಿಡನು ೩

## ೨೨೭

ಏನು ರಾಗವ ಮಾಡಲ್ಯಾ ನಾನು ಬ್ಯಾಗನೆ
ಸಾನುರಾಗದಿ ಹರಿಯು ತಾನೇ ಮಾಡಿಸುವಾ ಪ

ದಾನವ ದ್ವಿಪ ವೃಂದ ಮಾನನದಿ ಕರ್ಚಿದ
ಮಾನನಿಧಿ ಕೇಸರಿಯೋ ಶ್ರೀಹರಿಯೋ ಅ.ಪ.

ಅಜ್ಞಾನ ತಮದೊಳಗೆ ಸುಜ್ಞಾನಿಗಳು ಬಳಲೆ
ತಜ್ಞಾನಪೂರ್ಣ ಸರ್ವಜ್ಞರವತರಿಸಿ
ಅಜ್ಞಾನದಿಂದ ಗತಿಯಕ್ಕುದೆಂದರುಹಿಸಿದ
ಸುಜ್ಞಾನ ದರ್ಪಣವೋ ಶ್ರೀ ಧನವೊ ೧

ಕರ್ಮದಿಂದಲೆ ಭಕ್ತಿ ವೈರಾಗ್ಯ ವಿಜ್ಞಾನ
ಧರ್ಮವರಿಯಲು ಮುಕ್ತಿಪಥಕೆ ಸೋಪಾನ
ಮರ್ಮವರಿಯದೆ ವಿಷಯ ಕಾನನದಿ ಚರಿಸುವ
ನರರಿಗೆ.... ಶ್ರೀವರನೊ ೨

ವನರುಹಭವಾಂಡದೊಳು ಕುನರ ಸಸಿಗಳು ಬೆಳೆದು
ಸುನರ ಕಮಲವು ತೋರದಂತೆ ಮುಸುಕೆ
ವನಜದಂದವ ತೋರೆ ನರಸಿಂಹವಿಠಲಾಖ್ಯ
ಮುನಿದು ಸದೆ ಬಡೆದಗದವೋ ಶ್ರೀ ಮುದವೊ ೩

## ೨೨೮

ಒಂದೆ ಮಾತನು ಕೇಳು ಒಂದೆ ನುಡಿಯ ಕೇಳು
ಒಂದಿಪೆ ನಿನ್ನ ನಾನಿಂದು ಮಂದರಧರ
ಚಂದದಿ ನೀತೆನಗಿಷ್ಟವರಾ ಪ

ದುರಿತ ತನ್ಮಯವಾಗಿ ಇರುತಿರ್ಪ ಭವದೊಳು
ಪರಿಪರಿ ಕಂಟಕ ಹೋರಿ ಹೋರಿಯು
ಹರಿನಾಮ ಮಂತ್ರವ ಮರೆಯದೆ ಜಪಿಸಲು
ಉರಿದರ ತಕ್ಷಣದೊಳು ಗಮಿಸುವವು ೧

ವ್ಯಾಧನೊರ್ವನು ಭವ ಬಾಧೆಗೆ ಶಿಲ್ಕಿ ತಾ
ಶೋಧಿಸುತಿರೆ ನರ ಬಾಧ್ಯವನು
ಆದಿಮುನಿಯು ರಾಮ ಬೋಧನೆ ಪೇಳಲು
ಬೂದಿಗೈದವಘರಾಶಿಗಳು ೨

ಸುರಗಣನಾಯಕ ನರಸಿಂಹವಿಠಲ ಪೊಗಲಳವೆ ನಿನ್ನ
ವರಲೀಲೆಯು ಮರೆಯದೆ ಪಿಡಿದಿಹೆ ನಿನ್ನಂಘ್ರಿಕಮಲವ
ನಿರುತದಿ ನೀಡೋ ನೀ ಸೇವೆಯನು ೩

## ೨೨೯

ಕಂಡ ಕಂಡದ್ದು ಅದು ಔಷಧವಲ್ಲವೋ
ಗಿಂಡಿ ಗಿಂಡೀದು ಅದು ತೀರ್ಥವಲ್ಲವೋ ಪ

ಮೂರು ವರ್ಗಂಗಳಿಗೆ ಆರು ವೈರಿಗಳು
ತೋರುತ್ತಿರುವರೆಂತೋ ಬೇರೆಯಾಗಿ ೧

ಈ ರೀತಿಯಿಲ್ಲದೆ ಬೇರೊಂದು ತಿಳಿವರೆ
ಮೂರು ವಿಧ ಬೇವರಿಗಾರು ಫಲಪ್ರದರು ೨

ಮಾರಜನಕ ಹರಿ ಪಾರ್ವತೀಧವರಿವರು
ಬೇರೆ ಎಂಬರಿತೆವೊ ಬಾರದೆ ಸರಿಯಾಗಿ ೩

ಇಳೆಯ ಮೇಲಿರುತಿಹ ಜಲಾಶಯಗಳು
ಬಳಿಕೆಗೋಸುಗ ತಾವಿಳದಿಹವಲ್ಲದೆ ೪

ನಳಿನನಾಭನ ಪೂಜಾಗಳಿಗೆ ಬಾಂಬೊಳೆಯ
ಮೈಲೆನಿಪದಲ್ಲದೆ ಮಿಕ್ಕಿಸಲು ಉಂಟೆ ೫

ಚಿತ್ತಶುದ್ಧಿಯನ್ನೈದಿ ಉತ್ತಮ ಜಲದಿ ಮಿಂದು
ಚಿತ್ತಜ್ಞನೈಯನ ಮಜ್ಜನಗೈಯಲು
ಹತ್ತಾವತಾರನ ಮತ್ತೆ ಪೂಜೆಯ ಗೈದು
ಉತ್ತಮ ಪದ ಸೇವಿಪುದೇ ತೀರ್ಥಾ ೬

ಶಿರಿವರ ಪದಜಲ ವರ ತುಲಸೀದಲ
ಬೆರೆಸಿ ಪಾವನ ಗೈಯೆ ಇರುವುದೆ ರೋಗವು
ಉರಗಶಯನ ಶ್ರೀ ನರಸಿಂಹ ವಿಠಲನು
ಪರಮ ವೈದ್ಯನು ತನ್ನ ಶರಣರಿಗೇ ೭

## ೨೩೦

ಕತ್ತೆಲ್ಲ ಕಳೆದೋತು ಜತ್ತೆಲ್ಲ ಬಿದ್ದೋತ್ತು
ಬತ್ತಲೆ ಬತ್ತಲೆ ಮನುಜ ಬತ್ತಲೆ ಬತ್ತಲೆ ಪ

ಹಣವು ಎನಗಿಲ್ಲಾ ಗುಣವು ಎನಗಿಲ್ಲ ಬತ್ತಲೆ ಬತ್ತಲೆ
ಮನುಜ ಬತ್ತಲೆ ಬತ್ತಲೆ
ನೋಡುವರೆನಗಿಲ್ಲಾ ಮಾಡುವರೆನಗಿಲ್ಲಾ ಬತ್ತಲೆ
ಬತ್ತಲೆ ಮನುಜ ಬತ್ತಲೆ ಬತ್ತಲೆ
ಕನಸೋ ಕನಸೆಲ್ಲಾ ಉಣಿಸೋ ಉಣಿಸೆಲ್ಲಾ ಬತ್ತಲೆ
ಬತ್ತಲೆ ಮನುಜ ಬತ್ತಲೆ ಬತ್ತಲೆ
ಮಾಯಾ ಮಾಯವೆಲ್ಲಾ ಪ್ರೀಯಾ ಪ್ರೀಯಾವೆಲ್ಲಾ
ಬತ್ತಲೆ ಬತ್ತಲೆ ಮನುಜ ಬತ್ತಲೆ ಬತ್ತಲೆ
ಮಕ್ಕಳು ಮಕ್ಕಳು ವಕ್ಕಲು ಒಕ್ಕಲು ಬತ್ತಲೆ ಬತ್ತಲೆ
ಮನುಜ ಬತ್ತಲೆ ಬತ್ತಲೆ
ಇದ್ದದ್ದು ಹೋಯಿತು ಬಿದ್ದದ್ದು ನೀಗಿತು ಬತ್ತಲೆ
ಬತ್ತಲೆ ಮನುಜ ಬತ್ತಲೆ ಬತ್ತಲೆ
ನರಸಿಂಹವಿಠಲನ ಕರುಣವೆ ಸ್ಥಿರವೆಲ್ಲಾ ಬತ್ತಲೆ ಬತ್ತಲೆ
ಮನುಜ ಬತ್ತಲೆ ಬತ್ತಲೆ

## ೨೩೧

ಕರ್ಮವೆ ನಿತ್ಯನಿರ್ಮಲ ಮೂರುತಿ ಇರುವನು ಎಲ್ಲೆ
ಧರ್ಮವರೀದೆ ಕರ್ಮ ಮಾಡಲು ಬರುವನವೆಲ್ಲೆ ಪ

ಹೆಣ್ಣು ಹೊನ್ನು ಮಣ್ಣು ಘಳಿಪುದಲ್ಲದೆ ಕರ್ಮ
ಕಣ್ಣು ಕರ್ಣ ಜಿಹ್ವೆಂಗಳು ಮಾಳ್ಪವು ಕರ್ಮ
ಉಣ್ಣುವುದುಡುವುದಲ್ಲದೆ ಪ್ರತಿನಿತ್ಯದ ಕರ್ಮ
ಅಣ್ಣನ್ಯಾರು ಸಂಪ್ರೇರಕ ತಿಳಿಯಲು ಧರ್ಮ ೧

ದೇಹ ತೊಳೆದಲಂಕಿರುಪುದು ಕರ್ಮ ವಲ್ಲವೆ
ಮೋಹಿಪ ಹೆಂಡತಿಯ ರಕ್ಷಣ ಕರ್ಮವಲ್ಲವೆ
ದೇಹ ಜಾತರನ್ನೋದುವುದು ತಮವಲ್ಲವೆ
ಊಹಿಸಿ ಹರಿಸೇವೆ ಇದೇ ಧರ್ಮವಲ್ಲವೇ ೨

ಅಂಗಕೆ ಶಿರಿಗಂಧಲೇಪನ ಕರ್ಮ ತಿಳಿಯಲಾ
ಸಂಗ ನಿಜಾರ್ಧಾಂಗಿಯೊಡನೆ ಕರ್ಮವರಿಯಲಾ
ಮಂಗಳ ವಾದ್ಯಗಳ ಶ್ರವಣ ಕರ್ಮವಹುದಲಾ
ರಂಗಗರ್ಪಣವೆನ್ನೊಲಿವ ನರಸಿಂಹವಿಠ್ಠಲಾ ೩

## ೨೩೨

ಕಾವವನೆ ಕರ್ಮಜಯ ಬಳಿಕಂ
ಸಾವವನೆ ಉಣ್ಣುವರು ಜನರು
ಭಾವವನೆ ಅರಿದಿರಿಸು ಜೀವರ ನಿನ್ನಂಘ್ರಿಯಲಿ ಪ

ದಾಸವೃಂದವು ತೋಷದಿಂದಲೆ
ಪೂಶರಯ್ಯನ ವಿಡಿದು ಘನ ಸಂ-
ತೋಷ ಬಡುತಿಹರೇ ಸುಜನ್ಮದ ಸುಕೃತ ಫಲವಿಹುದೋ
ಶ್ರೀಶನಲಿ ನಿಜದಾಸ ಭಕುತಿಯ
ಮೀಸಲಿರಿಸೀ ಮನವ ಮೋಹದೆ
ಆಶೆ ಗಳಿಸದೆ ಶ್ರೀಹರಿಯ ನಿಜವಾಸ ಕೈಯ್ಯುವರು ೧

ಮೃಗಜಲಕೆ ನೀರೆಂದು ಭಾವಿಸಿ
ಪೊಗಲೆಳಿಸುವೆರಳೆಗಳ ಪರಿಯಲಿ
ಮೃಗನಯನೇರತಿ ಚೆಲ್ವಿಕೆಗೆ ಜಗವೆಳಸಿ ಬಳಲುವದು
ಮಿಗಿಲಾಗಿದ ವಿಷಯಲನಲದಿ
ಧಗಧಗಿಸಿ ಜನಗಳು ಪೋಪರಲ್ಲದೆ
ಖಗಪತೀ ವಾಹನನ ನೆನೆಯರು ಜಗವ ಪಾವನನು ೨

ನೀರಜಾಸನ ಪಿತನೆ ಅಕ್ಷಯ
ಶ್ರೀ ರಮಾವಲ್ಲಭನೆ ತವ ಪರಿ
ವಾರವಲ್ಲದೆ ಸತಿಸುತರು ಮೇಣ್ ದೇಹ ಬಾಂಧವರು
ಸಾರಸುಮತಿಯನಿತ್ತೆಮಗೆ ಹರೆ

ಸೇರಿಸೆಮ್ಮನು ನಿನ್ನ ಅಡಿಯಲಿ
ಧೀರ ಶ್ರೀ ನರಸಿಂಹವಿಠ್ಠಲ ಪಾರಗಾಣಿಪುದು ೩

## ೨೩೩

ಗರ್ವವು ಸುಜನವ್ರಾತದಲಿ ಸರ್ವವು ನನಗೆ ನಮ್ಮಪ್ಪಗಿಹಲಿ ಪ

ಕಾಸುಕಾಸಿನಿಂದ ಹಣ ಹೊನ್ನಹುದು
ದೇಶ ದೇಶದಿಂದ ರಾಜ್ಯವಾಗುವದು ೧

ಕ್ಲೇಶ ಕ್ಲೇಶದಿಂದ ಹಾಸನಾಗುವುದು
ದಾಸದಾಸರಿಂದ ಮುಕ್ತಿಮಾರ್ಗಹುದು ೨

ಸಾರಾಸಾರದಿಂದ ತತ್ವವಾಗುವದು
ಧೀರ ನರಸಿಂಹವಿಠಲನರಿಯುವದು ೩

## ೨೩೪

ದಾಸನಾಗು ಹರಿಯ ದಾಸನಾಗು
ಮೋಸಹೋಗದೆ ಭವಕೆ ಬ್ಯಾಸರಾಗು ಪ

ಭಾನುಮಂಡಲ ಕಂಡು ಶ್ವಾನನುಬ್ಬರಿಪಂತೆ
ಭೂನಾಥನಡಿವಿಡಿದು ಬಾಳ್ವೆ ನಿನಗೆ
ಹೀನಮಾನವ ಕಂಡಣಕೆ ನುಡಿದರು ಸರಿಯೆ
ಜ್ಞಾನನಿಧಿ ಹರಿಭಕುತಿಯ ಲೆಕ್ಕಿಸದೆ ಮಾಡು ೧

ಕಾಳುವೆಗ್ಗಳವಾಗೆ ಸುಮತಿ ಸಂಗ್ರಹಿಪಂತೆ
ಬಾಳುವೆಯೊಳ್ಹರಿಸೇವೆ ಬಲು ಅಗ್ಗವಂತೆ
ಕೀಳು ಜನರಲ್ಲಿ ಲೌಕಿಕತೆ ಮರುಳಾಗಿ ಸಂತೆ
ಕೇಳುವವರಾರು ಹರಿಭಕುತಿ ಮಾಡುವವರು ೨

ಮಾರಿಗಾಹುತಿಯಾಗ್ವ ಕುರಿಮೇಕೆ ತೆರನಂತೆ
ಘೊರ ಜವನನು ಮರೆತು ಕೊಬ್ಬುವವರಂತೆ
ಶೇರು ನರಸಿಂಹವಿಠ್ಠಲನಂಘ್ರಿಕಮಲವಾ
ಆರಾರು ಬಾಧೆಯಿಲ್ಲದೆ ಗತಿಯ ಕೊಡುವಾ ೩

## ೨೩೫

ದಾಸನಾದರರೂ ಆದ ಘಟಿಕನಾದ ಸೋಜಿಗಾ
ವಾಸುದೇವನ ಬಿಡದೆ ಭಜಿಸಿ ಸುಖಿಪ ಮತ್ತೀಗಾ ಪ

ಮಂದಿ ಒಳಗೆ ಶೇರದಾಗಿ ನೊಂದು ಬಳಲಿದಾ
ಬಂದ ಭವ ತಾಪಂಗಳ ಹೊಂದಿ ಅಳಲಿದಾ
ಮಂದಿರವೆಲ್ಲೆ ಗೃಹಿಣಿ ಸುತರೆಲ್ಲೆಂದ್ಹಲುಬಿದಾ
ಇಂದಿರೇಶನ ಪಾದ ಪಿಡಿದಾನಂದ ತಾಳಿದಾ ೧

ಪಿಡಿದ ಕಾರ್ಯ ಬಿಡದೆ ...
ಒಡನೆ ಪೀಡೆ ರಾಶಿಯಾಗಿ ಒಡಲ ಮುಸುಕಿತು
ಕಡು ಬಡತನದುರಿಯು ಅಡರಿ ಒಡಲ ಸುತ್ತಿತು
ಜಡಜನಾಭನೊಲುಮೆಯಿಂದ ಎಡರು ಪೋಯಿತು ೨

ಭರದಿ ಸತೀ ಸುತರು ದುಃಖ ಶರದಿ ವಿಹ್ವಲಾ
ಇರದೆ ವ್ಯಾಧಿ ಜಲಂಗಳಾ ಉರಿಯ ಉಮ್ಮಳಾ
ತೆರೆಯ ಕಂಗಳಿಲ್ಲಾ ಗತಿಯು ಧರೆಯ ಕತ್ತಲಾ
ಪೊರೆದ ನರಸಿಂಹವಿಠಲಾ ನಿರುತ ನಿರ್ಮಲಾ ೩

## ೨೩೬

ಬಹಳ ದೇಹವ ದಂಡನೆ ಮಾಡಿ ದೇಹ ಘನ ಬಳಲಿಸಿ
ಅಹಿಶಯನನು ನಿನ್ನ ಬೆಂಬಲನಾಗಿಹ ಚಿಂತೆ ಮಾಡಲಿ ಬ್ಯಾಡಾ ಪ

ಸೂನು ಪ್ರಲ್ಹಾದನಾನತನಾಗಿ ಮೊರೆವೋಗಲು
ಹೀನ ರಕ್ಕಸನ ಪರಿಸರಿ ಏನಾಯಿತು ೨

ಸತಿಸುತರ ಮುದದಿಂದ ಹಿತವಂತ ಬಳಿಗದಿಂ-
ದತಿ ತೃಪ್ತವಾಗಿ ನಾನಿರುತಿರಲು ನಿನ್ನ
ಧೃತಿಗುಂದಿ ಪವಡಿಸಿರೆ ಗೆಜ್ಜೆಪಾದವ ಕಂಡು
ನುತಿಸುವೆನನವರತ ನರಸಿಂಹವಿಠಲರಾಯಾ ೩

## ೨೪೦

ಯಾತಕೀಪರಿ ಚಿಂತೆ ಮನದೊಳಗೆ ಭ್ರಾಂತೆ ಪ

ಒಡಲೊಳಿಟ್ಟವರ್‍ಯಾರು ಪೊರಮಡಿಸಿ ನಿನ್ನನು
ನಡಿಯ ಕಲಿಸಿದರ್‍ಯಾರು
ನುಡಿಗಲಿಸಿ ನಿನಗೆ ಒಡಲಿಗಿಕ್ಕಿದರ್‍ಯಾರು ಷಡುರಸದ ಅನ್ನವ
ಒಡಿಯ ರಾಮನ ಮರೆದು ಜಡಮನಕೆ
ಕಡುಮಮತೆಯೊಳು ಶಿಲ್ಪ
ಕೆಡದಿದು ಬಿಡದೆ ತೊಡಗಿರು ರಾಮಧ್ಯಾನದಿ ಕಡೆಯಲೋಕವು
ಬಿನ್ನಣಪ್ಪುದು ೧

ಶಿಲೆಯು ಪೆಣ್ಣಾಯ್ತುರೀಯ ಬಲು ಬಳಲಿ
ಪಂಡಜಗೊಲಿದುಗತಿಯಿತ್ತರಿಯು
ಒಲಿಯುತ್ತಲನುಜಗೆ ಅಳಿದನಣ್ಣನನರಿಯಾ
ಸಲಹುವನು ಭಕುತರ
ಜಲಧಿಯನು ನೆರೆದಾಂಟಿದ್ದನುಮನ
ತಲೆಯಮೇಲಿಟ್ಟಮೃತ ಕರವನು
ಇಳೆಯೊಳಾಚಂದ್ರಾರ್ಕ ಕೀರ್ತಿಯ ನೆಲೆಗೊಳಿಸಿ
ಶ್ರೀನಿಲಯನಿರುತಿರೆ ೨

ಪಿಂತೆ ರಾವಣನಳಿದಾನಂತ ಮಹಿಮಳ ಚಿಂತೆಯನು ತಾ ಕಳಿದಾ
ಚಿಂತಿಪರ ಮನದೊಳು ಸಂತಸದಿ ತಾನುಳಿದಾ ಅಂತರಿಯೆನಿವನ
ಸಂತ ಜನರಿಗೆ ಅಂತಕನ ಭಯವೆಂತು ಒಪ್ಪುದು ಹರಿಯ ನೆನೆಯಲು
ನಿಂತು ಶ್ರೀ ನರಸಿಂಹವಿಠಲನಂತರಂಗದಿ ಜಪಿಸುವಾತ್ಮಗೆ ೩

## ೨೪೧

ರಾಮನಾಮವ ನುಡೀವೆ ಶ್ರೀರಾಮ ನಿನ್ನನು ಪಿಡೀವೆ ಪ

ಧಾಮ ನೀ ಬಿಟ್ಟೇಳು ಸುರಧಾಮನಾ ಪಿಡಿ ಕೇಳು ಆಮ್ಯಾಲ ಪೇಳು
ಕಾಮಿನೀಯಾತ್ಮಜರಗತಿ ಯಿನ್ನಾವುದ್ಯೆ ಈ ಪರಿಯು ಮಾಡಲು
ರಾಮರಾಮನುತಡಿಗಡಿಗೆ ನುಡಿದೀ ಮನೆಯೆ ಭವವೀಯವರಿವೆನು ೧

ರಥಕೆ ಕುದುರೆಗಳೆರಡು ಭವರಥಕೆ ದಂಪತಿ ಜೋಡು
ರಥ ನಡೆಸಿ ನೋಡು ಪಥವು ಗಮನಕೆ ಸುಲಭವಲ್ಲವೆ
ಇತರ ಭಯವದಕೆನಿತಹುದು ಪೇಳ್ ಸತತನಿಲಸುತ
ಗತಿಯ ತೋರಲು ಪತನೆಡರುಗಳ ಕಥೆಯನರಿಯಿಸು ೨

ಪೆರ್ಮರವೆ ನೀ ಪುಟ್ಟಿ ಸಲೆಗಾರ್ನೆರಳು ಮಾಡಿಟ್ಟಿ
ಮೂಲೋರ್ಕ ತೊಟ್ಟಿ ಶೇರಲದ ನರವಿರ್ಹಗಳು[?]
ಹರಿಹರಿಯೆನುತ ಬಾಯ್ತೆರದು ನುಡಿಯಲು
ಆರ್ಯೆವುದಾಲಿಸುತ ಸುರತರು ತೋರ್ದಡಿಯ ನರಸಿಂಹವಿಠಲ

## ೨೪೨

ಶಿರಕಂಜಿ ಉಪಟಳ ಬಿಡಿಸುವರೇ ಇಂಥಾ
ಪರತಳ ಭೋಜನವೆಂದಿಗೂ ಮಾಡಬಾರ್ದು ಪ

ಇಲಿಗಂಜಿ ನಿಜಗೃಹ ತ್ಯಜಿಸುವರೆ ತನ್ನ
ಸಲಹೊ ದೇವನು ಬೆಂಬಲನಾಗಿಹನು ೧

ಭವಕಂಜಿ ಭುವನವ ತೊಲಗುವರೆ ಲಕ್ಷ್ಮೀ
ಧವನನ ಭಜಿಸುತ ಬಾಳ್ವೆಯ ಮಾಡುವದು ೨

ಹರಿಗಂಜಿ ಶರಣರು ಓಡುವರೆ ಇಂಥಾ
ನರಸಿಂಹವಿಠಲನೆಂದಿಗು ಬಿಡಬಾರದು ೩

## ೨೪೩

ಹರಿಯ ಚರಣ ನಿರುತ ಸ್ಮರಿಸಲೊ ಮೂಢ ಮನುಜ
ಹರಿಯ ಚರಣ ನಿರುತ ಸ್ಮರಿಸೆಲೊ ಹರಿಯ ಚರಣ ನಿರುತ ಸ್ಮರಿಸು
ಎರಡು ಕರದಿ ಹರಿಯ ಪೂಜಿಸು ಹರಿಯ ನಿತ್ಯ ಪಾಡಿ ಭಜಿಸು
ನರಕಭಯ ವಿಮುಕ್ತನಾಗೆಲೋ ಪ

ಹಿಂಡುಬಳಗ ಕೂಡಿಹಾಕಿದಿ ಆಸಕ್ತನಾಗಿ
ಬಂಡಿಹೊನ್ನು ಘಳಿಸಿ ಹೊಳಿದಿ ಬಗೆಬಗೆಯಲಿಂಡು
ಬಂಡ ಬೆಳಸಿ ತುಂಡಗ್ವಾಣದಿ ತುಂಡಿನೇಗ ಜವನಭಟರು [?]
ಕೊಂಡು ನಿನ್ನನೊಯ್ಯುವಾಗ ಹೆಂಡಿರೆಲ್ಲೆ ಬಳಗವೆಲ್ಲೆ ಒಳಿತು ಹೀನ
ಬೆನ್ನ ಬಿಡವು ೧

ಪಗಲು ಹರಟಿಯೊಳಗೆ ಪೋದಿತು ಆಯುಷ್ಯದೊಳಗೆ
ಮಿಗಿಲು ರಾತ್ರಿ ವಿಷಯಗಳೆಯಿತು ಸುಗಂಧದ್ರವ್ಯ
ಸೊಗಸಿನಿಂದ ಮೈಯ್ಯ ಮುಸುಕಿತು ಜಗದಿ ಘೂಳೆಯಂತೆ ಮೆರೆದಿ
ನಗಧರನಂಘ್ರಿಗಳ ಮರೆದಿಲ್ಲ ನೆಗವುವಾಗ ಜವನ ಭಟರು
ಸೊಗಸಿನಂಗ ತೊಲಗಿತಲ್ಲಿ ೨

ದುಷ್ಟತನಕೆ ದಾರಿ ಕೊಡದಿರು ಲೋಕದಲಿ ನೀನು
ಭ್ರಷ್ಟನಾಗದೆ ತುಷ್ಟಿಯಿಂದಿರು ಕಷ್ಟಸುಖಗಳ್ಹರಿಗೆಯರ್ಪಿಸಿ
ಸೃಷ್ಟಿಪರ ನರಸಿಂಹವಿಠಲನಷ್ಟ ವಿಧದಿ ಪೂಜೆಗೈದು
ಇಷ್ಟ ಮುಕ್ತಿ ಸುಖ ಪಡೆಯೋ ೩

## ೨೪೪

### (ಅ) ಶ್ರೀ ಗಣೇಶ

ಕಾತ್ಯಾಯನಿ ವರಸುತನೇ ಸತತ ಶುಭದಾಯಕನೇ
ಮಂಗಳವನು ಕೊಡು ನಮಿಸುವೆನೊ ನಾನು ಪ

ಸಿದ್ಧಿವಿನಾಯಕ ವಿದ್ಯಾಪ್ರದಾಯಕ
ಸದ್ಬುದ್ಧಿಯ ಕೊಡೋ ಹರನ ಮುದ್ದುತನಯನೆ ೧

ಮೂಷಕವಾಹನನೇ ದೋಷವಿದೂರನೇ
ಶ್ರೀಶ ಹನುಮೇಶ ವಿಠಲೋಪಾಸಕನೇ ೨

ಗೌರೀಸುತ ಗಜಾನನಾ ನಮೋ ನಮೋ
ಪಾರ್ವತೀ ಪತಿಯ ಪ್ರಾಣಪದಕನೇ ನಮೊ ೩

ಏಕದಂತಾನೇಕ ಚರಿತನೇ ನಮೋ
ನೀ ಕೃಪಾದಿ ನೋಡೋ ವಕ್ರತುಂಡನೆ ನಮೋ ೪

ಬಟ್ಟಮುತ್ತಿನ್ಹಾರ ಪದಕಧಾರನೇ ನಮೋ
ಧಿಟ್ಟ ಶ್ರೀ ಹನುಮೇಶವಿಠಲ ಪ್ರಿಯನೇ ನಮೋ ೫

## ೨೪೫

ನೋಡಿ ಧನ್ಯನಾದೆನಾ ಗಜಾನನಾ ಪುನೀತನಾ
ಪಾಡಿ ಭಜನೆ ಮಾಡಿ ಇಡುವೆ ಅಡಿಗಳಲ್ಲಿ ಶಿರವಾ ಪ

ಭಾರತಾರ್ಥ ಬರೆದ ದೇವ ಮಿತ್ರನಾ ಸುಪುತ್ರನಾ
ಮಾರನಾಸ್ತ್ರ ಗೆಲಿದ ನಿಟಿಲನೇತ್ರನಾ ವಿರಕ್ತನ ೧

ಸಕಲ ಶಾಸ್ತ್ರ ತಿಳಿಸೋ ಏಕದಂತನೇ ಬಲವಂತನ
ಮುಕುತಿ ಮಾರ್ಗವ ತೋರೋ ವಕ್ರತುಂಡ ವಿಘ್ನದಂತನೇ ೨

ಜ್ಞಾನವಿತ್ತು ನುಡಿದು ನುಡಿಸೋ ನೀನೆ ನಿಂದು ವದನದಿ
ಮನವಾ ಹನುಮೇಶವಿಠಲನೊಳು ನಿಲಿಸೋ ಬೇಗದಿ ೩

## ೨೪೬

ಪರಮ ದಯಾಕರನೇ ಗೌರೀಸುತನೇ
ಪರಿಪರಿಯಿಂದಲಿ ಪಾಲಿಸು ಯೆನ್ನನು ಪ

ಸಿದ್ಧಿವಿನಾಯಕ ವಿದ್ಯಾಪ್ರದಾಯಕ
ಸದ್ಬುದ್ಧಿಯ ಕೊಡು ಮೋದಕಪ್ರಿಯನೆ ೧

ಮೂಷಕವಾಹನ ದೋಷರಹಿತನೇ
ಅಸುರನಾಶ ಸರ್ಪಕಟಿಸೂತ್ರನೇ ೨

ಜಾನಕೀರಮಣ ಶ್ರೀ ಹನುಮೇಶವಿಠಲನ
ಧ್ಯಾನವ ಕೊಟ್ಟು ರಕ್ಷಿಸೋ ಅನುದಿನ ೩

## ೨೪೭

ವಂದಿಸುವೆ ಗಣರಾಜ ನೀ ದಯದಿಂದ ಪಾಲಿಸುವುದು ಪ

ಸದ್ಗುಣಭರಿತನೇ ದುರ್ಗುಣರಹಿತನೇ ವಿಘ್ನವಿನಾಶಕನೇ
ಭಗ್ನಗೈಸೋ ಎನ್ನ ಅವಗುಣಗಳ ನೀ ವಿದ್ಯಾದಾಯಕನೇ ೧

ಶ್ರೀಶನಂಘ್ರಿಸರೋಜಭೃಂಗ ಮಹೇಶನ ವರಸುತನೇ
ವ್ಯಾಸಕರುಣಾಪಾತ್ರನೇ ಮನದಾಸೆ ಪೂರೈಸುವವನೇ ೨

ಪಾಶಪಾಣಿಯೆ ಪ್ರಾರ್ಥಿಸುವೆ ನೀ ಲೇಸು ಕೊಡುವುದಿನ್ನಾ
ಶ್ರೀಶ ಶ್ರೀ ಹನುಮೇಶವಿಠಲನ ದಾಸನೇ ಅನುದಿನಾ ೩

## ೨೪೮

### (ಆ) ಶ್ರೀ ಹರಿಯ ಸ್ತುತಿ

ಆಗದಿರುವಂಥ ಕೃತಿ ಆಗಿ ಹೋಗುವುದು
ಜಗದೀಶನಾಕೃತಿಯು ಅಗಾಧವಿಹುದ್ಯೆಯ್ಯ ಪ

ಮಂದರೋದ್ಧರನಾಜ್ಞೆಯಿಂದ ಬ್ರಹ್ಮನು ತಾನು
ಇಂದಿಗೆ ಸೃಷ್ಟಿ ಮಾಡುವುದಿಲ್ಲವೇನು
ಇಂದೀವರಾಕ್ಷ ಮುಕುಂದನ ದಯದೀ
ಪಾಂಡುನಂದನನು ಅಶ್ವಮೇಧವ ಮಾಡಲಿಲ್ಲೇ ೧

ಹರಿಯ ಕೃಪೆಯಿಂದಲಿ ವರದಂಜನೇಯ ಸುತನು
ಗುರು ರಾಮನಾ ಸತಿಯ ಅರಸುವುದಕ್ಕಾಗಿ
ಪರಮ ದುರ್ಲಭವಾದ ಶರಧಿಯನು ಹರುಷದಲಿ
ಸಿರಿನಾಮ ಸ್ಮರಿಸಿ ಹಾರಲಿಲ್ಲೇನೋ ೨

ಧನಭೂಮಿ ಕನ್ಯಾಗ್ರಹದಾನ ಕೊಡಲದಕೆ ಹರಿ
ಅನುಕೂಲವಾದಷ್ಟೇ ಫಲಕೊಡುವನು
ಮನವನೊಪ್ಪಿಸಿ ಗತಿ ಎಂದು ನೆನೆದವರಿಗೆ
ಘನ ಮುಕ್ತಿಯನು ಕೊಡುವ ಹನುಮೇಶವಿಠಲ ೩

## ೨೪೯

ಗಾನಲೋಲನಾದ ಶ್ರೀನಿವಾಸನಾ ಸರ್ವೇಶನಾ
ಗಾನದಿಂ ಭಜನೆ ಮಾಡೋ ಜಾನಕೀ ರಮಣನಾ ಪ

ಮಲಗಿ ಪಾಡೇ ಮುರಲೀಧರನು ವಲಿದು ಕುಳಿತು ಕೇಳ್ವನೋ
ಕುಳಿತು ಪಾಡೇ ನಿಲುವ ನಿಂದರೆ ನಲಿವನೋ ತಾ ವಲಿವನೋ ೧

ಬಾಲನಾ ಗೋಪಾಲನಾ ಸುಶೀಲನಾ ಕೃಪಾಲನಾ
ನೀಲಮೇಘ ಲಕುಮೀಲೋಲನಾ ವಿಶಾಲನಾ ೨

ನಿತ್ಯನಾ ನಿರ್ಲಿಪ್ತನಾ ಪರಮಾತ್ಮ ಸಕಲವ್ಯಾಪ್ತನಾ
ಭಕ್ತರಲ್ಲಿ ನಿರುತ ಪ್ರೀತಿಯುಕ್ತನಾ ಸ್ವಶಕ್ತನಾ ೩

ಆನಂದನಾ ದಯಾವೃಂದನಾ ಮುಕುಂದನಾ
ಚಂದ್ರಕುಲಕೇ ಇಂದ್ರನಾ ಉಪೇಂದ್ರನಾ ಗೋವಿದನಾ ೪

ಧೀರನಾ ಗಂಭೀರನಾ ಯದುವೀರನಾ ದಧಿಚೋರನಾ
ಮಾರಜನಕ ವರದ ಶ್ರೀ ಹನುಮೇಶ ವಿಠಲರಾಯನಾ ೫

## ೨೫೦

ಜಗತ್ಪಾಲಾ ಸದ್ಗುಣಶೀಲಾ ರಮಾಲೋಲಾ ಪ

ದಶರಥಬಾಲಾ ಗಾನ ವಿಲೋಲಾ ನಿತ್ಯ ವಿಮಲಾ
ಬಹುಗುಣ ಶೀಲಾ ಪಾಹಿ ಕೃಪಾಲಾ ೧

ನಿತ್ಯಾನಂದಾ ದೇವಕಿಕಂದಾ ಕಂಸನ ಕೊಂದಾ
ಬಾಲ ಗೋವಿಂದ ನೀ ದಯದಿಂದಾ ಪಾಹಿ ಮುಕುಂದಾ ೨

ಅಮರಾಧೀಶಾ ಅಸುರನಾಶಾ ಪರಮ ಪ್ರಕಾಶಾ
ಗೋಕುಲವಾಸಾ ಭಕ್ತಪೋಷಾ ಶ್ರೀಹನುಮೇಶವಿಠಲ ೩

## ೨೫೧

ಸರ್ವೇಶಾ ಪಾಹಿ ರಮೇಶಾ
ಜಗದಾಭಿರಾಮನಿಗೆ ಮಿಗಿಲಾರು ಲೋಕದೊಳಗೆ ಪ

ವರ ವಾಲ್ಮೀಕಿ ಮುನಿಯು ಮುರನೆಂದು ಸ್ಮರಿಸಿದದಕೆ
ಕರುಣಾಳು ನೀನಾವದಕೆ ತ್ವರ ಕೃಪೆಯ ಮಾಡಿದದಕೆ ೧

ಪರಮಾಂಜನೆಯ ಸುತಗೆ ಸ್ಥಿರ ಪದವಿಯ ನಿತ್ತದದಕೆ
ಧರಣೀಶ ತವ ಚರಣಕೆ ಶಿರಬಾಗಿ ಬೀಳ್ವದದಕೆ ೨

ನಿನ್ನ ಪಾದ ಸೋಕಿಂದದಕೆ ಘನ ಶಿಲೆ ವನಿತೆಯಾದದಕೆ
ಹನುಮೇಶವಿಠಲನೆಂಬೋದಕೆ ಅನುಮಾನಬಾರದದಕೆ ೩

## ೨೫೨

ದಾಸೋಹಂ ತವ ದಾಸೋಹಂ ದೋಷರಹಿತ
ಮಧ್ವೇಶ ವಿಠಲ ಪ

ಮಂಗಳಾಂಗ ಮಾತಂಗ ವರದ ಭುಜಂಗ ಶಯನ
ತವ ದಾಸೋಹಂ
ಗಂಗಾಪಿತ ಉತ್ತುಂಗ ಮಹಿಮ ನರಸಿಂಗ ಶುಭಾಂಗ
ಕೃಪಾಂಗರಂಗ ತವ ದಾಸೋಹಂ ೧

ತ್ರಿಗುಣಾತೀತನೆ ಅಗಣಿತ ಮಹಿಮನೆ ಜಗದೀಶನೆ
ತವದಾಸೋಹಂ
ಜಗದಂತರ್ಗತ ಜಗದೋದ್ಧಾರಕ ಜಗನ್ನಿಯಾಮಕ
ಜಗತ್ಪಾಲ ತವದಾಸೋಹಂ ೨

ಸಿಂಧುಶಯನ ಸೌಂದರ್ಯರೂಪ ಆನಂದ ಪೂರ್ಣ
ತವ ದಾಸೋಹಂ
ಇಂದಿರೇಶ ಸಿರಿ ಮಂದಿರ ಹರಿ ಗೋವಿಂದ ಉಪೇಂದ್ರ
ಮುಕುಂದಮೂರ್ತಿ ತವ ದಾಸೋಹಂ ೩

ಅನ್ನಮಯನೆ ಆನಂದಮಯನೇ ವಿಜ್ಞಾನಮಯನೇ ತವದಾಸೋಹಂ
ಮನೋಮಯನೇ ಮನ್ಮಥ ಜನಕನೆ ಪ್ರಾಣಮಯನೆ ಶ್ರೀ –
ವಾಙ್ಮಯನೇ ತವ ದಾಸೋಹಂ ೪

ಶ್ರೀಶನೇ ಸರ್ವಮಹೀಶನೇ ವರ ಹನುಮೇಶವಿಠಲ ತವದಾಸೋಹಂ
ನಾಶರಹಿತ ರಮೇಶನೇ ಸುರಮುನಿ ಪೋಷಕನೇ
ಲಕುಮಿ ಉಲ್ಲಾಸನೇ ತವ ದಾಸೋಹಂ ೫

## ೨೫೩

ನಂಬಲು ಕೆಟ್ಟವರು ಆರು ಜಗದೊಳು ಪ

ಹರಿ ನೀನೆ ಗತಿ ಎಂದು ಅರಿತ ಪ್ರಲ್ಹಾದನ
ದುರಿತವ ಭರದಲಿ ತರಿದ ಶ್ರೀಹರಿಯನು ೧

ಕುರು ಸಭೆಯೊಳು ನರಹರಿಯನು ಸ್ಮರಿಸಿದ
ತರುಣಿಯೊಳು ಕರುಣಿಸಿ ಪೊರೆದ ಶ್ರೀಧರನನ್ನು ೨

ಅನುದಿನದಲಿ ನಮ್ಮ ಹನುಮೇಶ ವಿಠಲನ
ನೆನೆದ್ವಾಲ್ಮೀಕನ ವಿಮೋಚನೆ ಮಾಡ್ದ ಶ್ರೀರಾಮನ ೩

## ೨೫೪

ಪಾವನ ಮಹಿಮನೇ ದೇವಾಧಿದೇವನೇ ಪ

ವರಲಕುಮಿ ಕರಕಮಲಪೂಜಿತ ನಮಿಪೆ
ನೀರಜಾಕ್ಷ ಮಂಗಳವನು ಕೊಡು ದೇವಾ ಅ.ಪ.

ವಾಯುರುದ್ರ ಸಹಿತಾ ಸ್ತುತಿಸುವರೋ ನಿನ್ನ ದಾತಾ
ಸೃಷ್ಟಿಸ್ಥಿತಿ ಕಾರಣಕರ್ತಾ ಮುಕ್ತಿಪ್ರದ ಹನುಮೇಶವಿಠಲವರ ೧

## ೨೫೫

ರಾಮಚಂದ್ರನೇ ರಘುಕುಲೋತ್ತಮನೇ
ಕಾಮಿತ ಫಲದಾಯಕನೇ ಏಳೈ ಬೇಗನೇ ಪ

ಜಾನಕಿ ದೇವಿಯು ಪನ್ನೀರ ತುಂಬಿದ
ಚಿನ್ನದ ಕಲಶವನು ಧರಿಸಿ ಹರಿ
ನಿನ್ನಯ ಸನ್ನಿಧಿಯಲ್ಲೇ ನಿಂತಿಹಳು
ಇನ್ನಾದರು ಮುಖವನು ತೊಳೆಯಲೇಳೊ ಅ.ಪ.

ದುಷ್ಟ ರಾವಣನ ಕುಟ್ಟಿ ಕೆಡಹಿದ
ಸೃಷ್ಟೀಶನೇ ಏಳೋ
ಕಷ್ಟಾಗಿರುವುದು ಯುದ್ಧದಿ ನಿನಗೆ ದಯಾಳೋ
ಪಟ್ಟವನೇರಲು ಇಟ್ಟಿಹುದು ಮುಹೂರ್ತವ
ಇಂದಿನ ದಿನದೊಳು
ಕೆಂಪಾಯಿತು ಮೂಡಲೊಳು ಅಷ್ಟೈಶ್ವರ್ಯದಿ ಪಟ್ಟಕ ಸಿಂಗರಿಸಿಟ್ಟು
ವಶಿಷ್ಠಾದಿಗಳು ವಿಶಿಷ್ಟರು
ಶ್ರೇಷ್ಠನಾದ ಹನುಮೇಶವಿಠಲ ನೀ ಬರುವದಷ್ಟೇ
ನೋಡುತ ಕುಳಿತಿಹರೋ ೧

## ೨೫೬

ರಾಮಾ ರಾಮಾ ಸೀತಾರಾಮಾ ರಘು ಕುಲೋತ್ತಮಾ ಶ್ರೀರಾಮಾ ಪ

ರಾವಣಾರಿಯಾದ ರಾಮಾ ಮಾಯ ರಕ್ಕಸಗೊಲಿದ ರಾಮಾ
ವಾಯುತನಯಗೊಲಿದ ರಾಮಾ ಕೋದಂಡರಾಮಾ ಶ್ರೀರಾಮಾ ೧

ಜನಕನ ಜಾಮಾತ ರಾಮ ಜಾನಕಿ ವಲ್ಲಭ ಶ್ರೀರಾಮಾ
ಕ್ಷೋಣಿಗಭಿಮಾನಿ ರಾಮಾ ಕೌಸಲ್ಯಾರಾಮ ಶ್ರೀರಾಮಾ ೨

ಇನಕುಲೋತ್ಪನ್ನ ರಾಮಾ ದಿನಕರ ಸತತೇಜ ರಾಮಾ
ಹನುಮೇಶವಿಠಲ ರಾಮಾ ಪುನೀತರಾಮಾ ಶ್ರೀರಾಮಾ ೩

## ೨೫೭

ಹರಿ ಭಜನೆ ಮಾಡು ನೀ ತ್ವರದಿ ತ್ವರದಿ ಪ

ಕರವೀರ ಪುರದಿ ತನ್ನರಸಿಯ ಬಿಟ್ಟು ಭಕ್ತರ
ಸಲಹುವ ನಮ್ಮ ಪರಮ ಪಾವನ ೧

ವರಧ್ರುವರಾಜನು ನರಹರಿ ಸ್ಮರಿಸಲು
ಕರುಣಿಸೈವನ ಹರಿ ಭರದಿ ಪೊರೆದೆ ೨

ವನವಾಸದಲಿ ಶ್ರಮ ಅನುಭವಿಸಿದ ಪಾಂಡು
ತನಯರ ಸಲಹಿದ ಹನುಮೇಶವಿಠಲ ೩

## ೨೫೮

### (ಮಂಗಳ ಪದ)

ಸೃಷ್ಟಿ ಸ್ಥಿತಿ ಕಾರಣಕೆ ಕರ್ತನಾದ ಶ್ರೀ ವಿಷ್ಣುವಿಗೆ ಜಯ ಮಂಗಳಂ ಪ

ಮಚ್ಛ ಕಚ್ಛಪ ವರಾಹಾದಿ ಅವತಾರ
ಸ್ವೇಚ್ಛೆಯಾದರಿಸಿದವಗೆ ನೆಚ್ಚಿ ನೆನೆಯುವರು ಮನದಿಷ್ಟೆಪೂರಿಸುವ ಶ್ರೀ
ಅಚ್ಯುತಗೆ ಜಯ ಮಂಗಳಂ ಹರಿಗೆ ೧

ಸಿರಿ ಬ್ರಹ್ಮವಾಯು ಮೊದಲಾದ ಸನಕಾದ್ಯರಿಂ
ಸ್ತೋತ್ರಗೊಳ್ಪಗೆ ಮಂಗಳಂ
ನಾರದ ಶುಕಾದಿ ಮುನಿಗಳು ಪಠಿಸುವ ಪುರಾಣ
ಪುರುಷೋತ್ತಮಗೆ ಮಂಗಳಂ ಹರಿಗೆ ೨

## ೨೫೯

### (ಇ) ದೇವತಾ ಸ್ತುತಿ

ಕಂತುಪಿತನ ಸತಿಯಳೆ ನೀ ಸಂತೈಸನುದಿನಾ ಪ

ಜಗವ ಉದರದಿ ಧರಿಸಿದ ಜಗದೀಶನ ಗುಣರೂಪತ್ರಯಗಳ
ಸ್ತುತಿಸುವಳೆ ಅ.ಪ.

ನಾಶರಹಿತ ಶ್ರೀ ಹನುಮೇಶ ವಿಠಲನನುದಿನಾ
ಸೋಸಿಲಿ ನೂತನ ಗುಣಗಳ
ಬೇಸರಿಯದೆ ಸ್ತುತಿಸಿದ ಸಂ–
ತೋಷ ಪಡುವ ವರಲಕುಮಿಯೇ ೧

## ೨೬೦

ಗುರು ಪವಮಾನಾ ಪೊರೆವುದು ಎನ್ನನು ನೀ ತ್ವರಾ ಪ

ಸತ್ವರಿಗೆ ಸುಖ ಮಿತ್ರರಾಜಿಗ ಸಗ್ಗ
ದುಃಖ ತಾಮಸರಿಗೆ ಈವ ಅ.ಪ.

ಮೂರುವಿಧ ಜೀವರೊಳು ಬ್ರಹ್ಮಕಲ್ಪ ಪರಿಯಂತರ
ವರ ಹನುಮೇಶವಿಠಲನ ಚರಣದುಪಾಸನೆಯ ಮಾಡ್ವ ೧

## ೨೬೧

ದುಷ್ಟ ರಕ್ಕಸರನು ಜಯಿಸಿದ ಪರಮವಾಯುಸುತಗೆ ಮಂಗಳಂ
ಪ್ರಾಣೇಶಗೆ ಮಂಗಳಂ ಪ

ಬೆಟ್ಟ ಪುಚ್ಛದಿ ತಂದಿಟ್ಟು ಸಂಜೀವನ
ಕೊಟ್ಟ ಶ್ರೀ ರಾಮನ ಭಕ್ತನಿಗೆ ಮಂಗಳಂ ೧

ಸಿಟ್ಟಿಲಿ ದುಶ್ಯಾಸನನ ಹೊಟ್ಟೆ ಬಿಗಿದು
ಇಷ್ಟ ಪೂರೈಸಿದ ಕೃಷ್ಣನ ದಾಸಗೆ ಮಂಗಳಂ ೨

ಹನುಮೇಶ ವಿಠಲನ ಪ್ರೀತಿಪಾತ್ರನೆಂದೆನಿಸಿದ
ಮುನಿವರ ಗುರು ಮಧ್ವರಾಯಗೆ ಮಂಗಳಂ ೩

## ೨೬೨

ಮುಗಿವೇನು ಕೈಯ್ಯಾ ಶಾಂತೇಶರಾಯಾ
ರಘುರಾಮಾ ಪ್ರೀಯಾ ಪಾಲಿಸೆನ್ನ ಜೀಯಾ ಪ

ಶರಧಿಯ ದಾಟಿ ಮುದ್ರೆಯನು ಕೊಟ್ಟೀ
ದುರುಳರ ಮೆಟ್ಟಿ ಪುರಲಂಕೆ ಸುಟ್ಟೀ ೧

ಭಂಡಿ ಅನ್ನವನುಂಡೂ ದೈತ್ಯನ
ಚಂಡಾಪರಿ ಹಿಡಿಂಬನನು ಮುರಿದಿ ೨

ದುಷ್ಟಮತವನು ಸುಟ್ಟೀ ಜ್ಞಾನತೀರ್ಥ
ಧಿಟ್ಟ ಶ್ರೀ ಹನುಮೇಶವಿಠಲನ ದೂತಾ ೩

# (ಈ) ಯತಿವರ್ಯರ ಸ್ತುತಿ

## ೨೬೩

ಪಾಲಿಸು ಬ್ರಹ್ಮಣ್ಯ ಗುರುವರಾ ಪಾಲಿಸು ಬ್ರಹ್ಮಣ್ಯ ಪ

ಬಾಲಕನಾದನ ಪೇಳುವ ಮೊರೆಯನು
ಲಾಲಿಸಬೇಕಯ್ಯಾ ಹೇ ಜೀಯಾ ಅ.ಪ.

ಅಂದು ಮೃತದೇಹ ಇಂದಿರೇಶನ ದಯದಿಂದದುದ್ಧರಿಸಿದ
ಮಂದಹಾಸದಿ ತವ

ಕಂದನೆಂದು ಎನ್ನ ಕುಂದುಗಳೆಣಿಸದೆ ಚೆಂದದಿ
ಕಾಪಾಡೊ ದಯಮಾಡೊ ೧

ಪುರುಷೋತ್ತಮ ತೀರ್ಥಕರಸಂಜಾತನೆ
ಪುರುಷಯೋಜನಜನಹರಿಪಾದಭೃಂಗನೆ
ಹರುಷದಿ ಬಾಲಗೆ ಗುರುಪದವಿಯನಿತ್ತೆ ಸಿರಿಪಾದರ
ಅಗ್ರಜಾ ಗುರುರಾಜಾ ೨

ಅನುದಿನ ಸ್ಮರಿಪೆನೋ ಅನಘ ನಿನ್ನಯ ಪಾದ ಘನಮಹಿಮೆಗಳೆಲ್ಲ
ಮನದಲಿ ನಿಲ್ಲಿಸೋ
ಘನಮಹಿಮನೆ ಎನ್ನ ಬಿನ್ನಪ ಲಾಲಿಸೊ
ಹನುಮನಯ್ಯನ ದಾಸಾ ಯತೇಶ ೩

## ೨೬೪

## ಶ್ರೀ ರಾಘವೇಂದ್ರರು

ಎಲ್ಲಿರುವೆ ತಂದೆ ಬಾರೊ ಗುರುರಾಯನೆ ಪ

ಬಳಲುವೆ ಭವದಿ ತಳಮಳಿಸುವೆನೊ
ಕಳವಳಿಕೆಯ ಬಿಡಿಸೊ ಗುರುರಾಯನೆ ೧

ತಡ ನೀ ಮಾಡಲು ತಡೆಯದಾಗದೋ
ಗಡ ಬಾ ಇಡು ದಯವಾ ೨

ಸಕಲರಲ್ಲಿ ವ್ಯಾಪಕನೆಂದ್ಹರಿಯನು
ಪ್ರಕಟಿಸಿದಿ ಜಗದಿ ೩

ಹರಿನಾಮವು ಸರ್ವತಾರಕವೆಂಬೋದು
ಮೆರಸಿದಿ ಧರೆಯೊಳಗೆ ೪

ಧೀರನಾದ ಹನುಮೇಶ ವಿಠಲನಾ
ಧ್ಯಾನದಿ ಮನ ನಿಲ್ಲಿಸೋ ೫

## ೨೬೫

ಗುರು ರಾಘವೇಂದ್ರ ತವ ಚರಣ ದರುಶನಕೆ
ಬರಲಿಲ್ಲವೆಂದು ಕೋಪವ ಮಾಡ್ವದ್ಯಾಕೊ ಪ

ಧನವಿಲ್ಲ ಕೈಯೊಳಗೆ ತನುವಿನಲಿ ಬಲವಿಲ್ಲಾ
ಅನುಕೂಲವಿಲ್ಲವೊ ಎನ್ನ ಮನೆಯೊಳಗೆ
ಘನ ಸುಪ್ರಯಾಸ ನಿನ ದಾಸಗೊದಗಿದ ಮೇಲೆ
ಎನ ಮೇಲೆ ದೋಷವೇನಿರುವದಿದರೊಳಗೆ ೧

ಗೆಲುವಿಲ್ಲ ಮನದೊಳಗೆ ಫಲವಿಲ್ಲ ಸಂಸಾರ
ಬಲೆಯೊಳಗೆ ಸಿಲುಕಿ ನಾ ಬೇಸತ್ತೆನೋ
ಹಲುಬುವೆನೊ ದಾರಿದ್ರ್ಯ ಬವಣೆಯನು ತಪ್ಪಿಸಿ
ಸುಲಭ ಸಾಧನೆ ಪೇಳಿ ಸಲಹೊ ಗುರುವರನೇ ೨

ಒಂದು ಬಗೆಯನು ತೋರೋ ಇಂದೇ ನಾ ಹೊರಡುವೆನೂ
ಛಂದದಿಂದಲಿ ಪರಿವಾರ ಸಹಿತಾ
ತಂದೆ ಹನುಮೇಶ ವಿಠಲನ ಕಂದನೆ ನಿನ್ನ
ಬಂದು ನೋಡುವೆ ಮಾಡ್ವೆ ಸೇವೆ ತವ ದೂತಾ ೩

## ೨೬೬

ಗುರುರಾಜನೇ ಎನ್ನ ಪರಿಪಾಲಿಪುದ ಬಿಟ್ಟು
ವರ ಮಂತ್ರಾಲಯದೊಳಿರುವುದುಚಿತವೇನೋ ಪ

ಬಡ ಭಕ್ತನನು ಕಷ್ಟ ಕಡಲೊಳಿರಿಸಿ ತುಂಗಾ
ದಡದಿನಿಂತೆನ್ನ ಕೈ ಬಿಡುವುದುಚಿತವೇನೋ ೧

ಅಡಿ ಸೇವಕನೊಳಿಂಥಾ ಕಡು ಕೋಪವ್ಯಾತಕೋ
ನುಡಿ ನುಡಿಗೆನ್ನ ತಪ್ಪು ಹಿಡಿದು ಪೋಗುವರೇನೊ ೨

ಒಡೆಯ ಶ್ರೀ ಹನುಮೇಶವಿಠಲನ ದಾಸನೇ
ಬಡವನಿರುವೆನೆಂದು ನೋಡದಿರುವರೇನೊ ೩

## ೨೬೭

ನೀ ಕರುಣಿಸದಿರೆ ಸಾಕುವರ್‍ಯಾರು
ದಯಾಕರ ಮೂರುತಿ ರಾಘವೇಂದ್ರ ಪ

ಪಾರು ಮಾಡೊ ಸಂಸಾರಭವದಿ ಅ-
ಪಾರ ಮಹಿಮ ಗುರು ರಾಘವೇಂದ್ರಾ
ದೂರ ನೋಡಿದರೆ ಬಿಡಿಸೋ ತವ ಚರ-
ಣಾರವಿಂದಕೆ ಕೊರಳನು ಕಟ್ಟಿಸೊ ೧

ಒಡವೆ ವಸ್ತುಗಳ ಮಡದಿ ಮಕ್ಕಳ
ಕೊಡು ಎನುತಲಿ ಬೇಡುವುದಿಲ್ಲ
ಒಡೆಯನೆ ನಿನ್ನಯ ಅಡಿಗಳಲಿ
ದೃಢ ಭಕುತಿಯ ಕೊಡದಿರೆ ಬಿಟ್ಟವನಲ್ಲ ೨

ನರರ ಸೇವೆಯಾ ಬಿಡಿಸೋ
ಹರಿವಾಯುಗಳ ಸೇವೆಯಾ ಹಿಡಿಸೊ
ವರದ ಹನುಮೇಶವಿಠಲನಾ
ಸರ್ವೋತ್ತಮನೆಂದು ಕರೆದವನೆ ೩

## ೨೬೮

ಯಾಕೆ ಬಳಲಿಸುವಿ ಗುರುರಾಯಾ ಇನ್ನು
ಸಾಕು ಮಾಡಿ ಸಲಹೋ ಕಡು ಬೇಗ ಜೀಯಾ
ಭಕ್ತ ಕೇಳಿದರೆ ಕೊಡವಲ್ಲಿ ಉಪ-
ಯುಕ್ತವಲ್ಲದ ಮಾಯವನು ಬಿಡಿಸಲೊಲ್ಲಿ
ಶಕ್ತಿ ನಿನಗಿಮದೋ ಕರದಲ್ಲಿ ವಿ-
ರಕ್ತನೇ ಕೋಪವ್ಯಾತಕೋ ದಾಸನಲ್ಲಿ ೧

ತ್ರಾಹಿ ತ್ರಾಹಿ ಗುರುರಾಯಾ ಈಗ
ದೇಹಿ ಎಂಬಗೆ ನಾಸ್ತಿ ಎನಬ್ಯಾಡೋ ಜೀಯಾ
ದೇಹ ನಿನಗೊಪ್ಪಿಸಿದೆನಯ್ಯಾ ಮುದ್ದು
ಮೋಹದಾ ಹರಿಕಂದಾ ಪ್ರಹ್ಲಾದರಾಯಾ ೨

ಇಷ್ಟಕ್ಕೆ ನಾ ಬಿಡುವುದಿಲ್ಲ ನೀನು
ಥಟ್ಟನೆ ಕೊರಳ ಕೊಯ್ದರೆ ಯತ್ನವಿಲ್ಲಾ
ಕೊಟ್ಟು ಕಾಯ್ದರೇ ಅಹಿತವಲ್ಲಾ ನಮ್ಮ
ಧಿಟ್ಟ ಶ್ರೀ ಹನುಮೇಶವಿಠಲನ ಜಾಲಾ ೩

## ೨೬೯

ರಾಯ ಬಾರೋ ತಾಯಿ ಬಾ ಎನ್ನ ಕಾಯಲು
ತ್ವರ ಬಾರೋ ನೀ ಗುರು ಪ

ದಿನದಿನಕೆ ಮನಸಿನ ತಾಪವು
ಘನವಾಗುವುದನ್ನು ಬಿಡಿಸಲು ಬಾರದು ೧

ಅರಸನಾಗಿ ನೀ ಧರೆಯನಾಳಿದಿ
ಭರತ ಭೂಮಿಯಲಿ ಅವತರಿಸಿದಿ ಮತಿ- ೨

ವರಗುಣಮಣಿಯೇ ಕರುಣದ ಖಣಿಯೇ
ಶರನಾದವನನ್ನು ಬಿಡಿಸೋ ಬಾ ಗುರು ೩

ಬಾಲ್ಹೀಕನೇ ಬಾ ಪ್ರಲ್ಹಾದನೇ ಬಾ
ತಲ್ಲಣಿಸುವೆ ಯತಿ ಆಗಿ ಬಂದ ಗುರು ೪

ಸುಮ್ಮನಿರುವೆ ಮತ್ತೊಮ್ಮೆ ಮರಗುವೆ
ಒಮ್ಮನಸಿಲ್ಲವೋ ಸನ್ಮುಖನಾಗೈ ೫

## ೨೭೦

ಮಂಗಳ ಶ್ರೀ ಯತಿವರಗೆ ಮಂಗಳ ಶ್ರೀ ಹರಿಸುತಗೆ
ಮಂಗಳ ಶೋಣಿತ ಪುರಧೀಶಗೆ ಮಂಗಳ ಗುರುವರಗೆ ಪ

ಹರಿಸರ್ವೋತ್ತಮನೆಂದು ಪರಮ ಭಕ್ತಯಲಿಂದು
ಹರುಷದಿ ಶ್ರೀ ನರಹರಿಯನು ಖಂಬದಿ ತ್ವರದಲಿ ಕರೆದವಗೆ ೧

ಪರಿಮಳ ಗ್ರಂಥವ ಮಾಡಿ ಹರಿಯ ಪಾದಕೆ ನೀಡಿ
ಪರಮ ಸುಧೀಂದ್ರರ ಕರದಲಿ ಯತಿ ಆಶ್ರಮ ಪಡೆದವಗೆ ೨

ಭಕ್ತರ ಭಾಗ್ಯನಿಧಿಗೆ ನಿತ್ಯಸುಖಾ ಪಡೆದವಗೆ
ಮುಕ್ತಿಯ ದ್ವಾರವ ತೋರುವ ಗುರುರಾಘವೇಂದ್ರನಿಗೆ ೩

ಕರುಣಾಸಾಗರನೀತಾ ಕರೆದಲ್ಲೆ ಬರುವಾತಾ
ಮೊರೆಯಂದೊದರಲು ಭಕ್ತರ ಪಿಡಿಯುವ ಮೀರದೇ ಕಾಯ್ವುವಗೆ ೪

ವರಧೀರ ಹನುಮೇಶವಿಠಲನಾ ನಿಜದಾಸಾ
ಸರಸದಿ ಅರ್ಚನೆಗೊಳ್ಳುವ ಮಂತ್ರಾಲಯ ಪುರವಾಸನಿಗೆ ೫

## ೨೭೧

### ಶ್ರೀ ಸತ್ಯಬೋಧರು

ನೋಡಿ ಧನ್ಯನಾದೆ ಸತ್ಯಬೋಧರಾಯಾ
ಬೇಡಿದೊರುವ [ಬೇಡಿದ ವರವ] ನೀಡುವ ಪರಮದಯಾಕರನಾ ಪ

ರಘುರಾಮನ ಸೇವೆಯನ್ನು ಮಾಡ್ದ ಮಹಿಮನಾ
ಪೊಗಳಿ ಪಾಡುವರಿಗೆ ಮುಕ್ತಿ ಪಥವ ತೋರ್ವನಾ ೧

ವಿಷವ ಮೆದ್ದು ಹರಿಕೃಪೆಯಿಂ ಜೀರ್ಣಿಸಿದವನಾ
ಆಶೀರ್ವದಿಸಿ ಖಂಡೆರಾಯನುದ್ಧರಿಸಿದವನಾ ೨

ವರಭೂಸುರರಾಡಿದ ನಿಂದೆಯನು ನುಡಿಯನಾ
ತ್ವರದಿ ಕೇಳಿ ತೋರಿದನು ಇವನು ಸೂರ್ಯನಾ ೩

ಕೊಡು ಭಕುತಿಯನು ನಿನ್ನೊಳು ಗುರುಸತ್ಯಬೋಧನೆ
ಬಿಡಿಸೊ ನಿನ್ನ ಅಡಿಗೆ ಕಟ್ಟಿಕೊಳ್ಳೈ ಕೊರಳನೆ ೪

ಹರಿವಾಯುಗಳಲಿ ಕೊಡು ನೀ ನಿಜ ಭಕುತಿಯನೆ
ವರದ ಶ್ರೀ ಹನುಮೇಶವಿಠಲನಡಿ ಸೇವಕನೇ ೫

## ೨೮೨

ನೋಡಿದೆ ಗುರುಗಳ ನೋಡಿದೆ ಪ

ನೋಡಿದೆನು ಗುರುಗಳನು ವಂದನೆ
ಮಾಡಿದೆನು ಚರಣಾಬ್ಜದಲಿ ಕೊಂ-
ಡಾಡಿದವರಿಗೆ ಬೇಡಿದ್ವರಗಳ
ನೀಡಿ ಪೊರೆಯುವ ಸತ್ಯಬೋಧರ ಅ.ಪ.

ಸತ್ಯಪ್ರೀಯರು ಕರೆದು ಆಶ್ರಮ
ವಿತ್ತು ಶ್ರೀ ಮಾನಾಮಧುರೆಯಲಿ
ಉತ್ತರಾದಿಮಠಾದಿ ಪೀಠವ
ಹತ್ತಿ ಸುರರಾಯನಂತಾಳ್ದರ ೧

ಹತ್ತು ಮತ್ತೊಂಬತ್ತು ವರುಷದಿ
ಸುತ್ತಿ ತೀರ್ಥಕ್ಷೇತ್ರಗಳ ಬಂ-
ದಿತ್ತ ಸವಣೂರಲ್ಲಿ ತಾವಿ-
ಪ್ಪತ್ತು ಮತ್ತೊಂದೊರುಷ ಮೆರೆದರ ೨

ಭೇದ ಮತವನೆ ಬೋಧಿಸುತ ದು-
ರ್ವಾದಿಗಳ ನಿರ್ವಾದ ಮಾಡುತ ಸದಾ

ಬಾದರಾಯಣ ರಾಮಮೂರ್ತಿಯ
ಪಾದ ಪದ್ಮಗಳಾರಾಧಕರ ೩

ಗರಳಮಿಶ್ರವ ಮಾಡಿ ಪಾಕದೊ-
ಳಿರಿಸೆ ಸೂದನು ಶ್ರೀಹರಿಗೆ ತಾವ್
ಅರಪಿಸಿದ ನೇವೇದ್ಯ ಬಿಡೆವೆಂ
ದರಿತು ಅದನುಂಡರಗಿಸಿದ ಘನರ ೪

ತರ್ಕಿಸುತಲಿರೆ ರಾತ್ರಿ ಭೋಜನ
ವಕ್ರಯತಿಗಳಿವರೆಂದು ಕುಹಕರು
ಅರ್ಕನನು ರಾತ್ರಿಯಲಿ ತೋರಿದ
ಮಾರ್ಕಾಂಡೇಯಾಂಶಜರ ಮೂರ್ತಿಯ ನೋಡಿದೆ ೫

ಹೋಗಿ ಕಾಶಿಗೆ ಬರಲು ಯೋಚಿಸ-
ಲಾಗಿ ತಾನೊಲಿದಿವರಿಗೋಸುಗ-
ವಾಗಿ ಮತ್ತೀ ಮರದ ಬುಡದಲಿ
ಭಾಗೀರಥಿ ಮೈದೋರೆ ಮಿಂದರ ೬

ಸೊನ್ನಿ ರಾಮಾಚಾರ್ಯರಿಗೆ
ಮುಂದಿನ್ನ ಕೋಡಗ ಜನುಮ ಬಂದಿರೆ
ಮನ್ನಿಸುತೆ ಪ್ರಾರಬ್ಧ ಪರಿಹರ-
ವನ್ನು ಗೈದಿಹ ಘನ್ನ ಮಹಿಮರ ೭

ಸತ್ಯಸಂಧರೆನ್ನುತ್ತ ಆಶ್ರಮ
ವಿತ್ತು ಶಿಷ್ಯಗೆ ಆಯುವಿಲ್ಲದಿರೆ
ಮತ್ತೆ ಆಯುರ್ದಾನವನು
ಮಾಡುತ್ತ ಕಾಯ್ದ ಮಹಾತ್ಮುಮರನಾ ೮

ಬಂದು ಸೇವಿಪ ಸುಜನ ವೃಂದವ
ಹೊಂದಿ ಪೊರೆಯುತ ಸ್ವರ್ಣಪುರದಲಿ

ನಿಂದು ವೃಂದಾವನದಿ ಪೊರೆವ ಕ–
ರ್ಮಂದಿಗಳ ಪಾದ ದ್ವಂದ್ವ ಕಮಲವ ೯

ಎಂತು ವರ್ಣಿಪೆ ಮಹ ಮಹಿಮೆಗಳ
ಸಂತತದಿ ಹನುಮೇಶವಿಠಲನ
ಚಿಂತಿಸುವ ಏಕಾಂತ ಭಕುತರ
ಚಿಂತಿತಾರ್ಥನೀವ ಗುರುಗಳ ೧೦

ಭೇದ ಮತಾಂಬುಧಿ ಚಂದ್ರ ಸತ್ಯಬೋಧ
ಸದ್ಗುರು ಗುಣ ಸಾಂದ್ರಾ
ವಾದಿ ಮತ್ತೇಭ ಮೃಗೇಂದ್ರ ಶ್ರೀ ಗುರುವರಮೋದತೀರ್ಥರ ೧೧

## ೨೭೩

ಪ್ರೀತಿಪಾತ್ರ ಬುಧೇಂದ್ರ ಪ

ಸತ್ಯಪ್ರಿಯರ ಕುವರಾ ನಿಜ ಭೃತ್ಯರ ಪಾಲಿಪ ಚತುರಾ
ಚಿತ್ತದೊಳೊಮ್ಮೆ ಸ್ಮರಿಪೆ ಪದಕಮಲವ ಮೃತ್ಯು
ಭಯವ ಕಳೆವುತ್ತ ಪೊರೆದೆ ೧

ವಿಷವನುಂಡರಗಿಸಿಕೊಂಡ ಧೀರಾ ವೃಷಕೇತು ಪಿತ ಭಕ್ತ ಶೌಂಡಾ
ವಿಷಮ ಬುದ್ಧಿಯಲಿ ವಾದಿಸ ಬಂದ ವಾದಿಗಳ
ಉಸಿರೆತ್ತಗೊಡದೆ ಸಾಧಿಸಿದೆ ಮಧ್ವಶಾಸ್ತ್ರ ೨

ಚರಣಕ್ಕೆ ಶರಣೆಂಬೆನಯ್ಯ ಎನ್ನ ಕರುಣದಿ ಪಾಲಿಸು ಜೀಯಾ
ಸಿರಿ ಹನುಮೇಶವಿಠಲನ ಪಾದ ಭೃತ್ಯರ ಚರಣ ಕಿಂಕರನ
ಕಿಂಕರನೆನಿಸುವದೆನ್ನ ೩

## ೨೭೪

ಶರಣು ಹೊಕ್ಕೆನು ನಿನ್ನ ಚರಣ ಕಮಲಕ್ಕೆ ನಾ ಗುರುಸತ್ಯಬೋಧರಾಯಾ
ಕರುಣಿಗಳರಸನೆ ತರಳನ ಮೊರೆ ಕೇಳಿ ಪೊರೆವುದು ಎನ್ನ ಜೀಯಾ ಪ

ಬೇಡಿಕೊಳ್ಳಲು ಬಾಯಿಬಾರದೋ ನಾ ಹಿಂದೆ ಮಾಡಿದಪರಾಧವ
ನೋಡದೆ ಎನ್ನವಗುಣ ಕೈಯಪಿಡಿದು ಕಾಪಾಡಲು
ನಿನಗೀಡೆ ದಯಮಾಡೆ ೧

ಪುಟ್ಟದ ಪುಟಕ್ಕಿಕ್ಕಿದ ಚಿನ್ನದಂತಿಹ ಶ್ರೇಷ್ಠ ವೈಷ್ಣವ ಕುಲದಿ
ಭ್ರಷ್ಟ ಮಾಡಿದೆ ಬಾಳು ಪೇಳಲೇನು ದಯದೃಷ್ಟಿ
ಇಡುವುದೆನ್ನೊಳು ದಯಾಳು ೨

ಮರುತ ಮತವ ನಂಬಿ ನಡೆವರ ಪದಧೂಳಿ ಧರಿಸುವ ಭಾಗ್ಯವನೇ
ಗುರುವರ್ಯ ಕರುಣಿಸು ಹನುಮನಯ್ಯನ ಪಾದಸರಸಿಜಭೃಂಗ
ನೀನು ಸುರಧೇನು ೩

## ೨೭೫

ಸತ್ಯಬೋಧರಾಯಾ ಪಾಲಿಸು (ನಿನ್ನ) ಭೃತ್ಯರ ನನ ಜೀಯಾ
ಸತ್ಯಪ್ರೀಯರ ಸುಪುತ್ರನಾಗಿ ಪುರುಷೋತ್ತಮನೊಲಿಸಿದ
ಸ್ತುತ್ಯ ಸುಕಾಯ ಪ

ದೂರ ನೋಡದಲೆನ್ನ ಗುರುವರ ಪಾರಗೈಪುದು ಮುನ್ನ
ಶ್ರೀ ರಮಾರಮಣನಾರಾಧಕರೊಳು ಧೀರ ನಿನಗೆ ಸರಿಯಾರಿಹರಯ್ಯ ೧

ಮತ್ತನಾಗಿಹೆ ನಾನು ಭವದಲಿ ಸತ್ತು ಹುಟ್ಟುತಲಿಹೆನು
ಚಿತ್ತಕೆ ತರದಲೆನ್ನವಗುಣಗಳ ಮತ್ತೆ ಕೈಪಿಡಿಯುತಲೆತ್ತುವುದು ೨

ಶರಣು ಶರಣು ದೊರೆಯೆ ಕರುಣದಿ ಪೊರೆದನ್ಯರನರಿಯೇ
ಕರುಣಾಕರ ಸಿರಿ ಹನುಮಯ್ಯನ ಪದ ಚರಣಾಂಬುಜ
ಮಧುಕರನಾಗಿರುತಿಹ ೩

## ೨೭೬

ಜಯ ಮಂಗಳಂ ಸತ್ಯಧೀರತೀರ್ಥರಿಗೆ
ಶುಭಮಂಗಳಂ ಯತೀ ಗುಣಮಣಿಗೆ ಪ

ಜಗದುದರಧರನಾದ ಜಗವ ಸೃಷ್ಟಿಸಿದಂಥ
ಜಗವ ಪಾಲಿಸುವ ಶ್ರೀ ಜಗದೀಶನಾ
ತ್ರಿಗುಣಮಾನಿಯಳಿಂದ ಬಗೆ ಬಗೆಯ ಸ್ತುತಿಗೊಳ್ವ
ರಘುವರನ ದಿವ್ಯ ಚರಣಗಳ ಸೇವಿಪಗೆ ೧

ಜಗದೀಶನಾಜ್ಞೆಯಿಂ ಜಗಕೆ ಗುರುವೆನಿಸಿ ನಾ-
ಲ್ಮೊಗನೈಯ್ಯ ಸರ್ವಪರಿಹಾರನೆನಿಸಿದವಗೆ
ಜಗದೊಳಿರುವ ಅಜ್ಞ ಜನರುಗಳಿಗೆ ಪಂಚಮು-
ದ್ರೆಗಳನೇ ಇತ್ತು ಪಾಪಗಳ ತರಿದವಗೆ ೨

ಸತ್ಯವೀರರು ಕರಗಳೆತ್ತಿ ಉತ್ತಮಪದವ
ಇತ್ತದ್ದೆ ಪುಸಿಯೆಂದು ನುಡಿದವರ ಮುಖಕೆ
ಮೃತ್ತಿಕೆಯನು ಹಚ್ಚಿ ಹತ್ತುಯಂಟೋ ರೂಪ ಸ-
ರ್ವೋತ್ತಮನ ಪೂಜಿಸಿದ ಸತ್ಯಧೀರರಿಗೆ ೩

ಪುರಕಾಶಿಯಿಂದ ರಾಮೇಶ್ವರದ ಪರಿಯಂತ
ಇರುವ ಕ್ಷೇತ್ರಗಳಲ್ಲಿಯ ಮಹಿಮೆಯಾ
ದುರುಳ ಕಲಿಯಲಿ ಕಡಿಮೆಯಾಗಬಾರದು ಮನುಜ
ಸಿರಿರಾಮನಾಶ್ರಯದಿ ಜನಿಸಿ ಬಂದವಗೆ ೪

ಕರುಣಾಸಾಗರನಿಗೆ ಕರೆದಲ್ಲಿ ಬರುವಗೆ
ಶರಣುಬಂದವರ ಪರಿಪಾಲಿಸುವಗೆ

ವರಗುರು ಮಧ್ವರಾಯರ ಪೀಠಪಾತ್ರಗೆ
ಧೀರ ಹನುಮೇಶವಿಠಲ ೫

# ೨೭೭

## ಶ್ರೀ ಸತ್ಯಧೀರರು

ಪಾರು ಮಾಡೋ ಸತ್ಯಧೀರನೆ ನಿನ್ನಯ ಚಾರು
ಚರಣಗಳಿಗೆರಗುವೆನು ಪ

ಘೋರಮಾಯದ ಸಂಸಾರದೊಳಗೆ ಈಸಲಾರೆನೊ
ವರಮತಿಗುಣಗನ ಮಣಿಯೆ ಅ.ಪ.

ಯತಿ ಆಶ್ರಮದಿ ಸೀತಾ ಪತಿಯ ಪೂಜಿಸುತಿರೆ
ಮತಿಹೀನರಪಹಾಸ್ಯ ಮಾಡಿದರೆ
ಸತತ ದಶಮಾಷ್ಟ ವರ್ಷಗಳ ಪರಿಯಂತ ಹರಿಸೇವೆಯಾ
ಅತಿ ಭಕುತಿಯಿಂದಲಿ ಮಾಡಿದ್ಯೋ ಜೀಯಾ
ಹಿತದಿಂದ ಕೈಗೊಂಡ ದಶರಥನಂದ ರಘುರಾಯ
ಯತಿವರನೆ ನಿನ್ನಯ ಕ್ಷಿತಿಯೊಳಗೆ ಹರಿ
ಭಕುತರನು ಕರೆವುತಲಿ ಬರುತಿರುವಂತೆ ನಿನ್ನಯ
ಪ್ರತಿ ದಿಗಂತ ಪರಿಹರಿಸಿದ ವರಕೀರ್ತಿ ಆಶ್ರಯದಿಂದ ಬಂದೆ ೧

ವರಮಧ್ವಮತಾಭಿಮಾನಿಯೆ ನಿನ್ನಯ
ದರುಶನದಿಂದ ಪಾವನನಾದೆನೋ
ದೊರಕಾದೊ ಯಂದಿಗೆಲ್ಲರಿಗೆ ಈ ಗುರುಗಳ
ವರಸೇವಾ ಸರ್ವಜ್ಞ ಪೀಠಕೆ
ಸರಸ ಶೋಭಿಸುವಾ ಹರಿವಾಯುಗಳಲಿ
ನಿಷ್ಟಯದ ಭಕುತಿಯನು ಪಾಲಿಸುವಾ ನಿರುತದಲಿ ಕಾವಾ
ಪರಮಭಕ್ತರ ಭಾಗ್ಯನಿಧಿಯಂದರಿದು ಹಂಬಲಿಸುತಲಿ ನಿನ್ನಯ
ಚರಣಕೆರಗಿದೆ ತ್ವರದಿ ಕರುಣಿಸಿ ಪೊರೆಯೊ ಶರಣರ ಸಂಜೀವಾ ೨

ಆನಂದಜ್ಞಾನದಾಯಕನಾಜ್ಞೆಯಿಂ ಸತ್ಯಜ್ಞಾನಾ–
ನಂದಗಿತ್ತಿ ಉತ್ತಮಪದವಾ
ಗಾನಲೋಲನ ಜಗತ್ಪಾಲನ ಪ್ರಿಯನೇ ತವ ಸೇವಾ
ಅನುಮಾನ ಮಾಡದೇ ಪಾಲಿಸೋ ದೇವಾ
ತನುವನೊಪ್ಪಿಸಿ ಇಡುವೆ ನಿನ್ನಡಿಗಳ ಮೇಲೆ ಶಿರವಾ
ಬಿಡಿಸೊ ದುರ್ಭಾವನಜ ಸಂಭವಾ ಧೀರ ಶ್ರೀಹನುಮೇಶವಿಠಲ
ಸೇವಕನೋ
ಅನುಚಿತೋಚಿತಕರ್ಮ ಕೃಷ್ಣಾರ್ಪಣವೆನುವ ಸುಮನವ ಕೊಡು ನೀ ೩

## ೨೭೮

### ಶ್ರೀ ಸತ್ಯಜ್ಞಾನರು

ಎಂಥಾದು ನಮ್ಮ ಗುರುಗಳ ಪಾದ ಕಂತುಪಿತನ ದಿವ್ಯಪಾದಾ
ಅಂತಕನ ಭಯ ಬಿಡಿಸುವಾ ಪಾದ ಸಂತೋಷವ
ಕೊಡುವಂಥ ಪಾದಾ ಪ

ಬೇಡಿದ ವರ ನೀಡಿದಾ ಪಾದ ಮೂಢಮತಿಯನ್ನು
ಬಿಡಿಸುವ ಪಾದಾ
ಬ್ಯಾಡಾದವರಲ್ಲಿ ಮುರಿಯುವ ಪಾದಾ ಪೊಡವಿಯ
ಪಾವನ ಮಾಡ್ವ ಪಾದಾ ೧

ನಿತ್ಯ ಸುಖವನ್ನು ಕೊಡಿಸುವ ಪಾದಾ ಮಿಥ್ಯಾಸುಖವನ್ನು
ಬಿಡಿಸುವ ಪಾದಾ
ಭಕ್ತ ಜನರಿಗೆ ಭಾಗ್ಯದ ಪಾದಾ ಸತ್ಯಜ್ಞಾನಾನಂದರ ದಿವ್ಯ ಪಾದಾ ೨

ಧೀರ ಹನುಮೇಶವಿಠಲನ ಪಾದಾ ಅರ್ಚಿಸಲು
ತುಳಸಿಯ ತಂದ ಪಾದಾ
ಜರಿದು ಷಡ್ವೈರಿಗಳ ಗೆದ್ದ ಪಾದಾ ಪರಮ ಮಂಗಳಕರವಾದ ಪಾದಾ ೩

## ೨೭೯

ಕರುಣಿಸಿಕೊಡು ಜೀಯಾ ಹರಿವಾಯುಗಳಲಿ
ದೃಢತರದ ಭಕುತಿಯಾ
ತವದ್ವಾರದಿಂದಲಿ ದೊರಕುವುದು ನಿಶ್ಚಯಾ ತರಿ ಎನ್ನ ಮಾಯಾ
ಪರಿಹರಿಸೋ ಈ ಭವತಾಪವ ಪರಿಹರಿಸದಲೇ ಭರದಿ ಬಂದೆನು
ಪರಮ ಪಾವನ ಸತ್ಯಜ್ಞಾನ ಶ್ರೀ ಗುರುವರನೇ ತವ ಚರಣಕೆರಗುವೆ ಪ

ಮಂದಭಾಗ್ಯನು ನಾನು ವ್ರತನೇಮ
ಕರ್ಮಗಳೊಂದು ನಾನರಿಯೇ
ಮುಂದಿನ ಪಥವನು ತೋರ್ವ ತಂದೆಯು ನೀನು
ನಿನ್ನಯ ಪಾಲಿಗೆ
ಬಂದ ದಾಸನು ನಾನು ಪಾಲಿಸುವುದಿನ್ನು ಇಂದು ತವ
ಚರಣಗಳ ದ್ವಂದ್ವಕೆ
ವಂದಿಸುವೆ ದಯಾಸಿಂಧು ಎನ್ನನು ಸಂದೇಹ
ಮಾಡದಲೆ ಸಲಹೋ
ಆನಂದತೀರ್ಥರ ಪೀಠಪೂಜನೇ ೧
ಭ್ರಷ್ಟನಾದವ ನಾನು ಸೃಷ್ಟಿಸಿದ ಹರಿಯನು ಮರೆತು ದಿನಗಳೆದನು
ಪೊಟ್ಟೆಗೋಸುಗ ದುಷ್ಟರಿಗೆ ಬೇಡ್ದೆನು ಕಂಗೆಟ್ಟು
ಪಡ್ಡೆರಧೊಟ್ಟಿ(ಪಡ್ಡೆರದು+ಹೊಟ್ಟಿ) ಹೊರಕೊಂಡೆನು
ಪಾಪಿಷ್ಟ ನಾನು ಇಷ್ಟದಾಯಕ ಮುಟ್ಟಿ ಭಜಿಸುವೆ
ಸುದೃಷ್ಟಿಯಲಿ ನೋಡಿ ಎನ್ನಯ ಕೆಟ್ಟ ಮನವನು ಕಳೆದು ಜ್ಞಾನದ
ದೃಷ್ಟಿ ಕೊಡುವುದು ಶ್ರೇಷ್ಠ ಮಹಿಮನೆ ೨

ದಾನಧರ್ಮಗಳನ್ನು ಈ ಕರಗಳಿಂದಲಿ ಮಾಡಲಿಲ್ಲವೊ ನಾನು
ಹನುಮೇಶವಿಠಲನ ಸ್ಮರಣೆ ಎಂಬುವುದನ್ನು
ಧನವನಿತೆಸುತರಾ ಮೋಹದೊಳು ಮರೆತೆನು ಗುರುವರನೆ ನೀನು
ಜ್ಞಾನವಿಲ್ಲದ ದೀನದಾಸನ ಹೀನಗುಣ ಎಣಿಸದಲೆ ಪಾಲಿಸೊ
ದೀನಜನ ಮಂದಾರನಿಲಯನೆ ಕಾಮಿತಾರ್ಥವನೀವ ದಾತನೇ ೩

## ೨೮೦

ವಂದಿಪೆ ಯತಿವರೇಂದ್ರ ತವ ಪಾದದ್ವಂದ್ವಕ್ಕಾನಂದಾ ದಿನಾ
ಬಂದ ಕಂದನಾ ಪಾಲಿಸೆಂದೆ ಪ

ಮಂದಮತಿಯು ನಾ ನಿಂದ್ಯನಾಗಿ ಮಾಯಾಬಂಧನದೊಳು
ಸಿಲ್ಕಿರುವೆನಾ
ತಂದೆ ಸತ್ಯಜ್ಞಾನಾನಂದಮೂರ್ತಿ ಬಹು ನೊಂದೆನಾ
ಶರಣು ಬಂದೆನಾ ೧

ಬೇಡ ಬಂದೆ ನಿನ್ನಾ ಕಾಡುವೆನೆಂದೆನ್ನಾ ದೂಡದೆ ಈ
ಮೂಢ ಸೇವಕನಾ
ಗಾಢ ಪಂಚಮುದ್ರೆ ನೀಡಿ ನೀ ಮಾಡಿಕೊ ದಾಸನಾ
ಬಿಡಿಸೊ ವ್ಯಸನಾ ೨

ಶ್ರೀಶನಾದ ಹನುಮೇಶವಿಠಲನ್ನಾ ದಾಸ ಉದಾಸೀನದಲ್ಲೆ ಎನ್ನಾ
ಪೋಷಿಸೊ ನೀ ಮನದಾಸೆ ಪೂರೈಸಿನ್ನು ಕರುಣಾಜ್ಞಾನಪೂರ್ಣ ೩

## ೨೮೧

ಪಾಲಿಸೆನ್ನ ಪಾವನ ಮೂರ್ತಿಯೇ ಪ

ಸತ್ಯಜ್ಞಾನಾನಂದತೀರ್ಥ ನಿನ್ನಯ ಉತ್ತಮ ಹಸ್ತವನಿಟ್ಟು ಅಭಯಾ
ಭಕ್ತಗೆ ಅಂಕಿತವಿತ್ತು ಕಾಯೋ ಕರುಣಾನಿಧಿಯೇ ೧

ಆನಂದತೀರ್ಥರ ಗ್ರಂಥಶ್ರವಣ ನೀನೆ ಮಾಡಿಸೆನ್ನೊಳಿಟ್ಟು ಕರುಣಾ
ಮಾನಾಭಿಮಾನವು ನಿನ್ನ ಈ ದಾಸನಾ ೨

ಮೂಢನೆನ್ನ ಕರಪಿಡಿದು ಉದ್ಧಾರ ಮಾಡೊ ಗುರುವರ
ತಡವ್ಯಾಕೆ ತ್ವರಾ
ಪಡೆಯೋ ಹನುಮೇಶವಿಠಲ ಪ್ರಿಯ ಕುವರಾ ೩

## ೨೮೨

ಗುರು ಸತ್ಯಜ್ಞಾನರ ಚರಣ ದರುಶನದಿ
ನೂರಾರು ಜನ್ಮ ಪಾವನವಾಯಿತು ಮುದದಿ ಪ

ಗುರುಗಳುಪದೇಶದಿಂ ಪರಮ ಪಾವನನಾದೆ
ನರಹರಿಯ ಭಜಿಸುವ ಅಧಿಕಾರಿಯಾದೆ
ಗುರುಮಧ್ವರಾಯರಾ ಗ್ರಂಥಶ್ರವಣಾದಿಗಳ
ನಿರುತದಲಿ ಮಾಡುವುದಕರ್ಹನಾದೆ ೧

ಗುರುಗಳುಪದೇಶವಿಲ್ಲದೆ ಮಾಡುವ ಮಂತ್ರ
ಗುರುಗಳುಪದೇಶವಿಲ್ಲದ ಜ್ಞಾನವು
ಗುರುಗಳುಪದೇಶವಿಲ್ಲದ ಕರ್ಮಕವನಗಳು
ಉರಗವಾಸದಂತೆ ಕಾಣಯ್ಯ ೨

ಅಂಕಿತವಿಲ್ಲದಾ ಪದ್ಯಗಳು ಶೋಭಿಸವು
ಅಂಕಿತವು ಇಲ್ಲದಿರಬಾರದೆನುತಾ
ಪಂಕಜನಾಭ ಹನುಮೇಶ ವಿಠಲನೆಂಬೊ
ಅಂಕಿತವನಿತ್ತಾ ಗುರುವು ಮಾಡಿ ಮಮತಾ ೩

## ೨೮೩

ಸತ್ಯಜ್ಞಾನ ತೀರ್ಥರಿತ್ತರಂಕಿತವನ್ನು ಇನ್ನೇನಿನ್ನೇನು
ನಿತ್ಯ ಹರಿಯ ಭಜಿಸುವ ಅಧಿಕಾರಿಯಾದೆನಿನ್ನೇನಿನ್ನೇನು ೧

ಕಷ್ಟಬಟ್ಟ ದಿವ್ಯ ಶ್ರೇಷ್ಠಮಾರ್ಗವು ಸಿಕ್ಕಿತಿನ್ನೇನಿನ್ನೇನು
ಎಷ್ಟು ಪೇಳಲಿ ಎನ್ನಾದೃಷ್ಟವು ತೆರೆಯಿತು ಇನ್ನೇನಿನ್ನೇನು ೨

ಹನುಮೇಶವಿಠಲನೆಂಬೊ ನಾಮ ಅಂಕಿತವಿತ್ತರಿನ್ನೇನಿನ್ನೇನು
ದಿನವು ದೈವಗಳಿಗೆ ನಮಿಸಿ ಬೇಡ್ವದು ತಪ್ಪಿತಿನ್ನೇನಿನ್ನೇನು ೩

## ೨೮೪

### (ಉ) ಆತ್ಮನಿವೇದನೆ

ಕರುಣಿಸಯ್ಯ ರಘುವೀರನೆ ಸೇವಕ ನಾ ದೂರದಿ
ನೋಡದೆ ತ್ವರದಿ ಪ

ಹೆಂಡತಿ ಮಕ್ಕಳ ಭ್ರಾಂತಿಯೊಳನ್ಯರ ದಂಡಿಸಿ ಧನವ ಹರಿಸಿದೆನೋ
ಭಂಡತನದಲಿ ಪ್ರಚಂಡನಾದೆನೋ ಹರಿ ಪುಂಡರೀಕಾಕ್ಷನೇ ೧

ಕಾಮನ ಬಾಧೆಯಿಂ ಕಾಮಿನಿಯರ ಕೂಡಿ ತಾಮಸನಾಗಿ
ನಾ ದಿನಗಳೆದೆ
ಹೇ ಮಹಾಭಾವನೇ ಪಾಮರನಾದೆ ಎನ್ನ ನೀ ಮಮತೆಯಿಂದಲಿ ೨

ಅಟ್ಟಮೇಲೆ ಒಲೆ ನೆಟ್ಟಗುರಿವಂದದಿ ಕೆಟ್ಟ ಮೇಲೆಚ್ಚರ ಹುಟ್ಟಿತೆನಗೆ
ಮುಟ್ಟಿ ಭಜಿಪೆ ದಯವಿಟ್ಟು ಕಾಯೋ ಹನುಮೇಶವಿಠಲ
ನೀ ದಯದಿ ೩

## ೨೮೫

ಕೇಳು ಪೊರೆ ಶಾಂತ ತಾಳು ರಂಗಾ ನಿನ್ನಾಳು ನಾನಿರುವೆ ಕೃಷ್ಣಾ ಪ

ನಾಳೆಯೆಂದರೆ ತಾಳೊದಾಗೋದು ಭಾಳ್ಟೆಳೆಂದಿಲ್ಲಾ
ಆಳೋ ಅರಸನೇ ಅ.ಪ.

ಗಾಣ ಎಳೆಯುವ ಕ್ವಾಣನಾದೆನೋ ಕಾಣವೋ ನಯನಾ
ತ್ರಾಣ ಕಡಿಯಿತು ಗೋಣು ನಿನಗೆ ನಾ ಕಾಣಿ ಕೆಯಿನಿತ್ತೆ
ವೇಣುಗೋಪಾಲ ೧

ತಾಯಿಯ ಮತಿ ಬೇರೆ ಮಾಯಾ ಮಗನಿಗೆ ನಾಯನಾಗಿರುವೆ
ಘಾಯದ ಮೇಲೆ ನೋಯಿಸುವರಯ್ಯಾ ಮಾಯಾ ಬಿಡಿಸಿ
ಕಾಯೋ ನರಹರಿ ೨

ಬೇಡುವರು ಧನ ಕಾಡಿ ಎನ್ನನು ನೋಡು ಫಣಿಶಯನಾ
ರೂಢಿಯೊಳು ಕುಣಿದಾಡುತಿಹರಯ್ಯಾ
ನಾಡಿಗೊಡೆಯಾ ಕೈ ಜೋಡಿಸುವೆನಯ್ಯಾ ೩

ಬೇಗ ತವದಾಸನಾಗಿ ಮಾಡಿಕೋ ಸಾಗರಶಯನಾ
ಈಗ ಭವಭಯ ನೀಗಿಸೈಯ್ಯ ಕೈ ಸಾಗದಾಯಿತು ಭಾಗವತಪ್ರಿಯಾಳಿ

ಆಶಾ ಬಿಡಿಸಿ ನೀ ಲೇಸು ಕೊಡು ಹನುಮೇಶವಿಠಲನೇ
ಘಾಸಿಯಾದೆನು ಪೋಷಿಸಯ್ಯ ರಮ್ಯಶ ಪಂಢರಿವಾಸ ವಿಠಲ ೫

## ೨೮೬

ಕೊಡಿಸೊ ಅಂಕಿತವಾ ಗುರುರಾಯಾ ನಿನ್ನ
ಅಡಿಗಡಿಗೆರಗಿ ನಾ ಬೇಡುವೆನಯ್ಯಾ ಪ

ಕರುಣಾಸಾಗರನೆಂದು ಬಂದೆ ನಿನ್ನ ಚರಣವ ನಂಬಿ
ನಾ ಶರಣೆಂಬೆ ತಂದೆ
ಮರಿಯದೆ ಬಹು ತ್ವರದಿಂದೆ ನಿನ್ನಾ
ದರುಶನ ನುಡಿಯ ಪಾಲಿಸೋದಯದಿಂದ ೧

ಕಡುಭಕ್ತಿಯಿಂದ ನಾ ಬೇಡಿಕೊಂಬೆ ಕೊಡುವ ಕರ್ತನು
ಎಂದು ಬಿಡದಲೇ ಕಾಡಿ
ಕಡೆಹಾಯಿಸದೆನ್ನನು ನೋಡಿ ಕೈಬಿಡಬ್ಯಾಡೊ ಕರುಣಿಸೋ
ನೀ ದಯ ಮಾಡಿ ೨

ಕೊಡು ದಿವ್ಯ ಭಕುತಿ ವೈರಾಗ್ಯ ನಿನ್ನ ಅಡಿಗಳ ಸಾಕ್ಷಿ ನಾ
ಬೇಡ್ವೆ ಈ ಭಾಗ್ಯ
ಕಡೆಸೊ ಅಜ್ಞಾನವ ಯೋಚಿಸಿ ಕಷ್ಟ ಬಡಿಸಿ ಸುಮ್ಮನೆ
ನೋಡುವದೇನೊ ಯೋಗಿ ೩

ದುಷ್ಟ ಪಾಪಿಷ್ಟನು ನಾನು ಅದನಷ್ಟು ಕ್ಷಮಿಸಿ
ಇಷ್ಟಾ ಪೂರೈಸೋ ನೀನು
ಇಷ್ಟಕೆ ದಯಬಾರದೇನೋ ದಯಾದೃಷ್ಟಿಯಿಂದಲಿ
ನೋಡೊ ಸುರ ಕಾಮಧೇನು ೪

ಇಂದು ಇದ್ದವ ನಾಳೆಗಿಲ್ಲ ಇನ್ನು ಮುಂದೆ ಸಿಗುವುದು
ಅಂತರ್ಯಾಮಿ ಬಲ್ಲ
ಹನುಮೇಶವಿಠಲನ ಬಾಲಾ ನೀನು ಇಂದೆ
ಇತ್ತರೆ ನಿನ್ನ ಕೇಳ್ವರಿಲ್ಲಾ ೫

## ೨೮೭

ಗುರುರಾಯ ಪಾಲಿಸುವುದು ನೀ ಎನ್ನ ಪ

ಅನ್ಯರೊಬ್ಬರನಾ ನಾ ಕಾಣೆ ಮನ್ನಿಸಿ ಸಲಹುವರನಾ
ನಿನ್ನವನೊ ನಾನು ಅನುದಿನದಲಿ ನಿನ್ನ ನೆನೆದು
ನೆನೆದು ಇಂದಿನವರೆಗೆ ನಾ ದಿನಗಳೆದೆನೋ ಅ.ಪ.

ಇಷ್ಟುದಿನ ಪಟ್ಟ ಕಷ್ಟವು ಸಾಕೋ ಇಷ್ಟಕೆ ನೀ ದಯಾದೃಷ್ಟಿ
ಇಟ್ಟು ಜ್ಞಾನವ ಕೊಡಬೇಕೊ
ಕಪಟ ಬುದ್ಧಿಯನಷ್ಟು ಕಳೆದಿಷ್ಟವ ಪೂರೈಸಬೇಕೊ ಬಿಟ್ಟವನಲ್ಲೊನಾ
ಕೊಟ್ಟವರು ಪರಿಕರ ಬಿಟ್ಟವರು ಸರಿ ನಾ
ಕಟ್ಟಿಕೊಳ್ವೆ ತವ ಚರಣವ ಕೊರಳಿಗೆ ೧

ಇಷ್ಟದಾಯಕನೆಂಬುವ ತವ ಬಿರುದು ನಾನೆಷ್ಟು ಪೇಳಲಿ
ಅಷ್ಟದಿಕ್ಕುಗಳಿಗೆ ಪರಿಹರಿಸಿಹುದೊ
ಇಷ್ಟೆಲ್ಲ ಕೇಳಿ ನಾ ಇಟ್ಟೆ ಮನವನು ತವ ಪಾದದಿ ತಿಳಿದು
ಸಂತುಷ್ಟನೆ ಎನ್ನ ಬಿಟ್ಟರೆ ಮುಂದಿನ ಬಟ್ಟೆಯ ಕಾಣದೇ
ಕೆಟ್ಟು ನಾ ಮೂರಾಬಟ್ಟೆಯಾಗುವೆನೋ ೨

ಶ್ರೇಷ್ಠ ಹನುಮೇಶವಿಠಲನದಾಸಾ ದುಷ್ಟ ನಾನೆಂದರೆ ಸಿಟ್ಟಿನಿಂದಲಿ
ತವ ಪಾದದಿ ತುಳಿದು
ಮೆಟ್ಟಿ ಎನ್ನ ಶಿರ ಥಟ್ಟನೆ ಭೂಮಿಯಲಿ ಕೆಡಹುವುದು
ಹುಟ್ಟಿದರೆ ದಯವು ಅಟ್ಟಿ ಅಜ್ಞಾನವ ಕಟ್ಟಿ ಸುಜ್ಞಾನವ
ಘಟ್ಟಿ ಭಕುತಿಯನು ಕೊಟ್ಟು ನೀ ಪಾಲಿಸೊ 4

## ೨೮೮

ನರಹರಿಯನು ನೆರೆನಂಬಿದೆನು ನಾನು ಕರುಣಾವಾರಿಧೆ
ಪಾಲಿಸಯ್ಯಾ ಪ

ದುರಿತ ಸಾಗರದಿ ಬಿದ್ದಿರುವೆ ನೀ ಮರೆಯದೆ ತ್ವರದಿ ದಾಟಿಸೋ
ಎನ್ನ ಜೀಯಾ ಅ.ಪ.

ಸ್ನಾನಕ್ಕೆ ಮೈಛಳಿಯಾಯ್ತೋ ಧ್ಯಾನಕ್ಕೆ ಮರುವಾಯ್ತೋ
ದಾನಕ್ಕೆ ಲೋಭ ಅಡ್ಡಾಯಿತೋ
ಮಾನಕ್ಕೆ ಕೋಪಬೀಜವಂಕುರಿಸಿತೋ ಶ್ವಾನನಂದದಿ ಬಾಳಾಯ್ತೋ 1

ಬಲೆಯ ಕಾಣದೇ ಮೃಗ ಫಲಮೆಲುವುದಕ್ಹೋಗಿ
ತಲೆ ಸಿಕ್ಕುತೊಳಲುವ ತೆರದಿ
ಕುಲವೃಕ್ಷ ಕೊನೆಗಿದ್ದ ಫಲದಾಸೆಗೆ ಮಾಯಾ ಬಲೆಯೊಳು
ಬಿದ್ದೆನೊ ಭರದಿ 2

ನರನಾದ ಕುರಿ ನಾನು ಪೊರೆಯುವ ಧೊರೆ ನೀನು
ದುರಿತವ ತರಿದು ಕಾಪಾಡೋ
ವರದ ಶ್ರೀ ಹನುಮೇಶವಿಠಲನೆ ನಿನಗೆ ನಾ ಶರಣಾದೆ
ಕರವ ಬಿಡಬ್ಯಾಡೊ 3

## ೨೮೯

ನೀರಜಾಕ್ಷ ನಿರ್ದಯವ್ಯಾಕೊ ಕರುಣದಿ ಎನ್ನಾ ಪ

ಒಡಲಿಗನ್ನಾ ತೊಡಲು ಅರಿವೆ ಕೊಡುವವರನು ನಾ ಕಾಣೆ ಹರಿಯೇ
ಬಡತನ ಕಂಗೆಡಿಸಿತೋ ಕಡೆಗ್ಹಾಯಿಸಯ್ಯ ತ್ವರದಿ ಗುಣಮಣಿಯೇ ೧

ಖೂಳ ಜನರ ಆಳಾಗಿ ನಾ ಹಾಳು ಒಡಲನ್ನು ಹೊರೆಯಲಾರೇ
ಕೂಳಿಗೋಸುಗ ಬಾಳಾಯ್ತೀಪರಿ ತಾಳಲಾರೆ ಕಾಯೋ ಮುರಾರೇ ೨

ಕಷ್ಟಾಬಟ್ಟಾ ದುಷ್ಟಾಮೃಗ ನಾನು ದೃಷ್ಟಿಲಿ ನೋಡೋ
ನೀ ಕೈಬಿಡಬ್ಯಾಡೋ
ಶ್ರೀ ಹನುಮೇಶವಿಠಲನೆ ಎನ್ನಾ ಇಷ್ಟದಂದರಿ ಘಟ್ಟನೆ ಮಾಡೋ ೩

## ೨೯೦

ನೋವು ತಾಳಲಾರೆ ಹರಿಯೇ ಕಾವುದೆನ್ನನು
ಕರುಣಾಳು ದೊರೆಯೆ
ಸೇವಕನ ಕೈ ಬಿಡುವುದು ಸರಿಯೇ ಮಾವನಾ ಕೊಂದ
ಕೃಷ್ಣಮೂರುತಿಯೆ ಪ

ಕಣ್ಣುಗಳಿಗೆ ಕಾಣದ ನೋವು ಸಣ್ಣಾಗಿ ನೋಯಿಸುವಂಥ ನೋವು
ಹುಣ್ಣು ಘಾಯವು ಇಲ್ಲದ ನೋವು ಎಣಿಕೆ
ಇಲ್ಲದ ಬಾಧಿಪ ನೋವು ೧

ಬಡವನಾಗಿ ನಾ ಬಳಲುವ ನೋವು ಪಡೆದವರಿಗೆ
ಬ್ಯಾಡದ ನೋವು
ಮಡದಿ ಮಕ್ಕಳು ಕಾಡುವ ನೋವು ಪಡೆದ ಕರ್ಮದ
ಫಲವುಂಬೋ ನೋವು ೨

ವಿದ್ಯಾಬುದ್ಧಿಗಳಿಲ್ಲದ ನೋವು ಕದ್ದು ಪರಧನ ತಂದಂಥ ನೋವು
ಶುದ್ಧವಿಲ್ಲದ ಮನಸಿನ ನೋವು ಇದ್ದ ಋಣವನು ತೀರಿಸದ ನೋವು ೩

ಕೊಟ್ಟ ದಾನವ ಕಸಗೊಂಡ ನೋವು ಶ್ರೇಷ್ಠ ನಾನೆಂಬೊ
ಗರ್ವದ ನೋವು
ಶ್ರೇಷ್ಠ ದಾಸರ ಹಳಿದಂಥ ನೋವು ದುಷ್ಟ ಜನರ
ಕೊಂಡಾಡಿದ ನೋವು ೪

ದಾನಧರ್ಮವ ಮಾಡದ ನೋವು ಮೌನ ವ್ರತಗಳ
ಬಿಟ್ಟಂಥ ನೋವು
ಹೀನ ಬುದ್ಧಿಯ ಹೆಚ್ಚಾದ ನೋವು ಹನುಮೇಶ
ವಿಠಲನ ನೆನೆಯದ ನೋವು ೫

## ೨೯೧

ಪರಿಪರಿಯಲಿ ನೀ ಪಾಲಿಸೋ ನರಹರಿಯೆ ನಾನಾಪರಾಧಿ
ಶ್ರೀ ನರಹರಿಯೇ ನಾನಪರಾಧಿ ಪ

ಸತಿಸುತರು ಹಿತದವರೆಂದರಿತು ನಾ
ಮತಿಯಗೆಟ್ಟು ಕ್ಷಿತಿಪತಿಯೇ ನಿನ್ನನು ಸ್ತುತಿಸದಾ ಅಪರಾಧಿ ೧

ಬಂದ ಅತಿಥಿಗಳಿಗೊಂದಿಸದೆ ಪರ ನಿಂದೆಯಲ್ಲಿ ಗೋ-
ವಿಂದ ನಿನ್ನನು ವಂದಿಸದಾ ಅಪರಾಧಿ ೨

ತನುಮನಧನ ಕೊಟ್ಟಿರುವ ಶ್ರೀವರ ಹನುಮೇಶ
ವಿಠಲನೆ ನಿನ್ನನು ನೆನೆಯದಾ ಅಪರಾಧಿ ೩

## ೨೯೨

ಪಾಲಿಸು ಶ್ರೀನಿವಾಸ ಪಾಲಿಸೋ ಪ

ಪಾಲಿಸೋ ಯದುಕುಲ ಬಾಲಾ ಗಾನ-
ಲೋಲನೆ ಯಾಕಿಂಥ ಜ್ವಾಲಾ ಜನ್ಮ

ಬಲ್ಲೇನಾ ಸಂಸಾರಶೂಲಾ ನಿನ್ನ
ಚಾಲನದಿಂದಾದವೆಲ್ಲಾ ಪದ್ಮ
ಮಾಲೆಹಾಕುವೆ ಸಿರಿಲೋಲಾ ಆಹಾ
ಬಾಲನ ಪಡೆದು ಪಾಲಿಸಲಾರೆನೆಂದರೆ
ಸೀಲನೇ ಜನನಿ ಪದ್ಮಾಯಗಳಿಗೆ ಪೇಳ್ವೆ ೧

ನಾನು ಮಾಡುವುದೆಂಬುದಿಲ್ಲಾ
ಯೆನಗಾವ ಸ್ವಾತಂತ್ರ್ಯವು ಇಲ್ಲಾ ಇರೆ
ಅನುಗಾಲ ಕಷ್ಟವು ಸಲ್ಲಾ ಎನಗೆ
ಜನುಮಾದಿ ಭಯವು ಬಿಟ್ಟಿಲ್ಲ ನೀನು
ತನುಸ್ಥಾನ ಬಿಟ್ಹೋದ ಮ್ಯಾಲೆ ಎನ್ನ
ಸ್ವಾತಂತ್ರ್ಯವು ಇಲ್ಲವಾಯಿತಲ್ಲ ಆಹಾ
ಅನುದಿನ ಹಸಿವೆ ತೃಷೆಗಳಿಂದ ಬಳಲೋ ದಾ-
ಸನು ನಿನ್ನವನಿಗೆ ಸ್ವಾಧೀನವೆಲ್ಲಿಹುದೈಯ್ಯಾ ೨

ನಿತ್ಯ ಸಂಸಾರಿಯಾದೆನಗೆ ಮತ್ತೆ
ಮೃತ್ಯು ಬೆನ್ಹತ್ತಿರುವವಗೆ ಮಾಡೋ
ನಿತ್ಯ ಕರ್ಮ ಬದ್ಧ ಎನಗೆ ನೀ-
ಚತ್ವದಿದುಪಜೀವಿಸುವವಗೆ ನಾನು
ನಿತ್ಯನೆಂಬುವ ದುರಾತ್ಮನಿಗೆ ಆಹಾ
ಮುಕ್ತಿಗೊಡೆಯ ಪುರುಷೋತ್ತಮ ನಿನ್ನ ದಾ-
ಸತ್ವನಿತ್ತು ಸುಶಕ್ತನಮಾಡು ನೀ ೩

ನಿನ್ನ ಆಧೀನವೊ ಎಲ್ಲಾ ನಾನು
ನಿನ್ನ ದಾಸನು ಶಿರಿನಲ್ಲಾ ಅನು-
ದಿನ ಮಾಡುವ ಕಾರ್ಯವೆಲ್ಲ ನೀನು
ಚಲನೆದಂದದಿ ಮಾಡ್ವೆನಲ್ಲಾ ಯೆಂನೊ-
ಳಾವ ತಪ್ಪಿತವೇನೋ ಇಲ್ಲಾ ನಿನ್ನ
ಸಂಕಲ್ಪದಂತಾಗೋದೆಲ್ಲಾ ಆಹಾ

ತನುವ ಕೊಟ್ಟವ ನೀನೆ ತನು ಕೊಂಡೊಯ್ವನೂ ನೀನೆ
ಹನುಮೇಶವಿಠಲಾ ನಿನ್ನವನಾದ ಮ್ಯಾಲೆನ್ನಾ ೪

## ೨೯೩

ಪೊಡವಿ ಪತಿಯೇ ನಿನ್ನಾ ಅಡಿಗಳಿಗೆರಗುವೆ
ಕೊಡು ಭಕ್ತಿ ನಿನ್ನೊಳು ರಾಘವಾ
ತಡೆಯಲಾರೆನೋ ಈ ಕಡುತಾಪದಿಂದೆನ್ನ
ಕಡೆಗ್ಹಾಯಿಸೆನ್ನ ಶ್ರೀ ರಾಘವಾ ಪ

ಧರಣೀಶ ನಿನ್ನ ಚರಣವೇ ಗತಿ ಎಂದು
ಸ್ಮರಿಸುತ್ತಲಿರುವೆನೋ ರಾಘವಾ
ಸ್ಥಿರ ಭಕುತಿಯ ನಿನ್ನೊಳಿರಿಸಿ ಸತ್ವರದಿಂದ
ಕರುಣಿಸಿ ಸಲಹೈಯಾ ರಾಘವಾ ೧

ಪುಟ್ಟಿದುದಕೆ ನೀ ಹೊಟ್ಟೆಗೆ ಸಾಕಷ್ಟು
ಕೊಟ್ಟು ಕಾಪಾಡೊ ಶ್ರೀ ರಾಘವಾ
ಇಟ್ಟು ತವ ಸ್ಮರಣೆಯ ಕೊಟ್ಟೆನ್ನ
ಪುಷ್ಟವ ಮಾಡೋ ಶ್ರೀ ರಾಘವಾ ೨

ತನು ಧನ ನೀನೆ ಜನನಿ ಜನಕನು ನೀನೆ
ವನಿತೆ ಸುತರು ನೀನೆ ರಾಘವಾ
ಹನುಮೇಶ ವಿಠಲನೆ ದಿನಗಳೆಯದೇ ತ್ವರ
ಮನದಘ ಬಿಡಿಸೋ ಶ್ರೀ ರಾಘವಾ ೩

## ೨೯೪

ಬೇಡಿದ್ದು ಕೊಡಬಾರದೇನೊ
ಬ್ಯಾಡಾದದ್ದು ಕೊಟ್ಟರೆ ಮಾಡಬೇಕೇನೊ ಪ

ಸಂಸಾರದಲ್ಲಿ ಸುಖವಿಲ್ಲಾ ತಿಲಾಂಶವಾದರು
ಯೆನಗದು ಬೇಕಾಗಿಲ್ಲ
ಕಂಸಾರಿ ಅದು ತಾನೇ ಬಲ್ಲಾ ಹಸನ್ಮುಖ
ಹಂಸರೂಪವ ಕಾಣಲಿಲ್ಲ ೧

ಮಡದಿ ಮಕ್ಕಳ ವಲ್ಲೇ ನಾನು ಬಹುದುಡಿದು ದುಡಿದು
ಶ್ರಮ ಪಡಲಾರೆನಿನ್ನು
ಪೊಡವಿಪತಿಯೆ ನಿನ್ನ ಮರೆತೆನೋ ನಿನ್ನ
ಅಡಿಗಳಿಗೆರಗುವೆ ಕೊಡು ಮತಿಯನ್ನು ೨

ಉಂಡರೆ ಮನಿಯೊಳು ಸೇರರೊ ಮೈದುಂಡು
ಮಾಡಿಕೊಂಡು ಮೆರೆವೆನೆಂಬುವರೊ
ಕಂಡದ್ದಾಡಿದರೆ ಬೈಯುವರೋ ಬ್ರಹ್ಮಾಂಡಗೊಡೆಯ
ನಿನ್ನ ಮುಖವನ್ನು ತೋರೊ ೩

ನೀನೆ ಗತಿಯೆಂದು ಬಂದರೆ ನಿನ್ನ ಚಾರು ಚರಣಗಳ
ತೋರದಿರುವರೆ
ನಿನ್ನ ಅಗಲಿ ಕ್ಷಣ ಇರಲಾರೆ ಪಾವನ್ನ ಮಾಡೋ
ಮುಕುಂದ ಮುರಾರೆ ೪

ಜನನ ಮರಣವಲ್ಲೇ ನಾನು ಇಷ್ಟು ದಿನ
ಅನುಭವಿಸಿದ್ದು ಸಾಕಿನ್ನು
ತನುವನೊಪ್ಪಿಸಿದೆ ಹರಿ ನಿನಗಿನ್ನು ಹೇ ಹನುಮೇಶ
ವಿಠಲನೆ ಕೊಡು ಮುಕ್ತಿಯನ್ನು ೫

## ೨೯೫

ಭಕ್ತಿ ಭಿಕ್ಷೆ ನೀಡೋ ಹರಿಯೇ ಮುಕ್ತಿಗೊಡೆಯನೇ ಪ

ಹಗಲು ಇರಳು ಎಡೆಬಿಡದಲೆ
ಪೊಗಳುತ ತವ ನಾಮ ಮಹಿಮೆಯ

ಜಗದೀಶನೆ ನಿನ್ನ ಚರಣ
ಯುಗಳಲಿ ಬಹು ಭಕ್ತಿ ಮನ
ಬಗಿ ಬಗಿಯಲಿ ನಲಿದಾಡುವ ೧

ನಿತ್ಯನೆ ಸರ್ವೋತ್ತಮನೇ
ಮುಕ್ತಿಪ್ರದನೇ ಪರಮಾತ್ಮನೇ
ಉತ್ತಮ ವೃತ್ತಿಯಾನಿತ್ತು
ನೇತ್ರದಿ ತವ ನೋಡುತ ವರ
ಸ್ತೋತ್ರ ದಿನಾ ಪಾಡುತಿರುವೆ ೨

ಎನ್ನಪರಾಧಗಳನ್ನು
ಮನ್ನಿಸಿ ಸಲಹಯ್ಯಾ ಜೀಯಾ
ಹನುಮೇಶವಿಠಲರಾಯಾ
ನಿನ್ನ ಸ್ಮರಣೆಯಲ್ಲಿ ಕಾಲ
ವನ್ನು ಕಳೆಯುತಿರುವ ದಿವ್ಯ ೩

## ೨೯೬

ಮರತ್ಯಾಕೊ ಹರಿಯೆ ಮರಗುವೆನಾ ಕರುಣ ಬಾರದೆ ಪ

ಸಿರಿಗೆ ಭ್ರಮಿಸಿ ಸರಸ ಸುಖದಿ ಮರೆತು ಇರುವೆಯಾ
ಬರುವ ಮುಡುಪಿನ್ಹಣವನೆಣಿಸಿ ದಣಿದು ಮರತಿಯಾ ೧

ತ್ರಾಣ ಕಳದಿ ಹಣವ ಸೆಳದಿ ಮನವ ದಣಿಸಿದಿ
ಕಣ್ಣೀರಲಿ ಕೈ ತೊಳೆಸಿದಿ ಗುಣ ಗಣ ಮಣಿಯೇ ೨

ನಿನಗೆ ಆಟ ಎನಗೆ ಹರಿಯೇ ಪ್ರಾಣ ಸಂಕಟಾ
ಅನುಭವಿಸಲಾರೆನಕಟಾ ಪಾಹಿ ವೆಂಕಟಾ ೩

ಹರಿಯೆ ನೀನು ಗಿರಿಯೊಳು ನಿಂತಿರುವದ್ಯಾತಕೊ
ಸ್ಮರಿಸುವವರ ಪೊರೆವುದಕೊ ಧನ ಸೆಳೆವುದಕೊ ೪

ಇಟ್ಟರಿಡು ನೀ ಘಟ್ಟಿ ಭಕುತಿ ಕೊಟ್ಟು ನಿನ್ನೋಳು
ಧಿಟ್ಟ ಶ್ರೀ ಹನುಮೇಶವಿಠಲ ಥಟ್ಟನೇ ದಯದಿ ೫

## ೨೯೭

ಯಾಕೆ ಪುಟ್ಟಿಸಿದ್ಯೊ ಭೂಲೋಕದೊಳು ಎನ್ನಂಥ
ಪಾಪಿಷ್ಟರ ಕಾಣೆನೋ ಕೃಷ್ಣಾ ಪ

ಕಾಕು ಮಾಡದೇ ಕಾಯೋ ಶ್ರೀಕಾಂತ ಎನ್ನ
ಪಾತಗಳ ತರಿದು ಕೃಷ್ಣಾ ಅ.ಪ.

ಜನನಿ ಜನಕರು ಮುನ್ನಾ ಘನ ಪ್ರೀತಿಯನ್ನಾ ತನುವನ್ನು
ಬೆಳಸಿದದಕೆ ಕೃಷ್ಣಾ
ಮನಿ ಮನಿ ತಿರುಗಿ ಮುಪ್ಪಿನಲಿ ಸಲಹುವನೆಂದು ಘನವಿದ್ಯೆ
ಕಲಿಸಿದಕೆ ಕೃಷ್ಣಾ
ಧನ ತರುವ ಕಾಲದಲಿ ವನಿತೆ ಸುತರಿಗೆ ಮೆಚ್ಚಿ
ಜನನಿ ಜನಕರ ಬಿಟ್ಟೆನೋ ಕೃಷ್ಣಾ ೧

ಶುದ್ಧ ವೈಷ್ಣವನಾಗಿ ಪದ್ಧತಿಯನರಿಯದೇ ಅಪದ್ಧಕಾರ್ಯವ
ಮಾಡಿದ ಕೃಷ್ಣಾ
ಮಧ್ವರಾಯರ ಗ್ರಂಥ ಇದ್ದದ್ದೆ ಅರಿಯೆನೊ ಹದ್ದಿನಂದದಿ
ಬಾಳಿದೆ ಕೃಷ್ಣಾ
ಬುದ್ಧಿ ಹೋಯಿತು ಎನಗೆ ಕದ್ದುಂಡು ಕಾಯವನು
ಉದ್ದಾಗಿ ಬೆಳೆಸಿ ಮೆರೆದೆ ಕೃಷ್ಣಾ ೨

ಹಣವಿದ್ದವನ ಕಂಡು ಎಣಿಕೆ ಇಲ್ಲದೆ ಸ್ತುತಿಸಿ ತೃಣಕಿಂತ
ಕಡೆಯಾದೆನೋ ಕೃಷ್ಣಾ
ಗುಣವಂತರಾದ ಬ್ರಾಹ್ಮಣರನೆ ನಿಂದಿಸಿದೆ ಕೆಣಕಿ ಹಾಸ್ಯವ
ಮಾಡಿದೆ ಕೃಷ್ಣಾ
ಗಣನೆ ಇಲ್ಲದೆ ಪರರ ಹಣವನ್ನು ಅಪಹರಿಸಿ
ಬಣಗ ಲೆಕ್ಕಸನಾದೆನೋ ಕೃಷ್ಣಾ ೩

ಅಟ್ಟಹಾಸದಿ ಮಗನು ಹುಟ್ಟಿದಾ ದಿವಸದಲಿ ಮೃಷ್ಟಾನ್ನವ
ಮಾಡಿಸಿದೆನೋ ಕೃಷ್ಣಾ
ಸೃಷ್ಟೀಶನವತರಿಸಿದುತ್ಕೃಷ್ಟ ದಿವಸಲಿ ಬಿಟ್ಟಿಬೇಸರ ಮಾಡಿದೆ ಕೃಷ್ಣಾ
ಇಷ್ಟು ದಿನಗಳು ದುಷ್ಟಕೃತಿಯಲಿ ಮನಸ್ಸಾಕಿ
ಪುಟ್ಟಿಸಿದ ನಿನ್ನ ಮರೆತೆ ಕೃಷ್ಣಾ ೪

ಹಿಂದಾದ ಪಾಪಗಳ ಒಂದುಳಿಸದೇ ಕಳೆದು ಮುಂದೆ
ನೀ ಪಾಲಿಸುವುದು ಕೃಷ್ಣಾ
ಇಂದಿನಾರಭ್ಯ ಹೊಂದಿರುವ ತವಪಾದ ದ್ವಂದ್ವಗಳ
ತೋರಿಸುವುದು ಕೃಷ್ಣಾ
ಬಂಧು ಬಳಗವು ನೀನೆ ಮುಂದಿನಾ ಗತಿ ನೀನೆ
ತಂದೆ ಹನುಮೇಶವಿಠಲರಾ ಕೃಷ್ಣಾ ೫

## ೨೯೮

ಶರಣಾಗತ ರಕ್ಷಿಸಿ ಸ್ವಾಮಿ ಪೊರೆವುದು ಎನ್ನನು ಹರಿಯೇ
ಶರಣಾಗತನೊಳು ನಿರ್ದಯ ಸರಿಯೇ ಕರುಣಾಕರ ಗುಣನಿಧಿಯೇ ಪ

ಅಪರಾಧಗಳನು ಕ್ಷಮಿಸಿ ಸ್ವಾಮಿ ಕಾಪಾಡೋ ಮಾಧವನೇ
ಅಪಾರಪರ ಮಹಿಮನೇ ಪುರಾಣ ಪುರುಷೋತ್ತಮನೇ ೧

ಶಂಖಚಕ್ರಧರನೇ ಸ್ವಾಮಿ ಪಂಕಜಪಿತನೆ
ಸಂಕಟಪರಿಹಾರಕನೇ ನಮ್ಮ ವೆಂಕಟ ವಿಠಲನೆ ೨

ಸೃಷ್ಟಿಕರ್ತನು ನೀನೆ ಸ್ವಾಮಿ ಅಷ್ಟೈಶ್ವರ್ಯವೂ ನೀನೆ
ಶಿಷ್ಟರ ಪಾಲಿಪ ನೀನೆ ದುಷ್ಟರ ಸಂಹಾರಕನೇ ೩

ವೇದ ಪುರಾಣವು ನೀನೆ ಮೇಧಿನಿಗಧಿಪತಿ ನೀನೆ
ಮಾಧವ ಮಧುಸೂದನನೇ ಆದಿ ಮೂರುತಿ ನೀನೆ ೪

ಹನುಮೇಶ ವಿಠಲನೇ ಸ್ವಾಮಿ ಜನನಿ ಜನಕನು ನೀನೆ
ಜ್ಞಾನ ಪ್ರದಾಯಕ ನೀನೆ ಘನ ಮುಕ್ತಿಗೊಡೆಯನು ನೀನೆ ೫

## ೨೯೯

ಶಿರಬಾಗಿ ಬೇಡ್ವೆ ಎನ್ನನು ಪೊರೆಯೋ ಹರಿಯೇ
ಶರಣ ರಕ್ಷಕನೆಂಬೊ ಬಿರುದುಳ್ಳ ದೊರೆಯೇ ಪ

ಘನಮಹಿಮನೇ ನಿನ್ನ ಪಾವನ ಚರಣಕಮಲ ಎಂಬೋ
ಮನವ ಆಕರ್ಷಿಸುವ ಪಂಜರದಲಿ
ವನಜನಾಭನೆ ಎನ್ನ ಮನವೆಂಬ ರಾಜಹಂಸ
ನನ್ನ ಲೋಲ್ಯಾಡಿಸೋ ಅನುದಿನದಲಿ ೧

ಇಂದಿನ ದಿನವೇ ಸ್ಮೃತಿಯಿಂದ ಇರುವಾಗ ಮು–
ಕುಂದ ತವ ಸ್ಮರಿಸುವೆ ಕೊಡು ಮೋಕ್ಷವಾ
ಮುಂದೆ ಅಂತ್ಯದಲಿ ಕಫ ಪಿತ್ತ ಶೀತಾದಿ ಕಂಠ
ಗುಂದಿ ವಿಸ್ಮೃತಿಯಾಗಿ ಸ್ಮರಣವಹುದ್ಯೆಯ್ಯಾ ೨

ಶ್ರೀಶ ಹನುಮೇಶವಿಠಲನೇ ನಿನ್ನಾಧೀನ
ದಾಸನ ಮನದಪೇಕ್ಷವ ಪೂರಿಸೋ
ಕೇಶವನೆ ಶಾಸಕನೆಂದು ಆಶಿಸಿ ಬಂದೆ
ಬೇಸರ ಮಾಡದಲೆ ಪೋಷಿಸ್ವೈ ಸ್ವಾಮಿ ೩

## ೩೦೦

ಶ್ರೀಶಾ ಸರ್ವಮಹೀಶಾ ಸುರವರ ವಾಸುದೇವ ತವ ದಾಸೋಹಂ
ಕೇಶವ ಎನ್ನಾ ದೋಷಗಳೆಣಿಸದೆ ಪೋಷಿಸು ಹರಿ ತವ ದಾಸೋಹಂ ಪ

ಮುಕುತಿಗೆ ಮೂಲ ದೈವನೆಂದು ಕರಿ ಸಕಲ ಲೋಕಕರುಹಿದ ವಾರ್ತೆ
ಯುಕುತಿಗಳಿಂದಾ ಸ್ತುತಿಸಿ ದ್ರೌಪದಿ ಪ್ರಕಟಿಸಿದಳು ಹರಿ ತವ ಕೀರ್ತಿ ೧

ಸಕಲರಲ್ಲಿ ವ್ಯಾಪಕನೆಂಬುದು ಬಾಲಕ ಪ್ರಲ್ಹಾದ ಪ್ರಕಟಿಸಿದಾ
ಭಕುತನಾದ ಮಧ್ವಮುನಿ ಹರಿ ಸರ್ವೋತ್ತಮ ಹೌದುಹೌದೆನಿಸಿದಾ ೨

ಭಕುತರಿಗಾಗಿ ಜಗವ ಸೃಷ್ಟಿಸಿದಿ ಭಕುತರಿಗಾಗವತರಿಸಿದಿ
ಭಕುತರು ನಿನ್ನಾ ಭಜಿಸದಿದ್ದರೆ ಸಕಲರರಿವರೆಂತೊ ಜಗದಿ ೩

ಅವರಂದದಿ ನಾನಲ್ಲವೋ ಶ್ರೀಹರಿ ಅವರ ದಾಸರ ದಾಸನೋ ನಾ
ಅವರಿಗೆ ಒಲಿದ ದಯದಿಂದಲೀ ತವ
ಪಾದದಿ ಕೊಡು ಭಕುತಿಯನಾ ೪

ಮೆಟ್ಟುವ ಹಾವಿಗೆ ಮಾಡಿ ಎನ್ನನು ಇಟ್ಟುಕೋ ತವ ಪದಗಳಲಿ
ಥಟ್ಟನೆ ಮನದಿಷ್ಟ ಪೂರ್ದ್ವಸೊ ಹನುಮೇಶ ವಿಠಲ ತ್ವರ ಕರುಣದಲಿ ೫

## ೩೦೧

ಸಿರಿರಮಣ ತವ ಚರಣಕೆರಗಿ ಬೇಡುವೆ ನಾನು
ತ್ವರದಿ ಉದ್ಧರಿಸೋ ಈ ಭವದಿ ಬೇಗಾ ಪ

ಪೊಟ್ಟೆಯೊಳಿರುವ ಶಿಶು ಕಷ್ಟವನೆ ಕೊಡಲು ಸಹ
ಕೆಟ್ಟೋಗಲೆಂದು ತಾ ಬಯಸಳು
ಸೃಷ್ಟಿ ನಿನ್ನೊಳಗಿರಲು ಹೊಟ್ಟೆಯೊಳಗಿರುವೆನು
ಅಷ್ಟು ತಪ್ಪೇನು ಕ್ಷಮಿಸಿ ಪೊರೆವುದಾ ತೆರದಿ ೧

ಜ್ಞಾನವಿಲ್ಲದೆ ಹರಿಯೇ ನಾನು ನೀನು ಸರಿಸ-
ಮಾನರೆಂದರಿತು ನಾ ಮೋಸ ಹೋದೆ
ನಾನು ನಿನ್ನಾಧೀನವಿರುವೆನೇ ಹೊರ್ತು ನೀ
ನೆನ್ನಧೀನನೆಂದಿಗೂ ಅಲ್ಲವೊ ದೊರೆಯೇ ೨

ಏಸು ಜನ್ಮಗಳಿಂದ ವೇಷವಾ ಧರಿಸಿ ಹನು-
ಮೇಶ ವಿಠಲನೆ ನಾ ತೋರಿಸಿದೆನೋ

ಕೇಶವಾ ಕೊಡು ನೀ ಸಂತೋಷವಾಗಿರೆ ಮುಕ್ತಿ
ಬೇಸರಾಗಿರೆ ಇನ್ನು ವೇಷವನು ಬಿಡಿಸೊ ೩

## ೩೦೨

ಸೃಷ್ಟಿಗೊಡೆಯನೇ ನಿನ್ನ ದೃಷ್ಟಿಯಿಂದಲಿ ಎನ್ನ ಕಡೆ ನೋಡವಲ್ಲಿ ಪ

ಘಟ್ಯಾಗಿ ನೀ ಗತಿಯೆಂದು ನಾ ನಂಬಿದರೆ
ಸೊಟ್ಟಗಿಹ ಮೊಗವಟ್ಟವೇರುತಲಿದೆ
ಇಷ್ಟಿಲ್ಲವೆಂದು ನೀ ಬಿಟ್ಟ ರಾಜವನಲ್ಲಾ
ಕಟ್ಟುವೆನೋ ಇಟ್ಟು ಮನ ತವ ಪದದಿ ಬಿಡದೆ ೧

ಅಷ್ಟ ಸೌಭಾಗ್ಯ ಮದವೆಷ್ಟೋ ಅದರಿಂದ ದಯ
ದೃಷ್ಟಿ ಇಲ್ಲದೇ ನಯನ ಮುಚ್ಚಿ ತೆರೆಯುವುದೋ
ಭ್ರಷ್ಟನೆಂದು ದೂರ ದೃಷ್ಟೀಲಿ ನೋಡಿದರೆ
ಬಿಟ್ಟು ಕೊಡೊ ಭಕುತವತ್ಸಲನೆಂಬೋ ಬಿರುದು ೨

ಕಷ್ಟ ಸಂಸಾರದಾ ಸೂಳೆಯಾ ಬೀದಿಯಲಿ
ಇಟ್ಟು ನೋಡುವುದು ನಿನಗೆಷ್ಟು ಸುಖವೋ
ಅಟ್ಟಿ ಬಹ ದುರಿತಗಳ ಮೆಟ್ಟಿನೀ ತುಳಿಯದಿರೆ
ಬಿಟ್ಟು ಕೊಡೊ ಕರುಣಾಸಾಗರನೆಂಬೊ ಬಿರುದು ೩

ಕೆಟ್ಟ ಜನ್ಮವ ಕೊಡು ಕನಿಷ್ಟದಿಂದಲಿತು
ಹೊಟ್ಟೆಗನ್ನವು ದೊರೆಯದಂತೆ ಮಾಡೋ
ಪುಟ್ಟಿ ಭಕುತಿ ಮಾತ್ರ ಥಟ್ಟನೆ ಕೊಟ್ಟು ಮನ–
ದಿಷ್ಟ ಪೂರೈಸಿ ತವ ದಾಸನ ಮಾಡೋ ೪

ಶ್ರೇಷ್ಠ ಸಾತ್ವೀಕನಾಗಿದ್ದರೆ ಹರಿ ನಿನಗೆ
ಇಷ್ಟು ಬಾಯ್ದೆರದು ನಾ ಬೇಡಲ್ಯಾಕೊ
ಕೆಟ್ಟ ಪಾಪಿಷ್ಟನಾದುದಕೆ ಶ್ರೀ ಹನುಮೇಶ
ವಿಠಲನೇ ತವ ಚರಣ ತೋರಿಸಲಿ ಬೇಕೊ ೫

## ೩೦೩

ಹರಿ ಶ್ರೀ ರಘುರಾಯಾ ಸಂಸಾರ ಮಾಯಾ
ಬಿಡಿಸೋ ಭವ ಜೀಯಾ ತೋರೊ ನಿನ್ನಯ ದಿವ್ಯ ಕಾಯಾ
ಕೊಡು ನೀ ಸುಮತಿಯಾ ಪ

ಗರುಡವಾಹನಾ ಪರಮಪಾವನಾ
ಶಿರಿಯ ಸುಖದಿ ಮರೆಯಬ್ಯಾಡೊ ಚರಣದಾಸನಾ ೧

ಇಷ್ಟದಾಯಕಾ ಕಷ್ಟತಾರಕಾ
ಸೃಷ್ಟಿ ಪತಿಯೆ ಕೊಟ್ಟು ಸಲಹೊ ಮೋಕ್ಷದಾಯಕಾ ೨

ನಾಶರಹಿತನೇ ವಾಸುದೇವನೇ
ಪೋಷಿಸೊ ತವ ದಾಸನಾ ಹನುಮೇಶ ವಿಠಲನೇ ೩

## ೩೦೪

## (ಊ) ಲೋಕನೀತಿ

ಹರೇ ಪಾಹಿ ಮಾಂ ಸದಾ ಪ

ಭವದೊಳೆನ್ನ ಬಳಲಿಸಲಿ ತವ ಹಿತವೇನಿಹುದಿದರೊಳು
ತವಕದಿಂದ ಕೊಡು ದಯಾಳು ನವವಿಧ ಭಕುತಿ ನಿನ್ನೊಳು ೧

ಲೋಕ ಪಾಲಕನೆಂಬೊ ಬಿರುದು ಈ ಕಾಲಕೆ ತೋರೊ ಒಲಿದು
ಸಾಕಲಾರೆನೆನಲು ಬಿಡದು ನೀ ಕರುಣಿಸು ದಯಾಸಿಂಧು ೨

ಧೀರ ಶ್ರೀ ಹನುಮೇಶವಿಠಲಾ ಮೀರಿದ ಕಾರ್ಯವು ಇದಲ್ಲಾ
ಸಾರ ಮಾರ್ಗ ತೋರಿ ಸುಫಲಾ ಮಾರಜನಕ ಕೊಡು ಗೋಪಾಲ ೩

## ೩೦೫

ಆರು ಪೇಳಿದರೊ ಜೀವಾ ನಿನಗಾರು ಪೇಳಿದರೋ ಪ

ಆರು ಪೇಳಿದರೋ ಈ ಸೋರುವ ಮನೆಯೊಳು
ಇರುವುದು ಒಳಿತಲ್ಲಾ ತೆರಳುವುದುಚಿತನೇ ಅ.ಪ.

ದುಷ್ಟರಿರುವರೋ ಈ ಗ್ರಹದೊಳು
ಕಟ್ಟಿ ಸುಲಿಯುವರೋ
ಇಟ್ಟಿದ್ದ ಅನ್ನದಿ ಕೆಟ್ಟ ಕ್ರಿಮಿಗಳುಂಟು
ಮುಟ್ಟಿ ಬಳಸುವರಿಲ್ಲ ಹೊಟ್ಟೆ ತುಂಬಿದೋ ಅಲ್ಲಿ ೧

ಛಾಯಾವೂ ಇಲ್ಲಾ ಈ ಮನೆಯೊಳು
ದಾಯಾವೂ ಇಲ್ಲಾ ಬಾಯ ಬಿಡಿಸುವರೋ
ಅನ್ಯಾಯ ಮಾಡುವರೋ ಉಪಾಯದಿಂದಲಿ ಬಿಟ್ಟು
ಹಯವದನನ ಸೇರೋ ೨

ತರುಣರಿರುವರೋ ಈ ಮನೆಯೊಳು
ಮರುಳು ಮಾಡುವರೋ
ಪರುಮ ಹರುಷ ನಮ್ಮ ಹನುಮೇಶ ವಿಠಲನ
ನೆರೆ ನಂಬಿ ಸ್ಮರಿಸುವ ಸ್ಥಿರ ಪದವನು ಸೇರೊ ೩

## ೩೦೬

ಇದ್ದರೇನು ಇಲ್ಲದಿದ್ದರೇನು ಬುದ್ಧಿಯಿಲ್ಲದವನು ಬಾಳಿದ್ದರೇನು ಪ

ಮಕ್ಕಳಿಲ್ಲದ ಮನೆಯು ಅರಮನೆ ಆದರೇನು
ತಕ್ಕ ದಾನವ ಕೊಡದ ಧನವಿದ್ದರೇನು
ದುಃಖ ಸುಖಗಳನು ಕೇಳದ ನೆಂಟರಿದ್ದರೇನು
ಅಕ್ಕರದಿ ತಾನೊಬ್ಬ ಉಂಡರಾಗುವುದೇನು ೧

ನರಜನ್ಮ ದೊರೆತಾಗ ಹರಿಯ ನೆನೆಯದಿರೇನು
ಪರಮ ಪಾತಕಿ ಆಗಿ ಬಾಳಿದ್ದರೇನು
ದುರಿತ ಕಾರ್ಯದೊಳಿದ್ದ ಬುದ್ಧಿಹಾಕಿದರೇನು
ಕರುಣರಹಿತನು ತಾನು ಅರಸಾದರೇನು ೨

ಮಾತು ಕೇಳದ ಮಗನು ಮನೆಯಲ್ಲಿ ಇದ್ದರೇನು
ಸೋತು ನಡೆಯದ ಬಂಟತನವಿದ್ದರೇನು
ನೀತಿ ತಿಳಿಯದೆ ಹರಿಯ ಕಥೆಯ ಕೇಳಿದರೇನು
ಹೋತಿನ ಕೊರಳೊಳಗೆ ಮೊಲೆ ಇದ್ದರೇನು ೩

ವೇದವನೋದದಾ ವಿಪ್ರನಾದರು ತಾನು
ದ್ವಾದಶಿ ನಾಮವನು ಬಡಕೊಂಡರೇನು
ಹಾದರಕೆ ಮೆಚ್ಚಿದಾ ಚಲ್ವೆ ಆದರೇನು
ಆದಿ ತಿಳಿಯದೆ ಬೂದಿ ಬಡಕೊಂಡರೇನು ೪

ಶರಣು ಬಂದವರ ಅನ್ಯರಿಗೊಪ್ಪಿಸದೇ ತಾನು
ಕೊರಳ ಕೊಯಿದವನ ಧನ ಸೆಳೆದರೇನು
ವರದ ಹನುಮೇಶ ವಿಠಲನಂಘ್ರಿಗಳ ನುತಾ
ಸ್ಮರಿಸದಲೇ ನೂರೊರುಷ ಬಾಳಿದರೇನು ೫

## ೩೦೭

ಏನು ಮಾಡಿದರೇನು ಜ್ಞಾನವಿಲ್ಲದವನು ಪ

ಸ್ನಾನದಿಂ ಮೋಕ್ಷಸಾಧನವಾಗುವುದು ಎನೇ
ಮೀನುಗಳು ಸ್ನಾನ ಮಾಡುವುದಿಲ್ಲವೇನೋ
ಪರ್ಣ ಆಹಾರದಿಂದಾದರದು ಸಿಗುವುದೇನೇ
ಪರ್ಣ ಭುಂಜಿಸಿ ಮೇಕೆ ಜೀವಿಸುವುದಿಲ್ಲೇ ೧

ವಾಯು ಆಹಾರದಿಂದಾದರದು ಸಿಗುವುದೇನೇ
ವಾಯು ಭಕ್ಷಿಸಿ ಸರ್ಪ ಜೀವಿಸುವುದಿಲ್ಲೇ

ಆಯು ಗುಹದೊಳ್ಕಳೆಯನದಕೆ
ನಿರಾಯಸದಿಂ ಮೂಷಕವು ಇರುವುದಿಲ್ಲೇ ೨

ಶುಕನಂತದೇಷನಧನದಿ (?) ಹನುಮೇಶ ವಿಠಲನ ವಿವರ
ಭಕುತಿಯಂ ಸ್ತುತಿ ಮಾಳ್ಪಗೆ
ಮುಕುತಿ ಪಂಥವನು ಸಹ
ಜೀಕವಾಗಿ ಕೊಡುವ ನಿಶ್ಚಯ ಸೇವಕರಿಗೆ ೩

## ೩೦೮

ಕಲಿರಾಯ ಬಂದಿಹ ಕಲಿಯುಗದೊಳಗೆ ಬಲಿ ತೋರುವೆನೆನುತಲಿಪ

ಯುಗತ್ರಯದಿ ಬಗೆ ಬಗೆ ಕಷ್ಟವ ಪಡುತಾ ಕೋ
ಡಗನಂದದಿ ತನ್ನಾಗೆಗಳಾ ಜೈಸದೆ ಅಡವಿಯೊಳಿರುತಾ
ಯುಗ ನಾಲ್ಕವು ಬರಲು ಜಿಗಿಯುತ ಪಲ್ಗಳ ತೆಗೆಯುತ ತನ್ನಯ
ಅಗಣಿತ ಮಹಿಮೆಯ ತೋರುವೆನೆನುತಲಿ ೧

ಸತ್ಯ ಸೇರಿತು ಸತ್ಯಲೋಕವನು ನಿತ್ಯಕರ್ಮವು ತಾ
ಹತ್ತಿತು ಸೂರ್ಯನ ವರ ರಥವನ್ನು
ದೈತ್ಯನಾರ್ಭಟಕೆ ಶಾಸ್ತ್ರ ಹಾರಿ ಅಂತರದಲಿ ನೀಂತಿತು
ಉತ್ತವು ಕ್ಷಾರಾಣವೃತಪ್ಪಾಯಿತು (?) ೨

ಸ್ನಾನವು ಮನಿಯಲಿ ಅಡಗೀತು
ಮೌನ ಜಪ ತಪಗಳು ಹಾನಿಯಾದವು
ಕಾನನದೋಳು ನಿಂತು ಅನುಮಾನವು ಹೆಚ್ಚಿತು
ದೀನನಾಥಮ್ಮಾ ಹನುಮೇಶವಿಠಲನ ೩

## ೩೦೯

ಧ್ಯಾನಿಪರಿಗೆ ಅಪಮಾನ ಮೈದೋರಿತು
ಕೆಡಬ್ಯಾಡೆಲೊ ಪ್ರಾಣಿ ಕೆಡಬ್ಯಾಡಾ ನಮ್ಮ
ಕಡಲಶಯನನ ಭಜನೆ ಬಿಡಬ್ಯಾಡಾ ಪ

ಪರನಿಂದೆ ಮಾಡಿ ಕೆಡಬ್ಯಾಡಾ ನನ್ನ
ಸರಿಯಾರಿಲ್ಲೆಂದು ಮೆರೆಯ ಬ್ಯಾಡಾ
ಪರಹೀನತಾ ಮಾಡಿ ನೀ ಕೆಡಬ್ಯಾಡಾ ಶ್ರೀ
ಹರಿ ಸರ್ವೋತ್ತಮನೆನದೆ ಕೆಡಬ್ಯಾಡಾ ೧

ಪರದ್ರವ್ಯವನಪಹರಿಸಲಿ ಬ್ಯಾಡಾ ದಿವ್ಯ
ಪರಸತಿಯರ ಮೋಹಕ್ಕೊಳಗಾಗ ಬ್ಯಾಡಾ
ದುರಿತ ಕಾರ್ಯಕೆ ಮನಕೊಡಬ್ಯಾಡಾ ಒಳ್ಳೆ
ಪರ ಉಪಕಾರ ಮಾಡದೇ ಕೆಡಬ್ಯಾಡಾ ೨

ಮಾತಾಪಿತರ ಸೇವೆ ಬಿಡಬ್ಯಾಡಾ ಯಮ
ದೂತರಂದದಿ ಅವರನು ಕಾಡಬ್ಯಾಡಾ
ಕೆಟ್ಟ ಮಾರ್ಗವ ಹಿಡಿದು ಹೋಗಬ್ಯಾಡಾ ನಿನ್ನ
ಸತಿಸಂತರಾಮೋಹಕ್ಕೊಳಗಾಗಬ್ಯಾಡಾ ೩

ದುಷ್ಟ ಮಾತುಗಳಾಡಬ್ಯಾಡಾ ನೀನು
ಕಳ್ಳರ ಸಹವಾಸ ಮಾಡಲಿ ಬ್ಯಾಡಾ
ಒಳ್ಳೆತನವ ಬಿಡಬ್ಯಾಡಾ ನಮ್ಮ
ಫುಲ್ಲನಾಭನ ದಾಸನಾಗದಿರಬ್ಯಾಡಾ ೪

ಸತ್ಯ ಮಾತಾಡದೇ ಕೆಡಬ್ಯಾಡಾ ಸರ್ವೋತ್ತಮ
ಹನುಮೇಶ ವಿಠಲನ ನಾಮಾ
ನಿತ್ಯ ಭಜಿಸಿ ಪಾದ ಬಿಡಬ್ಯಾಡಾ ಒಳ್ಳೆ
ಉತ್ತಮ ಪದಕೆ ವೈದಿಡುವನೋ ಮೂಢಾ ೫

## ೩೧೦

ನರಹರಿಯ ಗುಣ ಕೊಂಡಾಡುವುದೇ ಲೇಸು
ಮುರಲೀಧರನೊಲಿಸಿ ಪರಗತಿ ಸುಖವ ಬಯಸು ಪ

ಸುಳ್ಳುಮಾತಾಡಿ ಧನಗಳಿಸುವುದಕಿಂತಲಿ
ಒಳ್ಳೆಯವನೆನಿಸುವ ಬಡತನವೇ ಲೇಸು
ಕಳ್ಳತನದಿಂದಲಿ ಕದ್ದು ತಿಂಬುವುದಕಿಂತ
ಕೇಳಿ ಸಿಕ್ಕಷ್ಟುಂಡು ಇರುವುದೇ ಲೇಸು ೧

ಸಾಲದಿಂದರಮನೆಯ ಕಲ್ಪಿಸಿರುವುದಕಿಂತಾ
ಸಾಲಿಲ್ಲದ ಮನೆಯಲ್ಲಿಹುದೇ ಲೇಸು
ಕಾಲನ ದೂತರಿಂದೆಳೆಸಿಕೊಳ್ಳದೇ ಲಕ್ಷ್ಮೀ
ಲೋಲನಾ ಪಾದದಲ್ಲಿರುವುದೇ ಲೇಸು ೨

ಅನ್ಯ ಸ್ತ್ರೀಯರ ಸುಖವ ಬಯಸಿ ಕೆಡುವುದಕಿಂತ
ತನ್ನವಳ ಕೂಡ ಬಡಿದಾಡುವುದೇ ಲೇಸು
ಹೊನ್ನು ಹೆಣ್ಣು ಮಣ್ಣಿಗಾಸೆ ಮಾಡದೇ
ಮನಸನ್ನ ಸಿರಿಪತಿಗೆ ಒಪ್ಪಿಸುವುದೇ ಲೇಸು ೩

ತಾನು ಮಾಡಿದೆನೆಂಬುದಕಿಂತ ಹರಿಯ
ಆಧೀನವೆಂದರಿಯುವುದು ಪರಮ ಲೇಸು
ಶ್ವಾನಗೆ ಮಾಂಸವನು ತಿನಿಸಿ ಸಲಹುವುದಕಿಂತ
ಜ್ಞಾನಿಯಾದವನ ಸಲಹುವುದೇ ಲೇಸು ೪

ದುಷ್ಟ ಮನುಜನು ಮಾಡುವ ಕೃಪೆಗಿಂತಲೂ
ಶ್ರೇಷ್ಠ ನರರಿಂದ ಬೈಸಿಕೊಳ್ಳುವುದೇ ಲೇಸು
ಕೆಟ್ಟ ಸಂಸಾರ ಸುಖ ಬೇಡುವುದಕಿಂತ ಹನುಮೇಶ
ವಿಠಲನ ಧ್ಯಾನದ ಸುಖವೇ ಲೇಸು ೫

## ೩೧೧

ನರಹರಿಯ ಹೊರತಿನ್ನಾರಿಗಿಲ್ಲವೋ ಸ್ವತಂತ್ರದಾವುದು ಇಲ್ಲವೊ
ನರರಿಗೆ ಸ್ವತಂತ್ರ ಪ

ಗಳಿಸಿದ ಧನವು ನಳಿನಾಕ್ಷೀಯರಿಗೀವ
ಸೆಳೆದು ವಯ್ಯುವಾಗುಳೀವರಿಲ್ಲವೋ ೧

ನಾನು ನನ್ನದೆಂಬುವ ಈ ದೇಹವು
ಹಾನಿಯಾಗುವಾಗದನ್ನುಳಿಸುವ ಸ್ವತಂತ್ರ ೨

ಜೀವವು ಕಾಯವ ತ್ಯಜಿಸಿ ಪೋಗುವಾ
ಗಾವಾಪ್ತರಿಗವನ್ನುಳಿಸಿಕೊಳ್ಳುವ ಸ್ವತಂತ್ರ ೩

ಮಾಡಿದ ಧರ್ಮಾಕರ್ಮವೆಜೀವನ
ಕೂಡ ಮಂತ್ರ ಸಂಗಡ ಬಾಹುದು ೪

ದೋಷ ರಹಿತ ಹನುಮೇಶವಿಠಲನೇ
ಈಶನೆಂದು ನಿಜ ದಾಸನಾಗೋ ಸ್ವತಂತ್ರ ೫

## ೩೧೨

ನಾರಾಯಣನಾಮ ಭಜಿಸೋ ನಿರುತದಲಿ ನರನೇ ಪ

ಮಾಯದ ಸಂಸಾರದಿ ಪಾರಾಗೋ ಉಪಾಯವಿದು ಸಸಾರ
ಕಾಯಜನೈಯನ ಭಜಿಸೋ ಶ್ರೀ ಗುರುವಾಯು ದೇವರ ದ್ವಾರಾ ೧

ಧ್ಯಾನ ಕೃತಯುಗದಿ ಯಜ್ಞವು ತ್ರೈತದಿ ಅರ್ಚನೆ ದ್ವಾಪರದಿ
ಗಾನದಿ ಕಲಿಯಲಿ ಪಾಡಲು ಕೇಶವ ತಾನೇ ಒಲಿವ ತ್ವರದಿ ೨

ಅನಲ ಪಕ್ವಗೈಸಿದ ಅನ್ನವನಸ್ಕೊಳ್ಳೊಮಿಸುವಂತೆ
ಹನುಮೇಶವಿಠಲ ಕೊಟ್ಟಾತನು ಅರ್ಪಿಸು ಅದರಂತೆ ೩

## ೩೧೩

ಮರುಳು ಮನವೇ ವ್ಯರ್ಥ ಚಿಂತಿಸುವಿಯಾಕೋ
ಹರಿ ತಾನೇ ಕಾಯ್ವ ಮನ ದೃಢವಿರಲಿ ಬೇಕೊ ಪ

ಎಲ್ಲಿ ನೋಡಿದರಲ್ಲಿ ಇರುವಾತಾ
ಎಲ್ಲರನು ಪೊರೆವಾತಾ
ಬಲ್ಲಿದನು ಬಲಿಯ ತುಳದಾತಾ
ಸೊಲ್ಲು ಸೊಲ್ಲಿಗೆ ಬಂದು ಎಲ್ಲಿವನು ಪೇಳಿದರೆ
ಕಲ್ಲಾಗುವನೇ ಸ್ವಾಮಿ ಪ್ರಲ್ಹಾದ ತಾತಾ ೧

ಹಬ್ಬಿರುವ ಮಾಂಸಗಾಗರ್ಭದೊಳಿರುವಾಗ
ಉಬ್ಬಸವ ಬಡುವಾಗ ಸಲಹಿದವರ‍್ಯಾರೋ
ಅಬ್ಬರದ ನೋವಿನೊಳು ಒಬ್ಬನೇ ಬರುವಾಗ
ಹೆಬ್ಬಾಗಿಲವ ನಿನಗೆ ತೋರಿದವರ‍್ಯಾರೋ ೨

ವರದ ಹನುಮೇಶವಿಠಲನ ಚರಣವ ನಂಬು
ಮೊರೆಯಾಗ್ವನಲ್ಲಾ ಹರಿ ಕರುಣ ಸಾಗರನೋ
ಕರಿರಾಜ ಕರಿಯಲಾಕ್ಷಣಕೆ ಅವಸರದಲಿ
ಗರುಡವಾಹನ ಕೃಷ್ಣ ಬರಲಿಲ್ಲವೇನೋ ೩

## ೩೧೪

ಮಾಡಿದ ತಪ್ಪು ಕೈ ಜೋಡಿಸಿ ಪೇಳ್ವೆ ಕಾಪಾಡೆನ್ನ
ಗಾಢದಿಂ ಹರಿಯೇ ಪ

ಉದಯದಲೆದ್ದು ಗೊಡ್ಡ ಹರಟೆಯ ಹೊಡೆದು
ಹರಿಸದನಕ್ಕೆ ಹೋಗದ ತಪ್ಪು

ಮುದದಿಂದಲಿ ಗಂಗಾ ಉದಕ ಅಗ್ರೋದಕ ಮರೆದು
ತಾರದೇ ಬಿಟ್ಟ ತಪ್ಪು
ಸದಮಲಸುಜ್ಞಾನದಿ ಹರಿ ಕೀರ್ತನೆ ಕೇಳದೆ ಬಿಟ್ಟೆನ್ನ ತಪ್ಪು ೧

ಸ್ನಾನ ಜಪವನು ಬಿಟ್ಟು ಕುಪಿತನಾಗಿ ಕಪಿಯಂತೆ ತಿರುಗಿದ ತಪ್ಪು
ಅಪರಿಮಿತ ದ್ರವ್ಯ ಅಪಹರಿಸಿ ಕೆಟ್ಟ ಅಪಕೀರ್ತಿ ಹೊತ್ತೆನ್ನ ತಪ್ಪು
ಶ್ವಪಚನಾಗಿ ಅನುದಿನ ಸ್ನಾನ ಸಂಧ್ಯಾದಿಗಳನು ಬಿಟ್ಟ ತಪ್ಪು ೨

ಮನಿ ಮನಿ ತಿರುಗಿದ ತಪ್ಪು ತನು ಸುಖಕಾಗಿ ವನಿತೇರ ರಮಿಸಿನಾ
ಘನ ಪಾಪ ಮಾಡಿದ ತಪ್ಪು
ಅನುದಿನದಲಿ ಹನುಮೇಶ ವಿಠಲನ ನೆನೆಯದೆ ಬಿಟ್ಟ ತಪ್ಪು ೩

## ೩೧೫

ಮಾನಹೀನನಿಗೆ ಇಲ್ಲದ ಅಭಿಮಾನವ್ಯಾತಕೋ
ನಾನೇ ಬ್ರಹ್ಮನೆನ್ನುವನ ಮುಖ ನೋಡ್ವದ್ಯಾತಕೋ ಪ

ಹರಿಯೇ ಸರ್ವಪರಾ ಎನ್ನದವನ ಜ್ಞಾನವ್ಯಾತಕೋ
ತಾರತಮ್ಯವರಿಯದವನಾಚಾರ್ಯವ್ಯಾತಕೋ ೧

ಆಶೆಯನು ಬಿಡದವಗೆ ಸನ್ಯಾಸವ್ಯಾತಕೋ
ಭಾಷೆ ಹೀನನಾದವನ ವಿಶ್ವಾಸವ್ಯಾತಕೋ ೨

ಹರಿಯ ಜರಿದು ಹರಾಪರನೆನ್ನುವನ ಜನ್ಮವ್ಯಾತಕೋ
ವರದ ಶ್ರೀ ಹನುಮೇಶ ವಿಠಲ ಒಲಿವನ್ಯಾತಕೋ ೩

## ೩೧೬

ಯಾಕೆ ಕಳೆಯುವಿ ಕಾಲ ವ್ಯರ್ಥ
ಹರಿಯನೇಕ ಗುಣಗಳ ಪೊಗಳಿ ಪುರುಷಾರ್ಥ ಪ

ಸತಿಸುತರ ನೆಚ್ಚಿ ಕೆಡಬ್ಯಾಡಾ ನಿನ್ನ ಸಂ–
ಗತಿಲೇ ಬಾಹರು ಇದನು ತಿಳಿಯೋ
ಕ್ಷಿತಿಪತಿಯ ನೆನೆಯದಿರಬ್ಯಾಡಾ ಲಕ್ಷ್ಮೀ
ಪತಿಯೊಬ್ಬನೇ ಗತಿ ಎಂದು ತಿಳಿ ಗಾಢಾ ೧

ಇಂದೆ ಇದ್ದವ ನಾಳೆಗಿಲ್ಲಾ ಅದ
ರಿಂದ ಜಗದೀಶನನು
ಹಿಂದೆ ಕಳೆದ ಆಯು ಬರೋದಿಲ್ಲಾ ಇನ್ನು
ಮುಂದೆ ನರಜನ್ಮ ಬರುವುದು ಭರವಸಲ್ಲಾ ೨

ಸತ್ತ ನಂತರ ಬಳಗ ನಿನ್ನ ತೀವ್ರ
ಹೊತ್ತು ಹೊರಗ್ಹಾಕಿರೆನ್ನುವರೋ ತಿಳಿಯನ್ನಾ
ಮಿಥ್ಯ ಸುಖಕೊಳಗಾಗದಿನ್ನಾ ಏಕ
ಚಿತ್ತದಿಂ ಭಜಿಸೋ ಹನುಮೇಶ ವಿಠಲನಾ ೩

## ೩೧೭

ಸಾಧು ಸಂಗತಿ ಮಾಡೋ ಎಲೆ ಮನಾ
ಸಾಧು ಸಂಗತಿ ಮಾಡು ಪ

ಘೋರತರದ ಸಂಸಾರ ಸಾಗರದಿ
ಪಾರು ಮಾಡಿ ಮುರಾರಿಯ ಸ್ಮರಿಸುವ ೧

ಕರ್ಮಫಲಾಪೇಕ್ಷಿಸದಲೇ ಮಾಡಿ ತಾ
ನಿರ್ಮಲ ಚಿತ್ತದಿ ಹರಿಯನು ಪೊಗಳುವಾ ೨

ತನ್ನ ಪಿತ ಹನುಮೇಶವಿಠಲಗೆ ಆತ್ಮಅರ್ಪಿಸಿ
ಕೃತಾರ್ಥನಾದನು ಸಾಧು ಸಂಗತಿ ಮಾಡೋ ೩

## ೩೧೮

ಹ್ಯಾಂಗೆ ಉದ್ಧಾರ ಮಾಡ್ಯಾನೋ ಶ್ರೀಹರಿ
ಹೀಗೆ ದಿನಗಳಿವಂಗನಿಗೆ ಪ

ಬ್ಯಾಗ ಪತಿಗೆ ತಾ ಬಾಗದನುಕೂಲವಾಗಿರದೆ
ತಿಳಿದ್ಹಾಗೆ ನಡೆವಳ ಅ.ಪ.
ಉದಯದಲೆದ್ದತಿ ಸಜಮಲಳಾಗಿ ತಾ
ಮುದದಿ ಪತಿಗೆ ನಮಿಸದವಳಿಗೆ
ಪದುಮಾಕ್ಷಿ ತುಳಸಿಯ ಪೂಜಿಸಿ ಮನದಿ
ಮಾಧವನ ಭಕ್ತಿಲಿ ಸ್ತುತಿಸದವಳಿಗೆ
ಪದುಮನಾಭನೇ ಸರ್ವಪರನೆಂದು ಅರಿಯದೆ
ಅಧಮ ಶಾಸ್ತ್ರವ ಕೇಳಿ ಅದರಂತೆ ನಡೆವಳ ೧

ಹರಿದಿನದಲಿ ಉಂಡು ಹರಿಯನ್ನದಲೇ ಊರ
ತಿರುಗಿ ಹೊತ್ತು ಕಳೆವಳಿಗೆ
ಸರಸದಿ ನರಹರಿ ನಾಮ ಸಂಕೀರ್ತನೇ
ಇರುಳು ಜ್ಯಾಗರ ಮಾಡದವಳಿಗೆ
ದೊರಕಿದಷ್ಟರಲೇ ತಾ ಹರುಷ ಪಡೆದೇ ಧನ
ತರು ಹೋಗೆನುತ ತನ್ನ ಪತಿ ಹೊರಗ್ಹಾಕ್ವಳ ೨

ಗುರು ಹಿರಿಯರ ಅತ್ತೆಮಾವರ ಜರಿದು ತಾ
ಹಿರಿಯಳು ಮನಿಗೆ ನಾನೆನುತಿರ್ಪಳು
ಪರರ ನಿಂದಿಸಿ ಭೂಸುರರು ಬಂದರೆ ಅನ್ನ
ದೊರಕದೆನುತ ಹೇಳಿ ಕಳಹುವಳ
ಸರಸ ಮೃಷ್ಟಾನ್ನವ ಹರುಷದಿ ಪತಿದ್ವಾರಾ
ಹರಿಗರ್ಪಿಸದಲೇ ತ್ವರದಿ ತಾ ತಿನ್ವಳ ೩

ಪತಿ ಅಂತರ್ಯಾಮಿ ಶ್ರೀ ಪತಿಯನರಿದು ತನ್ನ
ಪತಿಯ ಸೇವೆ ಮಾಡದಿರುವಳಿಗೆ

ಪತಿ ಮುಕ್ತಿ ಪಥವೆಂದು ಪತಿಹಿತದವನೆಂದು ಅರಿಯದೇ
ಪರ ಪತಿ ನೋಡ್ವಳಿಗೆ
ಪತಿಯಿಂದಲಂಕೃತವಾಗಿಹ ಮಂಗಳಸೂತ್ರವೇ
ಸಕಲ ಭೂಷಣವೆಂದರಿಯದವಳಿಗ್ಹಾಂಗೆ ೪

ಪರಮ ಅತ್ತೆಯ ಮಾತು ಶಿರದಿ ಸ್ವೀಕರಿಸಿ
ಐವರ ಕೂಡ ಧಾರೆಯರೆಸಿಕೊಂಡಾ
ಪರಮ ಪಾವನಳಾದ ಭಾರತೀ ದೇವೇರ
ಸ್ಮರಿಸದೇ ಅದರಂತಾಚರಿಸದೆ ಇರುವಳಿಗ್ಹ್ಯಾಂಗೆ ೫

ವನವಾಸದಲಿ ಪಾಂಡು ತನಯರ ಕೂಡ ತಾ
ಧನ ಸುಖ ಬೇಡದೆ ಪೋದವಳು
ಘನ ಹಸಿವುತೃಷೆಯಿಂದ ಅನ್ನ ಬೇಡಿದ
ದುರ್ವಾಸಾದಿಗಳನು ಆದರಿಸಿದವಳಾ
ಆಜನನಿ ದ್ರುಪದ ನಂದನಿಯ ಕೃತ್ಯಗಳನ್ನು
ನೆನೆದು ತನ್ನಯ ಮನವನ್ನು ತೊಳೆಯದವಳು ೬

ಮರುತಂತರ್ಗತ ಸ್ವಾಮಿ ಸಲಹೆನ್ನದೇ
ಪರರಿಗೊಂದೆಡೆ ಇಕ್ಕಿ ಪಂಕ್ತಿ ಭೇದವ ಮಾಡಿ
ನರಕ ಸಾಧನ ಕರ್ಮ ಮಾಡ್ವಳಿಗೆ
ಪರಮ ಪಾವನನಾದ ಹನುಮೇಶವಿಠಲನ
ನೆರೆ ನಂಬದಲೇ ದೇಹ
ಸ್ಥಿರವೆಂದು ತಿಳಿವಳಿಗ್ಹ್ಯಾಂಗ ೭

# ೩೧೯

## ಶ್ರೀ ಪಾಂಡುರಂಗ ಪ್ರಾರ್ಥನೆ

ಕಮಲದಂದದ ಪಾದ ಯುಗಗಳನು
ವಿಮಲ ತುಳಸೀ ಮಾಲೆಗೊರಳನ
ಅಮಿತ ಮಹಿಮೆಗಾರ ಡೊಂಕದ ಕೈಗಳಿಟ್ಟಿಹನು
ಸುಮದೆಕೊಪ್ಪುವ ದಿವ್ಯನೇತ್ರನ
ಸುಮನಸರ್ಕಳ ನಗುತ ಪೊರೆವನ
ನಮಿಸಿ ನುತಿಸುವೆ ನೀಲಮೇಘಶ್ಯಾಮ ವಿಠಲನ್ನ ೧

ಶಿಲೆಯನುದ್ಧರಿಸಿರ್ಪ ಪಾದಕೆ
ಬಲಿಯ ಮೆಚ್ಚಿದ ಪಾದಕಮಲಕೆ
ನಲಿವಿನಿಂದಲಿ ನಮಿಸಿ ಪೊಗಳುವೆ
ಕಲಿಮಲಂಗಳನೆಲ್ಲ ತರಿಯುತ
ತಲೆಯೊಳಾಶೀರ್ವಾದವೀಯಲು ಬಿದ್ದು ಬೇಡುವೆನು ೨

ಕ್ರೂರ ರಕ್ಕಸರುಪಟಳಂಗಳ
ವೀರತನದಿಂ ಚಕ್ರದಡಗಿಸಿ
ಮಾರಪಿತ ಭವದೂರ ಕಂಸರಲಿ ದಣಿಯುತಲಿ
ಯಾರ ಗೊಡವೆ ನಮಗೇನು ಎನ್ನುತ
ಶ್ರೀ ರಮಾವರ ದೇವಿ ಸಹಿತೀ
ದಾರಿಯೊಳ್ಕ್ಮಿಜ ಭಕ್ತಗಾಶ್ರಯನಾಗಿ ನಿಂತಿಹನೆ ೩

ತಾಯಿ ತಂದೆಯ ಸೇವೆಗೋಸುಗ
ಕಾಯ ಧರಿಸಿದ ಭಕ್ತವರ್ಯನ
ಮಾಯೆಯಿಂದಲಿ ನೋಡಿ ನಲಿಯಲು ಬಂದ ವಿಠ್ಠಲನೆ
ತೋಯಜಾಕ್ಷಿಯಳಾದ ಲಕುಮಿಯ
ರಾಯ ಶ್ರೀಹರಿ ನಿನಗೆ ಇಟ್ಟಿಗೆ
ಯಾಯಿತೇ ಬಲು ಸಂಖ್ಯದಂಸನ ನಿಂತುಕೊಳ್ಳಿಕ್ಕೆ ೪

ತಾತನಂಘ್ರಿಯ ಸೇವೆಗೆಯ್ದಿರು-
ವಾತ ಬರಲಂದನಿಮಿಷಾಗ್ರಣಿ
ತಾತ ನಿಂತೆಯ ಸೊಂಟದ ಮೇಲೆ ಕೈಯಿಟ್ಟು
ಮಾತೆಯಾದವರು ಹಾಗೆ ಸಂಗಡ
ಪ್ರೀತಿಯಿಂದಲೆ ನಿಂತುಕೊಂಡಳು
ಖ್ಯಾತಿಯಾಯಿತು ಪಾಂಡುರಂಗನ ಲೀಲೆ ಭಕ್ತರಲಿ ೫

ಸತ್ತು ಹುಟ್ಟುವ ಬಾಧೆಯಿಲ್ಲದ
ಸತ್ಯವಂತನೆ ಕೊಟ್ಟ ಇಟ್ಟಿಗೆ
ಮೆತ್ತಗಿಹುದೇನಷ್ಟು ದಿವಸವು ನಿಂತುಕೊಂಡಿರುವೆ
ಮತ್ತೆ ಪೇಳುವುದೇನು ದೇವನೆ
ಸುತ್ತು ಮುತ್ತಿನ ಜಗಕೆ ಆಸರ
ವಿತ್ತೆ ನಿನಗಾಸರವು ಯಾವುದು ಭಕ್ತವತ್ಸಲನೆ ೬

ಹೇ ದಯಾನಿಧೆ ಯಾದವಾಗ್ರಣಿ
ಮಂದವಾಖ್ಯನೆ ಭೀಮತಡೆಯೊಳು
ಆದರಮ್ಮಿಗೆ ತೋರಿ ಕರೆದನೆ ನಿಮ್ಮನೀರ್ವರನು
ಬಾಧೆಬಡುತೀ ನಿಂತ ಕಾಲಿಗೆ
ಹಾದಿನೋಡುವವೆಷ್ಟೊ ಬೆಳೆಯು
ಚೋದ್ಯವಲ್ಲವೆ ನಿನ್ನ ಲೀಲೆಯು ದಿವ್ಯವಿಗ್ರಹನೇ ೭

ಆದಿಮೂರುತಿ ನಿನ್ನ ಹುಡುಕಲು
ವೇದ ಶಾಸ್ತ್ರ ಪುರಾಣವೆಂಬವು
ಹಾದಿ ಕಾಣದೆ ನಿಂತವಲ್ಲೈ ನೀನೆ ಬಂದೀಗ
ಮೇದಿನೀ ತಳದಲ್ಲಿ ಭಕ್ತರ
ಹಾದಿ ನೋಡುತ ನಿಂತುಕೊಂಡಿರೆ
ಹೋದವೆಷ್ಟೋ ದಿವಸ ಶ್ರೀಹರಿ ನಿನ್ನ ಲೀಲೆಯಲಿ ೮

ನೀಲಮೇಘ ಶ್ಯಾಮ ಕೀರ್ತಿಯ
ಜಾಲವನ್ನುರೆ ಭಜನೆ ಮಾಡುತ
ತಾಳಹಾಕುತ ಸಂತಮಂಡಳಿ ಕುಣಿದು ಬರುತಿರಲು

ಧೂಳವೇಳುವದನ್ನು ಕಣ್ಣಲಿ
ವೇಳೆಗಳೆಯದೆ ನೋಡಿ ನಲಿವುದು
ಲೀಲೆಯಲ್ಲವೆ ಪಾಂಡುರಂಗನೆ ವಿಶ್ವಪಾಲಕನೆ ೯

ಸರಸಿಜಾಕ್ಷನೆ ಕರಗಳೆರಡನು
ಇರಿಸಿ ಟೊಂಕದೊಳೇನು ನೋಡುವಿ
ಪರಮ ಭಕುತನ ತಂದೆ ತಾಯ್ಗಳ ಸೇವೆ ಮಾಡುವುದು
ದೊರೆಯಲಾರದೆ ಕಲಿಯ ಕಾಲದೆ
ದುರಿತ ನೀಗಿಸಿಕೊಂಡನಲ್ಲವೆ
ಆರುಗಿಯಾದರು ನೋಡಲೊಲ್ಲನು ಭಕ್ತಿಬಲದಿಂದ ೧೦

ಚಿನ್ನದರಸನೆ ನಿನ್ನ ಕೈಯನು
ಘನ್ನ ಟೊಂಕದ ಮೇಲೆ ಇರಿಸುತ
ನನ್ನಿಯಿಂ ಭರವಸೆಯ ಕೊಡುವಿಯೊ ಭವದ ಸಾಗರವು
ತನ್ನ ನಂಬುತ ದಾಟಿ ಹೋಗುವ
ಸನ್ನುತಾತ್ಮರಿಗಿಷ್ಟಯೆಂಬುದ
ಚೆನ್ನವಾಗಿಯೆ ತಿಳಿಸಲೋಸುಗ ಹೀಗೆ ನಿಂತಿಹೆಯಾ ೧೧

ನಾನು ನಿನ್ನನು ಕರೆಯದಿದ್ದರು
ನೀನೆ ಬಂದಿಲ್ಲೇಕೆ ನಿಂತೆಯೊ
ದೀನಪಾಲಕನೆಂಬ ಬಿರುದನೆ ಕಾಯಲೋಸುಗವೇ
ಶಾನೆ ಸಂಪದವಿದ್ದ ದ್ವಾರಕೆ
ಯಾನೆ ಕುದುರೆಗಳಿಂದ ಶೋಭಿಪ
ದಾನವಾಂತಕ ಕೃಷ್ಣರಾಯನೆ ಈಗ ಪಂಡರದೀ ೧೨

ರುಕ್ಮಿಣೀವರ ನಿನ್ನ ಪ್ರೇಮದ
ಮಕ್ಕಳೆಂದೇ ಭಕ್ತರನ್ನುರೆ
ಕಕ್ಕುಲಾತಿಯೊಳ್ಪೆದೆ ಪೊರೆದರೆ ಕರ್ಮ ಮುಗಿದಿಹುದೇ
ಮಿಕ್ಕಿದವರೇನನ್ಯಯ ಪುತ್ರರೆ
ತಕ್ಕ ಯೋಚನೆಗೆಯ್ದು ನಂತರ

ತೆಕ್ಕೆಯೊಳ್ಸಲಹುವದು ಲೇಸ್ಸೈ ಭಕ್ತವತ್ಸಲನೆ ೧೩

ಹಾಲು ಮೊಸರಾ ಬೆಣ್ಣೆಯುಂಡೆಯ ।
ಲೀಲೆಯಿಂದಲೆ ಕದ್ದ ಕಳ್ಳನೆ
ಜ್ವಾಳಿಬಲಿತಾ ಬಳಿಕ ಬಿಡುವೆಯಾ ಭಕ್ತರಂತಹರ
ಗಾಳಿ ಸೋಂಕಿದ ನೆವ ಮಾತ್ರಕೆ
ಜಾಲಬೀಸುತ ಕದ್ದು ಕೊಳ್ಳುವಿ
ಹೇಳಲೇನೈ ಹಿಂದಿನೆಷ್ಟೊ ಜನ್ಮದಘನಿದನಾ ೧೪

ನಿನ್ನನೇ ನೆರೆ ನಂಬಿ ಭಜಿಸುವ
ಪುಣ್ಯವಂತರ ಹೃದಯಮಂದಿರ–
ವನ್ನೆಮಾಡಿದ ಪಾಂಡುರಂಗನೆ ನೀನು ಜಗದೊಳಗೆ
ಘನ್ನ ಪಾಪದಿ ಬಳಲುತಿರುವವ–
ರನ್ನುಸಲುಹಲು ಬಂದೆಯೇನೈ
ಸನ್ನುತಾಂಗನೆ ಭಜನಿಗೊಲೆಯುವ ದಿವ್ಯ ವಿಠ್ಠಲನೆ ೧೫

ವೇದಗಳ್ಳನ ಸದೆದು ಬ್ರಹ್ಮಗೆ
ಮೋದದಿಂದಲಿ ಕೊಟ್ಟ ಮತ್ಸ್ಯನೆ
ಆದಿಕೂರ್ಮನೆಯಾಗಿ ಮಂದರನೆಗಹಿ ನಿಂದವನೇ
ಬಾಧೆ ಬಿಡಿಸುವ ಕ್ರೂರ ರಕ್ಕಸ
ಭೇದಿಯಾಗುತ ಧರಣಿ ಮಂಡಲ
ಸೇದಿ ತಂದನ ನೀನೆಯಲ್ಲದೆ ದಿವ್ಯ ವಿಠ್ಠಲನೆ ೧೬

ಒಂದೆ ಮನದೊಳು ನೆನೆದ ಕುವರಗೆ
ಬಂದೆ ಕಂಬದೆ ನಾರಸಿಂಹನೆ
ನಿಂದ ಮಾತ್ರಕೆ ಮೂರು ಪಾದದ ಭೂಮಿದಾನದಲೀ
ತಂದು ಪಾತಾಳದಲಿ ಬಲಿಯನು
ಚಂದದಿಂದಲಿ ಇಟ್ಟ ವಾಮನ
ತಂದೆಯಾಡಿದ ನುಡಿಯ ನಡಿಸಿದ ಭಾರ್ಗವತ್ತೀ ೧೭

ಸೀತೆಗೋಸುಗ ರಾಮನಾಗುತ
ಖ್ಯಾತಿಗೋಸುಗ ಕೃಷ್ಣನಾದೆಯಲೇ
ಪ್ರೀತಿಗೋಸುಗ ಬಾಧ್ಯನಾಗುತ ಜಗವ ಪಾಲಿಸಿದ್ಯಾ
ಜಾತಿಯಶ್ವವನೇರಿ ರಿಪುಗಳ
ಘಾತ ಮಾಡಿದ ಕಲ್ಕ್ಯರೂಪನೇ
ಯಾತಕೀಪರಿ ಚಂದ್ರಭಾಗದಿ ನಿಂತೆ ಬೆರಗಾಗಿ ೧೮

ನಿನ್ನ ನಾಮಗಳಮಿತವಿದ್ದರು
ನನ್ನ ನಾಲಿಗೆಗಷ್ಟು ಬರುವವೆ ?
ಸನ್ನುತಾಂಗನೆ ಪಾಂಡುರಂಗನೆ ದಿವ್ಯ ವಿಠ್ಠಲನೆ
ಎನ್ನುತಿಷ್ಟೇ ನಾಮಗರೆವೆನು
ಚಿನ್ನದರಸನೆ ಭಕ್ತಸಂಘದೊ
ಳೆನ್ನ ಕೂಡಿಸಿ ಕಾಯಬೇಕೈ ಪರಮ ಭಗವಂತಾ ೧೯

ಕಾಲಕಾಲಕೆ ನೇಮನಿತ್ಯಗ–
ಳಾಲಯಂಗಳ ಮಧ್ಯದೆಸಗದೆ
ಜಾಲಿಯಂತೇಗೆಲ್ಲ ಜನರಿಗೆ ಬೆಳೆದೆ ಬಾಧಿಸುತ
ಬಾಲ ಯೌವನ ವಾರ್ಧಿಕತ್ವದೆ
ಕಾಲಪೋಯಿತು ನಿನ್ನ ನೆನೆಯದೇ ಹೇಳಲೇನೈ
ಕಾಲನೆಳೆಯುವನು ೨೦

ಸಂತ ಸಂಗತಿ ಮೊದಲೆಯಿಲ್ಲವು
ಕಂತು ಜನಕನೆ ನಿನ್ನ ನಾಮದ
ಮಂತ್ರವೆನಗಿನ್ನೆಲ್ಲಿ ಬರುವುದು ಶುದ್ಧ ಪಶುವಾದೇ
ಅಂತರಾತ್ಮನೆ ನೀನು ಈ ತೆರ
ನಿಂತುಕೊಂಡರೆ ನನ್ನ ಗತಿಯೇ–
ನೆಂತ ಹೇಳಲಿ ಸಂತೆ ತೀರಿತು ಸಲಹೊ ವಿಠ್ಠಲನೇ ೨೧

ಬುದ್ಧಿಯಿಲ್ಲವು ಬೇಡಿಕೊಳ್ಳಲು
ವಿದ್ಯೆಯಿಲ್ಲವು ನೆನೆವೆನೆಂದರೆ

ಮುದ್ದುವಿಠ್ಠಲ ನಿನ್ನ ಕಾಂಬದೆ ಕಣ್ಣು ಮೊದಲಿಲ್ಲ
ಎದ್ದು ಪೋಗುವ ಕಾಲ ಬಂದಿದೆ
ಸದ್ಯಕಾರೂ ಕಾವರಿಲ್ಲವು
ಬದ್ಧಪಾಶದಿ ಬಿಡಿಸಬಾರ್ಯೆ ದೀನ ಬಾಂಧವನೇ ೨೨

ಕಾಯಕಿರುವದ ಬಂಧು ಬಳಗವು
ಹೇಯ ದುಡ್ಡನೆ ಶಳಯಲೋಸುಗ
ಜೀಯ ನಿನ್ನಂತಾರು ಇಲ್ಲವು ಜೀವಕನು ಸರಿಸೀ
ತಾಯ ತಂದೆಯ ಜಗಕೆ ಲಕ್ಷ್ಮೀ
ರಾಯ ನೀನೇ ಅಲ್ಲವೇನ್ಯೆ
ಬಾಯ ಬಿಡುವೆ ಅಜ್ಞಬಾಲರ ಕಾಯೊ ವಿಠ್ಠಲನೇ ೨೩

ಅಣ್ಣನಾಗುತ ದ್ರುಪದ ಸುತೆಗಾ
ಬಣ್ಣದಂಚಿನ ಸೀರೆ ಉಡಿಸಿದೆ
ನಿನ್ನ ಬಾಲ್ಯದ ಸುಖ ಸುಧಾಮಗೆ ಕೊಟ್ಟಿಯ್ಯೆಸಿರಿಯ
ಹಣ್ಣಿನಾಶೆಗೆ ಶಬರಿ....ಗೊಲಿದ್ಯೆ
ಬೆಣ್ಣೆಯಾಶೆಗೆ ಗೋಪಿಗೊಲಿದ್ಯೆ
ಮಣ್ಣಿನಾಶೆಗೆ ಬಲಿಯ ಬಾಗಿಲ ಕಾಯ್ದ ವಿಠ್ಠಲನೇ ೨೪

ನಿನ್ನ ನೆಂದು ಕಾಣದಿದ್ದವ
ಕುನ್ನಿ ಪಾಮರನಣ್ಣನೆಂಬೆನೆ
ಹಣ್ಣು ಹಂಪಲವೆನಗೆ ಸಾಲವು ನಿನಗೆ ಕೊಡಬಹುದೇ
ನನ್ನ ತೆರದಾಚಾರ ಹೀನರೆ
ಇನ್ನು ಗೆಳೆಯರು ನನಗೆ ಆದರು
ಮುನ್ನ ಮಾಡಿದ ಪಾಪ ಬಹಳಿದೆ ಕೊಳ್ಳೊ ನೀನದನೂ ೨೫

ಹಿರಿಯರೆಸಗಿದ ಪುಣ್ಯದಿಂದಲೆ
ದೊರಕಿತಲ್ಲವೆ ನಿನ್ನ ನೆನೆವುದು
ಪರಮ ಸುಂದರ ಪಾಂಡುರಂಗನೆ ಬಾರೊ ಮಾನಸದೀ
ತರಳರಾಟದಿ ತನ್ನ ತಾಯಿಯ

ಮರೆತ ತೆರದಿಂ ಬಿಟ್ಟು ಕೆಟ್ಟೆನು
ಕರಗದೇನೈ ನನ್ನ ಮನವದು ನಿನ್ನ ದೆಶೆಯಿಂದ ೨೬

ಕೂಸು ಆಟದೊಳಿದ್ದರೇನೈ
ಹೇಸಿ ಕೆಲಸಹೊಳಿದ್ದರೇನೈ
ದೋಷಗಳೆಯುತ ಪೊರೆವಳಲ್ಲಿದೆ ಪಡೆದ ತಾಯವ್ವ
ಶ್ರೀಶ ವಿಠ್ಠಲ ಪಾಂಡುರಂಗನೆ
ಘಾಸಿಗೊಳಿಸುವ ಮುನ್ನಯವನರು
ಪಾಶ ಬಿಡಿಸೈ ಭಕ್ತವತ್ಸಲ ದಿವ್ಯ ವಿಠ್ಠಲನೇ ೨೭

ಕಾಮನಯ್ಯ ಸುಧಾಮ ಸಖ ಶ್ರೀ
ರಾಮ ವಿಠ್ಠಲ ದಿವ್ಯ ರೂಪನೆ
ಪ್ರೇಮವೆನ್ನಲ್ಲಿಟ್ಟು ಸಲಹೊ ಪುಣ್ಯವರ್ಜಿತನೆ
ತಾಮಸತ್ವದ ಕೆಲಸವೆಲ್ಲವ
ನೇಮದಿಂದಲೆ ಮಾಡಿ ನಾ ನಿ–
ಸ್ಸೀಮನಾಗಿಹೆ ಕಾಯೆಯೊ ವಿಶ್ವವ್ಯಾಪಿ ವಿಠ್ಠಲನೇ ೨೮

ನಾನು ಹೇಳುವುದೇನು ದೇವನೆ
ನೀನೆ ತಿಳಕೊಂಡಿರ್ಪೆ ಎನ್ನಯ
ಮಾನಕುಚಿತಪ್ಪಂತೆ ಸತ್ಫಲ ಕೊಡು ದಯಾಂಬುಧಿಯೇ
ನೀನು ನಿಂತಡೆಗೆನ್ನ ಜಗ್ಗುತ
ಸಾನುರಾಗದೆ ಪೊರೆಯೊ ವಿಠ್ಠಲ
ನೀನೆಯಾದರು ಬಾರೊ ಭಕ್ತರ ಹೃದಯ ಮಂದಿರಕೆ ೨೯

ಮಂಗಳಂ ಮಧುಕೈಟಭಾರಿಗೆ
ಮಂಗಳಂ ಶ್ರೀವತ್ಸಧಾರಿಗೆ
ಮಂಗಳಂ ಬ್ರಹ್ಮಾಂಡ ಪಾಲಕ ಪಾಂಡುರಂಗನಿಗೆ
ಮಂಗಳಂ ಶ್ರೀ ಲಕುಮಿದೇವಿಗೆ
ಮಂಗಳಂ ಭೀಮಾತಟಾಕಿಗೆ
ಮಂಗಳಂ ಸದ್ಭಕ್ತ ಮಂಡಳಿಗೆಗಳ ಭೂತಳಕೆ ೩೦

## ೧. ಗಣೇಶ ಸ್ತವನ

### ೧

ಪ್ರಣಾಮ ಗಣರಾಯಾ ಪ್ರವೀಣಾ ಪ

ಪ್ರಥಮ ಪ್ರಣಾಮವ ಮೂಡಿ ಬೇಡುವೆ
ವಿಘ್ನರಾಜ ನೀ ನೀಡೆಮಗಭಯಾ ಅ.ಪ

ಪಾಶಾಂಕುಶಧರ ಮೂಷಕವಾಹನ
ಕೇಶರಗಂಧ ವಿಭೂಷಿತಾಂಗನೇ
ಶೇಷೋದರ ಉಮೇಶನಂದನಾ
ಯಶವ ನೀಡು ಸತ್ಕಾರ್ಯಗಳಲ್ಲಿ ೧

ಏಕವಿಂಶತಿ ಮೋದಕ ಪ್ರೀಯಾ
ಏಕದಂತ ಗಜವದನ ಉದಾರಾ
ಕಾಕುಬುದ್ಧಿಗಳ ಬಿಡಿಸಿ ಬೇಗನೇ
ಶ್ರೀಕಾಂತನಲಿ ಏಕಾಂತಭಕುತಿ ಕೊಡು ೨

ಸಿದ್ಧಿ ವಿನಾಯಕಾ ವಿದ್ಯಾಸಮುದ್ರಾ
ಬುದ್ಧಿ ಪ್ರದಾಯಕ ಮುದ್ದು ಗಜಾನನಾ
ಶುದ್ಧ ಜ್ಞಾನ ವೈರಾಗ್ಯ ಭಕುತಿಕೊಟ್ಟು
ಉದ್ಧರಿಸೈ ಭೂಪತಿವಿಠ್ಠಲಪ್ರಿಯಾ ೩

## ೨. ಶ್ರೀ ಹರಿಯ ಸ್ತವನ

### ದಶಾವತಾರ

### ೨

ಬೆಳಗುಝಾವದಿ ಬಾರೊ ಹರಿಯೆ ನಿನ್ನ ಚರಣ
ತೊಳೆದು ತೀರ್ಥ ಪಾನ ಮಾಡುವೆ ನಾ ಪ

ನೀರುಬಿಟ್ಟು ಮೇಲೆ ಬಾರೋ ಬೆನ್ನ
ಭಾರವನು ಕೆಳಗಿಟ್ಟು ಬಾರಯ್ಯಾ ಹರಿಯೆ
ಕೋರೆದಾಡಿಯ ತೋರ ಬಾರೋ ನಿನ್ನ
ಧೀರ ಗಂಭೀರ ನರಹರಿ ರೂಪ ತೋರೊ ೧

ಪುಟ್ಟ ಬ್ರಾಹ್ಮಣನಾಗಿ ಬಾರೊ ಆ–
ದುಷ್ಟ ಕ್ಷತ್ರಿಯರನ್ನು ತಿರಿದವನೆ ಬಾರೋ
ಸತ್ಯಸಂಧ ರಾಮ ಬಾರೋ ಬಲು
ಸಿಸ್ತಾಗಿ ಕೊಳಲನೂದುತ ಕೃಷ್ಣ ಬಾರೋ ೨

ಬುದ್ಧ ಪ್ರಬುದ್ಧನಾಗಿ ಬಾರೊ ಬಲು
ದೊಡ್ಡ ತೇಜಿಯನೇರಿ ಭರದಿಂದ ಬಾರೋ
ಮುದ್ದು ಭೂಪತಿ ವಿಠ್ಠಲ ಬಾರೋ ನಮ್ಮ
ಮಧ್ವರಾಯರಿಗೊಲಿದ ಕೃಷ್ಣಯ್ಯ ಬಾರೋ ೩

### ೩

ಬರಬೇಕು ಇಂದಿಲ್ಲಿಗೆ ಇಂದಿರೆರಮಣಾ ಪ

ಬಾರಯ್ಯಾ ಶ್ರೀಹರಿ ವಿಠ್ಠಲ ವೆಂಕಟರಮಣಾ
ಉಡುಪಿಯ ಶ್ರೀಕೃಷ್ಣಾ ಬದರಿನಾರಾಯಣಾ ಅ.ಪ

ಕರಿರಾಜ ಕರೆಯಲು ಕರುಣಸಾಗರ ನೀನು
ಗರುಡವಾಹನನಾಗಿ ಭರದಿಂದ ಬಂದಂತೆ ೧

ಭಕ್ತ ಬಾಲನ ಮಾತು ಸತ್ಯಮಾಡಲು ನೀನು
ತತ್ಕ್ಷಣ ಸ್ತಂಭದಿಂ ಪುಟಿದು ನೀ ಬಂದಂತೆ ೨

ಸಚ್ಚಿದಾನಂದಾತ್ಮ ಸರ್ವತ್ರ ಪರಿಪೂರ್ಣ
ಭಕ್ತವತ್ಸಲ ಶ್ರೀ ಭೂಪತಿವಿಠ್ಠಲ ಸ್ವಾಮಿ ೩

೪

ಬಂದ ನೋಡಮ್ಮಾ ಇಂದಿರೆ ರಮಣಾ ಪ

ಬಂದನೋಡು ಆನಂದದಿಂದ ಗೋವಿಂದ
ಗೋಕುಲಾನಂದ ಮುಕುಂದಾ ಅ.ಪ

ಶ್ರೀ ಕೇಶವ ನಾರಾಯಣಮಾಧವ
ಶ್ರೀಧರ ಗಿರಿಧರ ಗೋವರ್ಧನಧರ
ಶ್ರೀ ದಾಮೋದರ ಪದ್ಮನಾಭ
ಮುಚಕುಂದವರದ ಮುರಹರ ಶ್ರೀಕೃಷ್ಣ ೧

ಸರ್ವೋತ್ತಮ ಸರ್ವಜ್ಞ ಶಿಖಾಮಣಿ
ಸರ್ವಪ್ರೇರಕ ಸರ್ವವ್ಯಾಪಕ
ಸರ್ವಾಧಾರಕ ಸರ್ವ ನಿಯಾಮಕ
ಸರ್ವತಂತ್ರ ಸ್ವತಂತ್ರ ಸಮರ್ಥಾ ೨

ಗೋಪಾಲಾಚ್ಯುತ ಗೋಪ ಕಿಶೋರಾ
ಗೋಪಿ ಜನಮನ ಚಂದ್ರ ಚಕೋರಾ
ಆಪದ್ಬಾಂಧವ ಭೂಪತಿವಿಠ್ಠಲ
ಕೈಪಿಡಿದೆಮ್ಮನು ಕಾಪಾಡಲು ಬಾ ೩

## ಪಾದ ಮಹಿಮೆ

### ೫

ಎಂಥ ಪಾವನ ಪಾದವೊ ರಂಗಯ್ಯ ನಿಂ–
ದೆಂಥಾ ಚಲುವ ಪಾದವೊ ಪ

ಎಂಥ ಪಾವನ ಪಾದ ಎಂಥ ಸುಂದರ ಪಾದ
ಎಂಥೆಂಥವರಿಗದರ ಅಂತ ತಿಳಿಯದಂಥಾ ಅ.ಪ

ಸರ್ವದಾ ಸಿರಿದೇವಿಯು ತೊಡೆಯಮೇಲೆ
ಇಟ್ಟು ಮೆತ್ತಗೆ ಒತ್ತುತಾ ದಿಟ್ಟಿಸಿ ನೋಡುತಾ
ದೃಷ್ಟಿತಾಕೀತೆಂದು ಗಟ್ಟಿ ಹಣೆಯ ಹಚ್ಚಿ
ಬಚ್ಚಿಟ್ಟುಕೊಂಡಂಥಾ ೧

ಹುಡಗರ ಕೂಡಿಕೊಂಡು ಗಡಿಗೆಯ ಒಡೆದು
ಕುಡಿದು ಕೆನೆಪಾಲ್ ಮೊಸರು ಹಿಡಿತುಂಬ ಬೆಣ್ಣೆಯ
ಹಿಡಕೊಂಡು ಓಡುತ ಹಿಡಿಯಬಂದರೆ ದೊಡ್ಡ
ಗಿಡವೇರಿ ಅಡಗುವಿ ೨

ಚಲುವ ಗಂಗೆಯ ಪಡೆದ ಪಾವನಪಾದ
ಶಿಲೆಯು ಸತಿಯ ಮಾಡಿತು ಪ್ರಲಯಕಾಲದ ಆಲ–
ದೆಲೆ ಮೇಲೆ ಮಲಗುತ ಬಲಪಾದಾಂಗುಟ
ಚೀಪುವ ಭೂಪತಿವಿಠ್ಠಲ ೩

### ೬

ಧನ್ಯನಾದೆ ಪಾಂಡುರಂಗನ ಕಣ್ಣಾರೆ ಕಂಡು ಪ

ತಂದೆತಾಯಿಯ ಸೇವೆ ಮಾಡಿ
ಪುಂಡಲೀಕನ ಭಕ್ತಿಗೊಲಿದು

ಚಂದ್ರಭಾಗಾ ತೀರದಲ್ಲಿ
ಬಂದು ನಿಂತ ವಿಠ್ಠಲನ ಕಂಡು ೧

ವೆಂಕಟೇಶ ಅಲ್ಲಿರುವ
ಶಂಖಚಕ್ರ ಪಿಡಿದ ಕರವ
ಟೊಂಕದ ಮೇಲಿಟ್ಟುಕೊಂಡು
ನಿಂತು ಇಲ್ಲಿ ವಿಠಲನಾದ ೨

ಕಡಗೋಲಿಂದ ಗಡಿಗೆ ಒಡೆದು
ತುಡುಗು ಮಾಡಿದ್ದುಡುಗ ಬಂದ
ಉಡುಪಿಯಲ್ಲಿ ಕೃಷ್ಣನಾಗಿ
ಓಡಿಬಂದಿಲ್ಲಿ ವಿಠಲನಾದ ೩

ಎಷ್ಟು ಜನ್ಮದ ಸುಕೃತವೊ ಶ್ರೀ-
ಕೃಷ್ಣ ವಿಠಲರೂಪದಿಂದ
ಭಕ್ತಜನರಿಗಾಲಿಂಗನ
ಭೆಟ್ಟಿ ಕೊಡುತ ನಿಂತುಬಿಟ್ಟ ೪

ಅನ್ನಬ್ರಹ್ಮ ಉಡುಪಿಯಲ್ಲಿ
ಚಿನ್ನ ಬ್ರಹ್ಮ ಬೆಟ್ಟದಲ್ಲಿ
ಸಣ್ಣ ತುಳಸಿಮಾಲೆ ಸಾಕು
ನಾದಬ್ರಹ್ಮ ಭೂಪತಿವಿಠಲಗೆ ೫

## ಗಲಗಲಿ ವಾಸಸ್ಥ ಶ್ರೀ ಪಾಂಡುರಂಗ

### ೭

ಪಂಢರಿಯ ಬಿಟ್ಟಲ್ಲಿ ಹೆಂಡತಿಯ ಕರಕೊಂಡು
ಬಂದ ಕಾರಣ ತಿಳಿಯದೋ
ಹೆಂಡತಿಯ ಕಾಟವೊ ಇದು ನಿನ್ನ ಆಟವೊ

ಭಕ್ತಭೂಮಿಗೆ ಓಟವೊ
ಪಂಢರಿಯ ಬಿಟ್ಟಿಲ್ಲಿ ಬಂದ ಕಾರಣವೇನು
ಪೇಶಯ್ಯ ಪಾಂಡುರಂಗಾ<sub>s</sub>
ಚಂದ್ರಭಾಗಾ ತೀರ ಸುಂದರ ಮಂದಿರವು
ಇಂದಿರಾರಮಣ ನಿನಗಲ್ಲಿ ೧

ಅರುಣೋದಯಕೆ ನಿತ್ಯ ಪಂಚಾಮೃತದ ಸ್ನಾನ
ನವನೀತ ಬಾಯಿ ತುಂಬಾ<sub>s</sub>
ಜರತಾರಿ ಮುಂಡಾಸು ಭರ್ಜರಿ ನಿಲುವಂಗಿ
ಸೊಂಪಿನಂಚಿನ ಮಡಿಯು ನನಗೆ
ತರತರದ ಪುಷ್ಪಗಳು ಎಳೆ ತುಳಸಿ ವನಮಾಲಿ
ಕೊರಳೊಳಗೆ ವೈಜಯಂತಿ
ಪರಿಮಳದ ಗಂಧ ಕಸ್ತೂರಿ ಫಣಿಯಲಿಟ್ಟು
ವೈಭವದಿ ಪೂಜಿಸುವರು ೨

ಅಂದಚೆಂದದ ರತ್ನ ಮುತ್ತಿನಾಭರಣಗಳು
ತರತರದ ಸೊಗಸಾದ ಪಂಚಪಕ್ವಾನ್ನಗಳು
ಸರಿಯಾಗಿ ಮಧ್ಯಾಹ್ನ ಮಾಪೂಜೆ ನಡೆಯುವದು
ಭಕ್ತರಿಗೆ ಲೆಕ್ಕವಿಲ್ಲಾ<sub>s</sub>
ಪಾದಕ್ಕೆ ಹಣೆ ಹಚ್ಚಿ ತಿಕ್ಕುವರು ಮೇಲೆದ್ದು
ನಿಂತುಬಿಡುವರು ಅಲ್ಲಿ ದಬ್ಬಿದರು ಎಚ್ಚರಿಲ್ಲಾ
ಇಂಥ ಭಕ್ತಿಯ ಭಾವ ಇನ್ನೆಲ್ಲಿಯೂ ಕಾಣೆ
ಭಕ್ತವತ್ಸಲ ವಿಠ್ಠಲಾ<sub>s</sub> ೩

ಗೋಧೂಳಿ ಕಾಲಕ್ಕೆ ಪಾದಪೂಜೆಯು ಮಹಾ
ಧೂಪ ದೀಪೋತ್ಸವಗಳು<sub>s</sub>
ಆಪಾದಮೌಳಿ ಪರ್ಯಂತ ದರ್ಶನ ಪಾದ

ಸ್ಪರ್ಶದಾ ಆನಂದವ್ವೋ<sub>s</sub>
ರಾತ್ರಿ ಹತ್ತಕ್ಕೆ ಶಯನೋತ್ಸವದ ವೈಭವವು
ನೋಡಿದವರೇ ಧನ್ಯರು<sub>s</sub>
ಸಚ್ಚಿದಾನಂದಮೂರ್ತಿ ಅಲ್ಲಿ ಪ್ರತ್ಯಕ್ಷ
ಭಕ್ತರಿಗೆ ಕಾಣುತಿಹನು ೪

ಸತ್ಯವಾದೀ ಜಗಕೆ ಪಂಚಭೇದವು ನಿತ್ಯ
ಸರ್ವತ್ರ ತಾರತಮ್ಯ
ಸೃಷ್ಟ್ಯಾದಿ ಅಷ್ಟ ಕರ್ತೃತ್ವ ವಿಠ್ಠಲಗುಂಟು
ವಿಠ್ಠಲನೆ ಸರ್ವೋತ್ತಮಾ<sub>s</sub>
ಹರಿಯು ಸರ್ವೋತ್ತಮನು ವಾಯು ಜೀವೋತ್ತಮನು
ಮೂಲಗುರು ಮುಖ್ಯ ಪ್ರಾಣನು
ಮಧ್ವಮತವೇ ಮತವು ಸಕಲಶ್ರುತಿಸಮ್ಮತವು
ನಿತ್ಯ ತತ್ತ್ವಜ್ಞಾನವು<sub>s</sub> ೫

ಅಣುರೇಣು ಪರಿಪೂರ್ಣ ಸರ್ವಗುಣ ಸಂಪನ್ನ
ನಿರ್ದೋಷ ನಿರ್ವಿಕಾರಾ<sub>s</sub>
ಸರ್ವತಂತ್ರ ಸ್ವತಂತ್ರ ಸರ್ವಾಂತರ್ಯಾಮಿ
ಸರ್ವಜ್ಞ ಸರ್ವಸ್ವಾಮಿ<sub>s</sub>
ಸಚ್ಚಿದಾನಂದಾತ್ಮ ಪೂರ್ಣಾತ್ಮ ಪರಮಾತ್ಮ
ನಿತ್ಯತೃಪ್ತನು ಶ್ರೀಹರಿ<sub>s</sub>
ನಿರ್ಗುಣ ನಿರಾಕಾರ ಅಮಿತಗುಣ ಆಕಾರ
ತ್ರಿಗುಣವರ್ಜಿತ ತ್ರಿಧಾಮಾ<sub>s</sub> ೬

ಕಾರ್ಯಕಾರಣ ಅಂಶಿ ಅಂಶಾವತಾರ
ಅಂತರ್ಯಾಮಿಯಾಗಿ ಇಹನು<sub>s</sub>
ಪ್ರೇರ್ಯಪ್ರೇರಕನಾಗಿ ಬಾಧ್ಯ ಬಾಧಕನಾಗಿ

ವ್ಯಾಪ್ಯ ವ್ಯಾಪಕನು ತಾನುs
ಯಾರು ತನ್ನನೆ ನಂಬಿ ಸರ್ವಸ್ವವನು ನೀಡಿ
ದಾಸರಾಗುವರೊ ಅವರನ್ನುs
ಕ್ಲೇಶಗಳ ಕಳೆದು ಭವಪಾಶ ಬಂಧವ ಬಿಡಿಸಿ
ಶ್ರೀಶ ಕೈಪಿಡಿದು ಪೊರೆವಾs ೭

ವಿಷ್ಣು ಸರ್ವೋತ್ತಮತ್ವ ತಿಳಿಯದ ಜ್ಞಾನಶೂನ್ಯರಿಗೆ
ಬೇಸತ್ತು ಇಲ್ಲಿ ಬಂದ್ಯಾ s
ಭಕ್ತ ಪ್ರಹ್ಲಾದನವತಾರ ರಾಯರು ಇಲ್ಲಿ
ಬಂದದ್ದು ಕೇಳಿ ಬಂದ್ಯಾ s
ಮಧ್ವಸಿದ್ಧಾಂತ ಪದ್ಧತಿಗೆ ಅನುಸರಿಸಿ
ಪೂಜೆಗೊಂಬಲು ಬಂದೆಯಾs
ಮುದ್ದುಭೂಪತಿವಿಠಲ ಬಿದ್ದೆ ನಿನಪಾದಕ್ಕೆ
ಉದ್ಧಾರ ಮಾಡೊ ಸ್ವಾಮಿ ೮

## ಫಲಶ್ರುತಿ

ಚಿತ್ತನಿರ್ಮಲರಾಗಿ ಭಕ್ತಿಭಾವದಿ ನಿತ್ಯ
ವಿಠ್ಠಲಾಷ್ಟಕ ಪಠಿಸಲು
ವಿಠ್ಠಲನು ಕೈಪಿಡಿದು ಕಷ್ಟಗಳ ಪರಿಹರಿಸಿ
ಇಷ್ಟಾರ್ಥಗಳ ಕೊಡುವನುs
ಸತ್ಯವೀ ಮಾತಿದಕೆ ಸಾಕ್ಷಿ ಬೇಕಾದರೆ
ಪ್ರತ್ಯಕ್ಷ ಪಾಂಡುರಂಗಾs
ಕಾವೇರಿ ಶ್ರೀರಂಗ ಕಂಬೆವರದರಾಜ
ಗಲಗಲಿಯ ನರಸಿಂಗನೋs ೯

## ೮

ಜೋ ಜೋ ಜೋ ಜೋ ಗೋಪಿಯ ಕಂದಾ
ಜೋ ಜೋ ಜೋ ಜೋ ಸಚ್ಚಿದಾನಂದಾ
ಜೋ ಜೋ ಜೋ ಜೋ ಮಲಗೋ ಮುಕುಂದಾ
ಜೋ ಜೋ ಇಂದಿರಾರಮಣ ಗೋವಿಂದಾ ಜೋ ಜೋ ಪ

ಅಣುರೇಣು ತೃಣಕಾಷ್ಠ ಪರಿಪೂರ್ಣ ಜೋ ಜೋ
ಪ್ರಣತಕಾಮದ ಪದ್ಮಜಾರ್ಜಿತ ಜೋ ಜೋ
ಜಾಣೆರುಕ್ಮಿಣಿಯರಸಿ ಶ್ರೀಕೃಷ್ಣ ಜೋ ಜೋ
ಜಾನಕಿ ಜೀವನ ಶ್ರೀರಾಮ ಜೋ ಜೋ ೧

ಸೃಷ್ಟಿಸ್ಥಿತಿಲಯ ಕಾರಣ ಜೋ ಜೋ
ಇಟ್ಟಿಗೆ ಮೇಲ್ನಿಂತ ವಿಠ್ಠಲ ಜೋ ಜೋ
ಬೆಟ್ಟದ ತಿಮ್ಮಪ್ಪ ಶೆಟ್ಟಿಯೆ ಜೋ ಜೋ
ದಿಟ್ಟ ಶ್ರೀ ಉಡುಪಿಯ ಕೃಷ್ಣನೆ ಜೋ ಜೋ ೨

ಜೋ ಜೋ ಶ್ರೀರಾಮದೂತ ಹನುಮಂತಾ
ಜೋ ಜೋ ಜೋ ಭೀಮ ದ್ರೌಪದಿಕಾಂತಾ
ಜೋ ಜೋಯತಿವರ ಆನಂದತೀರ್ಥಾ
ಜೋ ಜೋ ಮೂರಾವತಾರ ವಿಖ್ಯಾತ ಜೋ ಜೋ ೩

ಜೋ ಜೋ ಮಧ್ವ ಸಂತಾನ ಮುನಿವೃಂದಾ
ಜೋ ಜೋ ಪ್ರಲ್ಹಾದ ವ್ಯಾಸ ರಾಜೇಂದ್ರಾ
ಜೋ ಜೋ ಗುರುಸಾರ್ವಭೌಮಯತೀಂದ್ರಾ
ಭೂಪತಿವಿಠ್ಠಲನ ಮೋಹದಕಂದಾ ಜೋ ಜೋ ೪

## ೩. ವಿವಿಧ ದೇವತಾ ಸ್ತುತಿ

### ಗೆಣ್ಣೂರಿನ ದುರ್ಗಾದೇವಿ

೬

ಬಂದಳಮ್ಮಾ ಇಂದು ಇಲ್ಲಿಗೆ ಗೆಣ್ಣುರವ್ವಾ ಪ

ಬಂದಳಮ್ಮಾ ಇಂದು ಇಲ್ಲಿ ಚಂದ್ರವದನೆ ಇಂದಿರಾದೇವಿ
ಗಂಡುಗಲಿಯ ವೇಶತಾಳಿ ಗೆಂಡಾಸುರನ ಕೊಂದು ನಗುತ ಅ.ಪ

ಜಗದೀಶನ ಮಡದಿಯಂತೆ ಮಗಗೆ ನಾಲ್ಕು ಮುಖಗಳಂತೆ
ಮಗನ ಮಗ ಬೈರಾಗಿಯಂತೆ ಅಗಜೆ ಅವಗೆ ಒಲಿದಳಂತೆ ೧

ಹರಿಯ ಹೃದಯದಲ್ಲಿ ಸದಾ ಅಗಲದೆ ತಾ ಇರುಳಂತೆ
ಆದಿಮಾಯಾ ಶಕ್ತಿಯಾಗಿ ಜಗದ ವ್ಯಾಪಾರ ಮಾಡುವಳಂತೆ ೨

ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರಸೇವೆ
ಸಾಟಿಇಲ್ಲದೆ ಮೂಡಿ ಪೂರ್ಣ ನೋಟದಿಂದ ಸುಖಿಪಳಂತೆ ೩

ಛಕ್ರಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿನಿಂತು
ಚಿತ್ತಚರಿತನಾದ ಹರಿಯ ನಿತ್ಯ ಸೇವೆ ಮಾಡುವಳಂತೆ ೪

ಗಂಡ ಹೆಂಡಿರ ಜಗಳವಂತೆ ಕೊಲ್ಹಾಪುರದಿ ಇರುವಳಂತೆ
ಗಂಡ ವೈಕುಂಠ ಮಂದಿರಬಿಟ್ಟು ವೆಂಕಟಗಿರಿಯಲಿ ಇರುವನಂತೆ ೫

ವೀರಪುರುಷ ವೇಷವಂತೆ ಕ್ರೂರ ದೈತ್ಯನ ಸೀಳಿದಳಂತೆ
ಯಾರಿಗು ಗೊತ್ತಾಗದಂತೆ ರಾತ್ರಿ ಊರೊಳಗೆ ಬರುವಳಂತೆ ೬

ಭಾರತಹುಣ್ಣಿಮೆ ಜಾತ್ರಿಯಂತೆ ಭಾರಿಜನರು ಕೂಡುವರಂತೆ
ಭಾರಿ ಡೊಳ್ಳು ಹೊಡಿವರಂತೆ ಭೂಪತಿವಿಠ್ಠಲ ನಗುವನಂತೆ ೭

## ಹನುಮಂತದೇವರು

### ೧೦

ಏನೆಂದು ಕೊಂಡಾಡಲಿ ಮಾರುತಿರಾಯ ಪ

ಹುಟ್ಟಿದಾಕ್ಷಣ ಕೆಂಪು ಕಿತ್ತಳೆ ಹಣ್ಣೆಂದು
ಸೂರ್ಯಮಂಡಲಿಕೆ ನೀ ಹಾರಿ ಹಿಡಿದ ವೀರಾ ೧

ಶರಧಿಯ ಜಿಗಿದು ಸೀತೆಗೆ ಮುದ್ರಿಕೆ ಕೊಟ್ಟು
ಲಂಕಾ ಪಟ್ಟಣ ಸುಟ್ಟು ಜೀವೋತ್ತಮನು ನೀನು ೨

ಕಪಿವೇಷದಿಂದ ಮೆರೆದ ಗದೆಪಿಡಿದ ಸನ್ಯಾಸಿ
ಭೂಪತಿವಿಠ್ಠಲನ ದಾಸಾಗ್ರೇಸರನು ನೀನು ೩

## ಗಲಗಲಿಯ ಪ್ರಾಣದೇವರು

### ೧೧

ಸುಂದರ ಮೂರುತಿ ಮುಖ್ಯಪ್ರಾಣನು ಬಂದಾ
ಬಂದಾ ಗಲಗಲಿಗೆ ಕಲಾದಿಗೆಯಿಂದಾ ಪ

ಕಾಯರ ಹೃದಯದಿ ಶ್ರೀರಾಮನಿರುವಾ
ಶ್ರೀರಾಮನಿದ್ದಲ್ಲಿ ಶ್ರೀಹುನಂತ ಬರುವಾ
ಈ ಮಾತು ನಿಜವೆಂದು ಎಲ್ಲಾ ಜನರಿಗೆ
ತಿಳಿಸಿಕೊಡಲು ಬಂದಾ ಶ್ರೀರಾಯರ ಮಠಕೆ ೧

ಹನುಮ ಭೀಮ ಮಧ್ವನಾನೇ ನೋಡೆಂದ
ಕೊರರೊಳು ಶ್ರೀತುಳಸಿ ಮಾಲೆ ಹಾಕಿಕೊಂಡಾ

ಬಲಗೈಯೊಳು ಭೀಮಗದೆ ನೋಡಿರೆಂದಾ
ಬಾಲ ಹಾರಿಸಿ ವೀರ ಹನುಮನಾನೆಂದಾ
ಭೂಪತಿ ವಿಠ್ಠಲನ ಮೋಹದ ಕಂದಾ ೩

## ಗೋವಿನದಿನ್ನಿ ಹನುಮಪ್ಪ

### ೧೨

ಬಾರಪ್ಪ ನೀ ಬಾರಪ್ಪಾ ಭಾರತಿರಮಣಾ ಮುಖ್ಯಪ್ರಾಣಾ
ಗೋವಿನದಿನ್ನಿ ಹಣ್ಣಮಪ್ಪಾ ನೀ ಗಾಲವ ಕ್ಷೇತ್ರಕೆ ಬಾರಪ್ಪಾ ಪ

ಗಾಲವಕ್ಷೇತ್ರಕ್ಕೆ ಬಾರಪ್ಪಾ ನೀ ಹೋಳಿಗೆತುಪ್ಪಾ ಹೊಡೆಯಪ್ಪಾ
ಕೃಷ್ಣವೇಣಿಯ ತಟದ ಶಿಲೆಯೊಳು ಒಡಮೂಡುತ ನೀ ಇದ್ದೆಪ್ಪಾ ೧

ಶಿಷ್ಟರಾದ ಶ್ರೀ ಉಮರ್ಜಿ ಆಚಾರ್ಯರ ನಿಷ್ಠೆಗೆ ಒಲಿದು ಬಂದೆಪ್ಪಾ
ಶರಧಿಗೆ ಜಿಗಿದು ಸೀತಾದೇವಿಗೆ ರಾಮಮುದ್ರಿಕೆಯ ಕೊಟ್ಟೆಪ್ಪಾ
ದುರುಳ ರಾವಣನ ಲಂಕಾಪಟ್ಟಣ ಸುಟ್ಟ ಕಪಿವರನು ನೀನಪ್ಪಾ
ದುಷ್ಟ ಕೌರವನ ತೊಡೆಯ ಒಡೆದು ಗದೆಪಿಡಿದ ಭೀಮ ನೀ ಹೌದಪ್ಪಾ ೨

ದುಃಶಾಸನನ ಕರುಳ ಬಗೆದು ನರಸಿಂಹನ ಪ್ರೀತಿ ಪಡೆದೆಪ್ಪಾ
ಹರಿಯದ್ವೇಷಿಗಳ ದುರ್ಮತಗಳನು ಮುರಿದು ಮಧ್ವಯತಿ ಆದೆಪ್ಪಾ
ರಾಶಿ ರಾಶಿ ಸದ್ಗ್ರಂಥ ರಚಿಸಿ ನೀ ವ್ಯಾಸರ ಸನ್ನಿಧಿ ಪಡೆದೆಪ್ಪಾ
ಕೃಷ್ಣವೇಣಿತಟ ನರಾಹರಿ ಇರುವನು ರಾಯರು ಇರುವರು ಬಾರಪ್ಪಾ ೩

ಎಲ್ಲಿ ನರಹರಿ ಎಲ್ಲಿ ರಾಯರು ಅಲ್ಲಿ ನೀ ಇರಬೇಕಪ್ಪಾ
ಪಾಪಿಷ್ಠರ ಗತಿಭಯಂಕರನು ನೀ
ಪುಣ್ಯವಂತರಿಗೆ ಸುಲಭಪ್ಪಾ
ಭೂಪತಿವಿಠ್ಠಲನ ಭಕ್ತರ ಪೊರೆಯಲು ನೀ ಗಾಲವ ಕ್ಷೇತ್ರಕೆ ಬಾರಪ್ಪಾ ೪

## ರುದ್ರದೇವರು

### ೧೩

ರಾಮಲಿಂಗ ಶಿವಶಂಕರ ಪಾರ್ವತಿ
ರಮಣಾ ನಿನಗೆ ನಮೊ ನಮೊ ಪ

ರಾಮನಾಮ ಪ್ರಿಯ ರಾಮೇಶ್ವರ ತವ
ಚರಣಕಮಲಕೆ ನಮೊ ನಮೊ ಅ.ಪ

ಗಜಚರ್ಮಾಂಬರ ಭುಜಗಭೂಷಣ
ತ್ರಿಜಗ ವಂದ್ಯತೇ ನಮೊ ನಮೊ
ಭಜಕಾಮರ ಕುಜ ಕುಜನಭಂಜನಾ
ವಿಜಯಸಾರಥಿಸಖ ನಮೊ ನಮೊ ೧

ನೀಲಕಂಠ ತ್ರಿಶೂಲ ಡಮರು ಧರ
ಫಾಲನಯನತೇ ನಮೋ ನಮೋ
ಪ್ರಳಯಕರ್ತ ಕೈಲಾಸವಾಸ ಶ್ರೀ
ಶೈಲಾಧಿಪತೆ ನಮೋ ನಮೋ ೨

ಕಾಶಿ ವಿಶ್ವೇಶ್ವರ ಕೇದಾರೇಶ್ವರ
ಮಹಾಬಲೇಶ್ವರ ನಮೋ ನಮೋ
ದ್ವಾದಶ ಜ್ಯೋತಿರ್ಲಿಂಗಾಂತರ್ಗತ
ಉಮಾಮಹೇಶ್ವರ ನಮೋ ನಮೋ ೩

ಕೃಷ್ಣವೇಣಿ ತಟ ಚಿಕ್ಕಗಲಗಲಿವಾಸ
ರಾಮೇಶ್ವರ ನಮೋ ನಮೋ
ಮೃತ್ಯುಂಜಯ ಭೂಪತಿವಿಠಲಪ್ರಿಯ
ಚಂದ್ರಮೌಳಿ ತೇ ನಮೋ ನಮೋ ೪

## ಪಾರ್ವತಿ ದೇವಿ

### ೧೪

ಹರನ ಪಟ್ಟದ ರಾಣಿ ಪರಮ ಕಲ್ಯಾಣಿ
ಕರುಣದಲಿ ಕರ್ಣೇರದು ನೋಡು ಪನ್ನಗವೇಣಿ ಪ

ಮತಿಪ್ರೇರಕಳು ನೀನು ಪತಿಯ ಮನದ ಅಭಿಮಾನಿ
ಸುತರು ಷಣ್ಮುಖನು ಗಜಮುಖ ಈರ್ವರು
ಪತಿಯು ನೆತ್ತಿಯಮೇಲೆ ಗಂಗೆಯನ್ನು ಹೊತ್ತಿಹನು
ಅತಿ ವಿಚಿತ್ರವು ನಿನ್ನ ಸಂಸಾರಸೊಬಗು ೧

ತಂದೆಯ ಅಪಮಾನಹೊಂದಿ ಸಹಿಸದೆ ಯಜ್ಞ
ಕುಂಡದೊಳಗೆ ಹಾರಿ ನೀ ದೇಹಬಿಟ್ಟೆ
ಗಂಡನಿಗೆ ಈ ಸುದ್ದಿ ಮುಟ್ಟಿದಾಕ್ಷಣ ನಿನ್ನ
ತಂದೆಯ ರುಂಡವನು ಚೆಂಡಾಡಿದನು ಶಿವನು ೨

ಶಿವಶಂಕರನು ಅವನು ಬನಶಂಕರಿಯು ನೀನು
ಭಸಿತ ಭೂಷಿತನವನು ಶಶಿಮುಖಿಯು ನೀನು
ರಾಮಭಕ್ತನು ಅವನು ಪೇಮಪುತ್ಥಳಿ ನೀನು
ಕಮಲಾಕ್ಷಿ ಭೂಪತಿ ವಿಠ್ಠಲಗೆ ಅತಿಪ್ರಿಯರು ನೀವು ೩

## ಶ್ರೀ ದತ್ತಾತ್ರೇಯ

### ೧೫

ಧನ್ಯ ಧನ್ಯ ದತ್ತಾ ದಿಗಂಬರ
ಧನ್ಯ ಮಾನ್ಯ ದತ್ತಾ ಪ

ಧನ್ಯ ಧನ್ಯ ಜಗಮಾನ್ಯ ದಿಗಂಬರ
ಪುಣ್ಯ ಪುರುಷ ಕಾರುಣ್ಯನಿಧೇ
ಅನ್ಯನಲ್ಲ ನಾ ನಿನ್ನವನಯ್ಯಾ
ಎನ್ನ ಕೈಪಿಡಿದು ಧನ್ಯನ ಮಾಡೋ ೧

ಗಾಲವಕ್ಷೇತ್ರ ನಿವಾಸ ವಿಶೇಷಾ
ಬಾಲ ಸೂರ್ಯ ಸಮಕಾಂತಿ ಪ್ರಕಾಶ
ಕಾಷಾಯಾಂಬರ ಭೂಷಿತ ವೇಷಾ
ಜಟಾಧಾರಿ ಪ್ರಭೊ ನಾ ತವದಾಸಾ ೨

ದತ್ತ ದಿಗಂಬರ ಶ್ರೀಪಾದವಲ್ಲಭ
ಭೃತ್ಯ ನಾನು ಮೇಲೆತ್ತಿ ಉದ್ಧರಿಸೊ
ಸತ್ಯಸಂಧನು ನೀನೆ ಮಹಾತ್ಮ
ಚಿತ್ತದಿ ಭೂಪತಿವಿಠ್ಠಲನ ನಿಲಿಸೊ ೩

## ೪. ಯತಿವರ್ಯರು

### ಶ್ರೀ ಜಯತೀರ್ಥರು

೧೬

ಜಯರಾಯಾ ಜಯರಾಯಾ
ಭಯಕೃತ್ ಭಯನಾಶನ ಗುರುರಾಯಾ ಪ

ಪೂರ್ವಜನ್ಮದಲಿ ಎತ್ತಿನ ರೂಪದಿ
ಸರ್ವಜ್ಞರ ಗ್ರಂಥ ಹೊತ್ತ ಮಹಾತ್ಮಾ ೧

ಸ್ವರ್ಗ ಸುಖದ ಸಂಸಾರವನು ಕ್ಷಣದಿ
ಬಿಟ್ಟುಕೊಟ್ಟ ವೈರಾಗ್ಯದ ಮೂರುತಿ ೨

ಮಧ್ವಾರ್ಯರ ಗೂಢಾರ್ಥ ಗ್ರಂಥಗಳ
ಕಡೆದು ಕಡೆದು ಸುಧೆ ಸುರಿದ ಸುರೇಂದ್ರಾ ೩

ಜ್ಞಾನಭಕ್ತಿ ವೈರಾಗ್ಯದ ಋಷಿಯೆ
ಮಾನ್ಯಖೇಟದಲಿ ಮೆರೆಯುವ ದೊರೆಯೆ ೪

ಅಪರೋಕ್ಷಿಕೃತ ಭೂಪತಿವಿಠ್ಠಲ
ಅಪಾರಮಹಿಮ ಟೀಕಾಕೃತ್ಪಾದಾ ೫

### ಶ್ರೀ ಪಾದರಾಜರು ಮತ್ತು ವ್ಯಾಸರಾಯರು

೧೭

ಎಂಥ ಗುರುಶಿಷ್ಯರ ಜೋಡಿಯು ನೋಡಿರಿ
ಇಂಥವರ ಸ್ಮರಿಸಿದರೆ ಚಿಂತೆ ದೂರಾಗುವದು ಪ

ಧ್ರುವರಾಜವಂಶದಿಂದಿಳೆಯೊಳಗೆ ಅವತರಿಸಿ
ಸರ್ವದುರ್ವಿಷಯದಲಿ ವೈರಾಗ್ಯ ಬೆಳೆಸಿ
ಬಾಲ್ಯದಲಿ ಪರಮಹಂಸಾಶ್ರಮ ಸ್ವೀಕರಿಸಿ
ಶ್ರೀಪಾದ–ರಾಜರೆಂದೆನಿಸಿ ಮೆರೆವರು ನೋಡು ೧

ಶ್ರೀಶನನು ಕಂಬದಿಂದ ತಂದ ಪ್ರಲ್ಹಾದನೆ
ವ್ಯಾಸಮುನಿಯಾಗಿ ಅವತರಿಸಿ ಬಂದು
ದೇಶಾಧಿಪತಿಗೆ ಬಂದಾಪತ್ತು ಪರಿಹರಿಸಿ
ಶ್ರೀ ಪಾದರಾಜರಿಗೆ ಶಿಷ್ಯರಾದರು ನೋಡು ೨

ಜ್ಞಾನ ವೈರಾಗ್ಯ ಭಕ್ತಿಯು ತುಂಬಿರುವುದು
ದೀನಜನ ಮಂದಾರ ಭಕ್ತ ಪುರಧೇನು
ವಿಜಯೀಂದ್ರ ವಾದಿರಾಜರಿಗೆ ಗುರು ಪರಮಗುರು
ಭೂಮಪತಿವಿಠ್ಠಲನ ಕುಣಿಸಿದ ಮಹಾತ್ಮರು ೩

## ಸೋದೆ ವಾದಿರಾಜರು

### ೧೮

ಸಾರಿ ಭಜಿಸಿರೋ ವಾದಿ ರಾಜ ಗುರುಗಳಾ
ಘೋರ ಸಂಕಟದಿಂದಾ ಪಾರು ಮಾಳ್ಪರಾ ಪ

ಭುಜಗುಣಸ್ಥರಾ ಅಜನ ಪದಕೆ ಅರ್ಹರಾ
ಸುಜನವಂದ್ಯರಾ ವಾಜಿವದನ ದಾಸರಾ ೧

ವಕ್ರತರ್ಕದಾ ವಾದಿ ಸೊಕ್ಕು ಮುರಿದರಾ
ಯುಕ್ತಮಲ್ಲಿಕಾ ರಚಿಸಿ ಮುಕ್ತಿ ತೋರ್ಪರಾ ೨

ಕುದುರೆ ಮೋರೆಯಾ ದೇವ ಮುದದಿ ಮೆಲುವನು
ಕಡಲೆ ಹೂರಣಾ ನೀವು ಕೊಡಲು ಅನುದಿನಾ ೩

ಭೂತರಾಜನು ಸೋತ ದಾಸನಾದನು
ಅತಿ ಮಹತ್ವದಾ ಸೇವೆ ಸತತ ಮಾಳ್ಪನು ೪

ಭಕ್ತಿಯಿಂದಲಿ ಇವರ ಸ್ತುತಿಯ ಮಾಡಲು
ಭೂಪತಿವಿಠ್ಠಲಾ ಒಲಿದು ವರವಾ ಕೊಡುವನು ೫

## ವಿಜಯೀಂದ್ರರು

### ೧೯

ವಿಜಯೀಂದ್ರಾ ವಿಜಯೀಂದ್ರಾ
ಸುಜನ ಭಜಕಮನ ಚಕೋರಚಂದ್ರಾ ಪ

ಶೈವಾದ್ವೈತದಪ್ಪಯ್ಯ ದೀಕ್ಷಿತರ ಸದ್ದು ಅಡಗಿಸಿದ
ವಿದ್ಯಾ – ಸಮುದ್ರಾ ೧

ಎಮ್ಮೆ ಬಸವನ ಹೆಮ್ಮೆ ಮುರಿದು
ಆ ಕುಂಭೇಶ್ವರನನು ಒಲಿಸಿದ ಧೀರಾ ೨

ವ್ಯಾಸ ಮುನಿಕುವರ ವಿಷ್ಣುತೀರ್ಥ ನೀ
ಕೃಷ್ಣಾರ್ಪಣವೆಂದರು ಶ್ರೀಮಠಕೆ ೩

ರಾಶಿ ರಾಶಿ ಗ್ರಂಥಗಳ ವಿರಚಿಸಿದ
ದೇಶಕಾರ್ಯ ವಿದ್ವಾಂಸರ ಪ್ರೀಯಾ ೪

ಮೂಲ ವೇಣುಗೋಪಾಲಕೃಷ್ಣ ನಿನ್ನ
ಮೂಲರಾಮನ ಸೇವೆಗೆ ಕಳಿಸಿದ ೫

ಸರ್ವಕಲೆಗಳಲಿ ಪರಿಪೂರ್ಣನು ನೀ ಸರ್ವ
ಶಾಸ್ತ್ರ ಸಂಪನ್ನ ಪ್ರಸನ್ನ ೬

ಶೈವಾದ್ವೈತರ ಗೆದ್ದು ಓಡಿಸಿ
ಕಾವೇರಿತಟ ಪಾವನ ಮಾಡಿದಿ ೭

ಮಧ್ವ-ಮತಾಬ್ಧಿಗೆ ಪೂರ್ಣ ಸುಚಂದ್ರಾ
ವಾದಿತಿಮಿರಮಾರ್ತಂಡ ಪ್ರಚಂಡಾ ೮

ತಾಪತ್ರಯ ಪರಿಹರಿಸಿ ಕೈಪಿಡಿಯೋ
ಭೂಪತಿವಿಠ್ಠಲನ ಭಕ್ತಿವರ್ಯಾ ೯

## ಶ್ರೀ ರಾಘವೇಂದ್ರರ ಸ್ತುತಿಪರ ಕೀರ್ತನೆಗಳು

### ೨೦

ಈ ಪರಿಯ ಸೊಬಗು ಇನ್ನಾವ ಗುರುಗಳಿಗುಂಟು
ಈ ಪರಿಮಳಾರ್ಯ ಗುರುರಾಜಗಲ್ಲದೆ ಪ

ಅರ್ಜುನಪ್ರಿಯ ಸೇವಕನು ಶಂಕುಕರ್ಣನು ಮೊದಲು
ಅಜನ ಶಾಪವ ತಾಳಿ ದೈತ್ಯರೊಳು ಜನಿಸಿ
ಈ ಜಗದಿ ಸರ್ವತ್ರ ಹರಿಯ ವ್ಯಾಪ್ತಿಯ ತೋರಿ
ನಿಜ ಭಕ್ತನೆನಿಸಿದನು ಪ್ರಹ್ಲಾದನಾಗಿ ೧

ದ್ವಾಪರಾಂತ್ಯದಿ ಇವನ ಬಾಹ್ಲೀಕನೆಂದೆನಿಸಿ
ಶಾಪಫಲ ಪರಿಹಾರವಾಗಬೇಕಾಗಿ
ವಿಪರೀತ ಬುದ್ಧಿಯಿಂ ಯುದ್ಧವನು ಮಾಡಿ ತಾ-
ನಪೇಕ್ಷಿಸಿದ ಭೀಮನಿಂ ಮರಣವನ್ನು ೨

ಕಲಿಯುಗದಿ ಭೀಮಸೇನ ಮಧ್ವ ಮುನಿಯಾಗಿ
ಅವತರಿಸಿ ತತ್ವಮತ ಸ್ಥಾಪಿಸಿದನು
ಬಾಹ್ಲೀಕ ಬಾಲಯತಿ ವ್ಯಾಸಮುನಿಯಾಗಿ
ಕರುಣಿಸಿದನು ಕೃಷ್ಣ ಸದ್ಗ್ರಂಥಗಳ ರಚಿಸಿ ೩

ವ್ಯಾಸರಾಯರ ಮುಂದೆ ಅವತರಿಸಿ ಗುರುವರ್ಯ
ಶ್ರೀರಾಘವೇಂದ್ರನೆಂದೆನಿಸುತ
ಮಧ್ವಮತ ದುಗ್ಧಾಬ್ಧಿ ಚಂದ್ರಮನು ತಾನಾಗಿ
ಕಲಿಯುಗದ ಕಲ್ಪತರು ಎಂದೆನಿಸಿದ ೬

ಅಜನಪ್ರಿಯ ಅಜನ ತಾತನ ಭಕ್ತ
ಅಜಪದಕೆ ಅರ್ಹನೆ ಇವನಂತ (?)
ಅಜನ ತಾತನ ಕುಣಿಸಿ ಅಜಕರಾರ್ಚಿತ
ಪೂಜಿಸಿದ ಭೂಪತಿವಿಠ್ಠಲನ ದಾಸ * ೭

## ೨೧

ಎಂಥ ಸುಂದರವಾದ ವೃಂದಾವನಾ
ನಿಂತು ನೋಡಲು ಮನಕೆ ಸಂತೋಷವಾಗುವದು ಪ

ಶ್ರೀ ರಾಘವೇಂದ್ರ ಗುರುಸಾರ್ವಭೌಮರ ದಿವ್ಯ
ಧೀರ ಗಂಭೀರ ಸುಮನೋಹರ ಸುಮೂರ್ತಿ
ರಾರಾಜಿಸುತಿಹುದು ಮುಗಳುನಗೆ ಮುಖದಿಂದಾ
ಶರಣಾಗತರಿಗೆಲ್ಲ ಅಭಯ ಹಸ್ತವ ನೀಡಿ ೧

ಪ್ರೇರಕರು ತಾವಾಗಿ ಪ್ರೇರ್ಯರೊಬ್ಬನ ಮಾಡಿ
ಕಾರಾಗಿರನ ಕನಸು ಮನಸಿನಲಿ ಪೋಗಿ
ಇರಬೇಕು ಹೀಗೆಂಬ ವೃಂದಾವನದಿ ಚಿತ್ರ
ತೋರಿಸುತ ಅಂತರಂಗದಿ ನಿಂದು ಮಾಡಿಸಿದ ೨

ಅಡಿಗಡಿಗೆ ಮಹಿಮೆಯನು ತೋರಿಸುತ ಗಲಗಲಿಗೆ
ನಡೆತಂದು ಶ್ರೀ ಮಠವ ಹಮ್ಮಿಕೊಂಡಿಹರು

---

* ಈ ನುಡಿಯ ಅರ್ಥ ಸ್ಪಷ್ಟವಾಗಿಲ್ಲ

ಸಡಗರದಿ ಭಕುತರಿಂ ಸೇವೆಕೊಳ್ಳುತಲಿಹರು
ಬಡವರಿಗೆ ಭಾಗ್ಯ ನಿಧಿಯು ಬಂದಂತೆ ಆಯ್ತು ೩

ಅಲ್ಲಿ ಮಂತ್ರಾಲಯವು ಇಲ್ಲಿ ಗಾಲವಕ್ಷೇತ್ರ
ಅಲ್ಲಿ ತುಂಗಾ ಇಲ್ಲಿ ಕೃಷ್ಣವೇಣಿ
ಅಲ್ಲಿ ಪ್ರಹ್ಲಾದರಾಜ ಯೋಗ ಮಾಡಿದನು ಇಲ್ಲಿ
ತಪವ ಗೈದಿಹರು ಗಾಲವ ಮಹರ್ಷಿಗಳು ೪

ಅಲ್ಲಿ ರಾಯರಬಂಡಿ ಇಲ್ಲಿ ಋಷಿಗಳ ಬಂಡಿ
ಅಲ್ಲಿ ಮಂಚಾಲೆಮ್ಮಾ ಇಲ್ಲಿ ಜಗದಂಬಾ
ಅಲ್ಲಿ ಹೊಳೆದಾಟಿದರೆ ಪಂಚಮುಖಿಪ್ರಾಣೇಶ
ಇಲ್ಲಿ ಹೊಳೆ ದಾಟಿದರೆ ಸಂಜೀವ ಪ್ರಾಣೇಶ ೫

ಕಲಿಯುಗದ ಸುರಧೇನು ಕಲ್ಪತರು ಗುರುರಾಯ
ಗಲಗಲಿಯ ಭಾಗ್ಯವಿದು ಬಂದು ನಿಲಿಸಿಹನು
ಕಲುಷವರ್ಜಿತರಾಗಿ ದರುಶನವ ಮಾಡಿದರೆ
ಕರೆದು ಈಪ್ಸಿತವ ಕೊಡುವ ಪರಮ ಕರುಣಾಳು ೬

ಪಾಪಿ ಕೋಪಿಷ್ಠರಿಗೆ ಸೇವೆ ದಕ್ಕುವದಿಲ್ಲ
ಮಾಂ ಪಾಹಿ ಪಾಹಿ ಎಂಬುವ ಭಕುತರಾ
ತಾಪತ್ರಯವ ಕಳೆದು ಸುಪವಿತ್ರರನು ಮಾಡಿ
ಭೂಪತಿವಿಠ್ಠಲನ ಅಪರೋಕ್ಷ ಮಾಡಿಸುವ ೭

## ೨೨

ತೋರಮ್ಮಯ್ಯ ಯತಿಕುಲ ಸರ್ವಭೌಮನ್ನ ಪ

ಮೂರವತಾರದ ಪುಣ್ಯರಾಶಿಯನು ತೂರಿ
ಸುಜನರ ಪೊರೆವ ಉದಾರನ ಅ.ಪ

ಅಸುರ ಬಾಲನಂತೆ ಹರಿಯಲಿ ಅಸಮ ಭಕ್ತಿಯಂತೆ
ಅಸುರಾರಿಯ ನರಸಿಂಹರೂಪವನು ಅಸುರತಾತನಿಗೆ
ತೋರ್ದನಂತೆ ೧

ಪರಮಹಂಸನಂತೆ ಪುರಂದರದಾಸರ ಗುರು ಅಂತೆ
ಅರಸನ ರಕ್ಷಿಸಿ ಅರಸನಾಗಿ ಕ್ಷಣ ಉದ್ಗ್ರಂಥಗಳನು ರಚಿಸಿದನಂತೆ ೨

ಕಡುಬಡತನವಂತೆ ಸುದಾಮನ ಮರಸಿ ಬಿಟ್ಟಿತಂತೆ
ಸಡಗರದಿಂದ ಸನ್ಯಾಸಿಯಾಗಿ ದರ್ಮಸಾಮ್ರಾಜ್ಯವನಾಳಿದನಂತೆ ೩

ಕಾಮಧೇನುವಂತೆ ಕಲಿಯುಗ ಕಲ್ಪವೃಕ್ಷವಂತೆ
ನೇಮದಿಂದ ಸೇವೆಯನು ಮಾಡಿದರೆ ಕಾಮಿತಾರ್ಥಗಳನೀಯ್ವನಂತೆ ೪

ಸಾಲವಪುರದಂತೆ ಭಕ್ತರಿಗೊಲಿದು ಬಂದನಂತೆ
ಮೂಲಸ್ಥಾನ ಮಂತ್ರಾಲಯವಂತೆ ಭೂಪತಿವಿಠಲನ ತೋರುವನಂತೆ ೫

## ೨೩

ದಯಮಾಡಿ ಪಿಡಿ ಎನ್ನಕೈಯ್ಯಾ ಗುರುರಾಯಾ ಪ

ಕರುಣಾಸಾಗರನೆಂಬ ಬಿರುದು ನಿನಗೆ ಉಂಟು ಅ.ಪ

ನಾನು ನನ್ನದು ಎಂಬ ಹೀನ ಬುದ್ಧಿಯ ಬಿಡಿಸು
ಸಾನುರಾಗದಿ ಮನಸನು ಧರ್ಮದಲ್ಲಿರಿಸು
ಮಾನಾಪಮಾನಕ್ಕೆ ಹಿಗ್ಗದೆ ಕುಗ್ಗದೆ
ಧ್ಯಾನಾನಂದದೊಳೆನ್ನ ಇರಿಸಯ್ಯಾ ಸ್ವಾಮಿ ೧

ದೇಹ ನನ್ನದು ಎಂಬ ದುರಭಿಮಾನವ ಬಿಡಿಸು
ದೇಹಾನುಬಂಧುಗಳ ಮೋಹಬಿಡಿಸು

ದೇಹಗೇಹಗಳೆಲ್ಲ ದೇವರ ಸ್ವತ್ತೆಂಬ
ಸುಜ್ಞಾನವನು ಕೊಟ್ಟು ಸಲುಹಯ್ಯಾ ಸ್ವಾಮಿ ೨

ದುಷ್ಟ ಬುದ್ಧಿಯು ಎನಗೆ ಹುಟ್ಟದಂತೆ ಮಾಡು
ಕೆಟ್ಟಜನರ ಗಾಳಿ ತಟ್ಟದಿರಲಿ
ಎಷ್ಟು ಬೇಕಾದಷ್ಟು ಕಷ್ಟಬಂದರು ಸಹ
ಗಟ್ಟ್ಯಾಗಿ ನಿನ್ನಲ್ಲಿ ಭಕ್ತಿಹುಟ್ಟಲಿ ಸ್ವಾಮಿ ೩

ಭೇದ ಅಭೇದದ ಮರ್ಮವ ತಿಳಿಸಯ್ಯಾ
ಸಾಧು ಸಜ್ಜನರ ಸಂಗದೊಳೆನ್ನ ಇರಿಸು
ಮೋದತೀರ್ಥರ ಮತದ ಸುಜ್ಞಾನವನು ಕೊಟ್ಟು
ಭೂದೇವ ವಂದ್ಯ ಭೂಪತಿ ವಿಠ್ಠಲನ ತೋರು ೪

## ೨೪

ಬಂದಾನು ರಾಘವೇಂದ್ರ ಬೀಳಗಿಗೆ ಇಂದು ಪ

ಬಂದಾನು ರಾಘವೇಂದ್ರ ಎಂದೂ ಗೊತ್ತಿರದೆ
ವೃಂದಾವನ ರೂಪದಿಂದ ಅ.ಪ

ಹಿಂದಿನ ಹಿರಿಯರ ಪುಣ್ಯ ಫಲಿಸಿತೆಂದು
ತಂದೆ ರಾಘವೇಂದ್ರ ಬಂದು ನೆಲೆಸಿದನಿಲ್ಲಿ ೧

ಸಂದೇಹಬೇಡ ಈ ವೃಂದಾವನದಿ
ರಾಘವೇಂದ್ರರಾಯರು ಸ್ವಯಂವ್ಯಕ್ತರೂಪದಿ ಇಹರು ೨

ಭೂಪತಿವಿಠ್ಠಲನ ಕರುಣದಿಂದಲಿ ಇಲ್ಲಿ
ಅಪರೂಪವಾದ ವೃಂದಾವನ ದೊರಕಿತು ೩

## ೨೫

ರಥವವೇರಿದ ಚಂದ್ರಾ ರಾಘವೇಂದ್ರ
ನೋಡು ಪಾಡು ಕುಣಿದಾಡಿ ಭಜನೆಮಾಡು
ಬೇಡಿದ ವರವ ಕೊಡುವಾ ಪ

ಖಂಬದಿ ನರಹರಿ ಬರಿಸಿದ ಕಂಡಾ
ಕುಂಭಿಣಿಪತಿ ಕುಹಯೋಗವ ಕಳೆದಾ
ನಂಬಿದವರ ಪೊರೆವಾ ೧

ಆದ್ಯ ಸತ್ಯಾಗ್ರಹಿ ಭಕ್ತ ಶಿರೋಮಣಿ
ಉದ್ಗ್ರಂಥಗಳನು ರಚಿಸಿದ ದಿನಮಣಿ
ಮಧ್ವಮತೋದ್ಧಾರಾ ೨

ಭೂಪತಿ – ವಿಠ್ಠಲಗೆ ಪ್ರೀತಿ ವಿಖ್ಯಾತಾ
ಆಪದ್ಬಾಂಧವ ಅನಾಥನಾಥಾ
ರಥೋತ್ಸವದಿ ಮೆರೆವಾ ೩

## ೨೬

ವಂದಿಸುವೆ ಗುರು ರಾಘವೇಂದ್ರಾರ್ಯರಾ
ವೃಂದಾವನದಿ ವೀಣೆ ನುಡಿಸುತಲಿ ಕುಳಿತವರಾ ಪ

ನಂದಗೋಪನಕಂದ ಗೋವಿಂದ ಗೋಪಾಲ
ಇಂದಿರಾರಮಣ ಮುಚಕುಂದವರದಾ
ವಿಂದರ್ಪಜನಕ ಇಂದೆನಗೆ ನಿನ್ನ ಪಾದಾರ–
ವೆಂದವನು ತೋರಯ್ಯ ಎಂದು ಪಾಡುತಲಿಹರ ೧

ನರಹರಿ ಶ್ರೀಕೃಷ್ಣ ರಾಮ ವೇದವ್ಯಾಸ
ಮೂರೊಂದು ಮೂರ್ತಿಗಳುಪಾಸನೆಯನು

ಚಾರು ವೃಂದಾವನದಿ ಕುಳಿತು ಸಂತತ ಮಾಳ್ವ
ಧೀರ ಶ್ರೀ ವೇಣುಗೋಪಾಲನನು ಕುಣಿಸುವವರ ೨

ವೀಣೆಯನು ನುಡಿಸುತಲಿ ಗಾಯನವ ಮಾಡುತ್ತ
ಆನಂದ ಬಾಷ್ಪಗಳ ಉದುರಿಸುತಲಿ
ಆನಂದಕಂದ ಭೂಪತಿ–ವಿಠಲನ್ನ ಸದಾ
ಕಣ್ಮುಂದೆ ನಿಂದಿರಿಸಿಕೊಂಡ ಗುರುಗಳ ಕಂಡು ೩

## ೨೭

ಸತ್ಯಂಬೋಧರ ಸ್ಮರಣೆ ನಿತ್ಯಮಾಡು
ಅತ್ಯಂತ ಕರುಣಾಳು ಅಮಿತ ಮಹಿಮಾವಂತ ಪ

ಸತ್ಯಬೋಧರ ಸ್ಮರಣೆ ನಿತ್ಯದಲಿ ಮಾಡಿದರೆ
ವಿಷ್ಣು ಸರ್ವೋತ್ತಮದ ಜ್ಞಾನ ಪ್ರಾಪ್ತಿ
ಕಷ್ಟಗಳ ಪರಿಹರಿಸಿ ಇಷ್ಟಾರ್ಥಗಳ ಕೊಟ್ಟು
ಭಕ್ತಿ ವೈರಾಗ್ಯ ಭಾಗ್ಯವನು ಕೊಡುವಾ ೧

ಸತ್ಯಪ್ರಿಯತೀರ್ಥರ ಕರಕಮಲದಿಂ ಜನಿಸಿ
ಉತ್ತರಾದಿಮಠದ ವೈಭವವ ಬೆಳಿಸಿ
ವಿಷ್ಣು ಸರ್ವೋತ್ತಮತ್ವದ ತತ್ವಜಯಭೇರಿ
ಎತ್ತ ನೋಡಿದರತ್ತ ಸತ್ಯಬೋಧರಕೀರ್ತಿ ೨

ಪಾಪಿಷ್ಠರಿಂದ ಆಪತ್ತು ಜೀವಕೆಬಂತು
ಸಂಚಾರ ಕೆಲಕಾಲ ಸಂಕಟಮಯವಾಯ್ತು
ಶಾಪಾನುಗ್ರಹಶಕ್ತರಾದ ಶ್ರೀಪಾದರು
ಭೂಪತಿವಿಠ್ಠಲನ ಅಪರೋಕ್ಷ ಪಡೆದವರು ೩

## ೨೮

ಸತ್ಯಜ್ಞಾನ ಮುನಿರಾಯಾ ತವಸ್ಮರಣೆ ಸತತ ಕೊಡು ಜೀಯಾ ಪ

ಜ್ಞಾನಭಕ್ತಿ ವೈರಾಗ್ಯದ ಕಣಿಯೆ ಧ್ಯಾನ ಮೌನ ಜಪ-ತಪಗಳ ನಿಧಿಯೆ ಅ.ಪ

ಸರ್ವತ್ರದಿ ಶ್ರೀ ಹರಿಯನು ಕಾಣುತ
ಸರ್ವಭೂತ ಹಿತರತನಾಗಿ
ಸರ್ವೋತ್ತಮನು ಶ್ರೀರಾಮನ ಪೂಜಿಸಿ
ಸರ್ವಜ್ಞಮತ ಸುದಾಂಬುಧಿಗೆ ಚಂದ್ರಮನಾದೆ ೧

ಭರತಾರುಣ್ಯದಿ ಪರಮಹಂಸನಾಗಿ
ಧರ್ಮ ಸಾಮ್ರಾಜ್ಯದ ಧುರವಹಿಸಿ
ಧರ್ಮ ಸಂರಕ್ಷಣೆ ಮಾಡುತ ಧರೆಯೊಳು
ಪೂರ್ಣಜ್ಞರ ಧ್ವಜ ಮೆರೆಸಿದ ಧೀರಾ ೨

ಲೌಕಿಕವನು ಸಂಪೂರ್ಣ ತ್ಯಜಿಸಿ ನೀ-
ಪರಲೋಕ ಸಾಧನ ಲೋಕಕೆ ತಿಳಿಸಿ
ಟೀಕಾರಾಯರ ಸನ್ನಿಧಾನವ ಹೊಂದಿದ
ಶ್ರೀಕಾಂತ ಭೂಪತಿವಿಠ್ಠಲನ ದೂತಾ ೩

## ೨೯

ಸತ್ಯಧ್ಯಾನರ ಪಾದ ಸ್ಮರಿಸುವ ಮನುಜಗೆ
ಸತ್ಯವಾದಜ್ಞಾನ ಹುಟ್ಟುವದು ಪ

ಶಕ್ತಿ ಭಕ್ತಿ ಯುಕ್ತಿ ಸೌಭಾಗ್ಯ ಸಂಪತ್ತು
ಧೈರ್ಯ ಔದಾರ್ಯ ಉತ್ಸಾಹ ಮೂರುತಿಯಾದ ಅ.ಪ

ಹರಿಯೆ ಸರ್ವೋತ್ತಮ ಸರ್ವಗುಣ ಪರಿಪೂರ್ಣ
ಸರ್ವ ದೋಷ ವರ್ಜಿತನೆಂದು
ವರಮಧ್ವಮತವೆ ವೈದಿಕ ವೇದ್ಯವೆಂದು
ಧರೆಯೊಳು ಜಯಭೇರಿ ಹೊಡಿಸಿದ ಧೀರಾ ೧

ಪರವಾದಿ ವಾಕ್ಯಾರ್ಥ ಪರರ ಕೊರಳಿಗೆ ಕಟ್ಟಿ
ದುರ್ವಾದಿಗಳ ಸದ್ದು ಅಡಗಿಸುತಾ
ಸರ್ವ ಸಾಮಾನ್ಯರಿಗೆ ಸುಲಭತಿಳಿಯುವಂಥ
ಪ್ರಶ್ನಾರ್ಥರೂಪಗಳ ಗ್ರಂಥ ರಚಿಸಿದಂಥಾ ೨

ದಾನದಲಿ ಕರ್ಣ ಜ್ಞಾನದಿ ಶುಕಮುನಿ
ಮೌನಿ ಕುಲಕೆ ಸನ್ಮಾನ್ಯರಾಗಿ
ಧರ್ಮ ಸಾಮ್ರಾಜ್ಯಕೆ ಸಾರ್ವಭೌಮನಾದ
ಶ್ರೀನಿಧಿ ಭೂಪತಿವಿಠ್ಠಲನ ದಾಸ ೩

## ಸುಶೀಲೇಂದ್ರ ತೀರ್ಥರು

## ೩೦

ವಂದಿಸುವೆ ಶ್ರೀ ಸುಶೀಲೇಂದ್ರಾರ್ಯರ
ತಂದೆ ಗುರುರಾಘವೇಂದ್ರರ ಪಾದ ತೋರೆಂದು ಪ

ಗುರುಸರ್ವಭೌಮರ ಅಖಂಡ ಸೇವೆಯ ಮಾಡಿ
ವರಸುಮಂತ್ರಾಲಯದಿ ವಾಸಮಾಡಿ
ಸುರಪನಾಲಯವು ಮಂತ್ರಾಲಯವು ಎಂಬಂತೆ
ಹರಿದಾಸರಾಶಯವ ನಿಜಮಾಡಿ ತೋರಿಸಿದ ೧

ಉಡುಪಿಯೊಳು ಗುರುಸಾರ್ವಭೌಮರ ವೃಂದಾವನವ
ಚತುರತನದಿಂದ ಪ್ರತಿಷ್ಠಾಪನೆಯ ಮಾಡಿ
ಭರತಖಂಡದ ತೀರ್ಥಕ್ಷೇತ್ರಗಳ ಸಂಚರಿಸಿ
ಭಕುತರಿಗೆ ಶ್ರೀ ಮಠದ ಮಹಿಮೆ ತೋರಿದ ಗುರು ೨

ಶ್ರೀ ಸಮೀರ ಸಮಯ ಸಂವರ್ಧಿನಿ ಸಭೆಯ
ಸಂಸ್ಥಾಪನೆಯ ಮಾಡಿ ಪಂಡಿತರಿಗೆ
ಭೂರಿ ಸಂಭಾವನೆ ಮೃಷ್ಟಾನ್ನ ಭೋಜನದಿ
ತುಷ್ಟಿಗೊಳಿಸುತ ದೇಶ ದಿಗ್ವಿಜಯ ಮಾಡಿದ ೩

ಶ್ರೀ ಮಠದ ಕೀರ್ತಿಯನು ಶಿಖರಕ್ಕೆ ಮುಟ್ಟಿಸಿ
ಸ್ವರ್ಣಮಂಟಪರಚಿಸಿ ವೈಭವವ ಬೆಳೆಸಿ
ಶ್ರೀಮೂಲರಾಮ ದಿಗ್ವಿಜಯ ಜಯರಾಮರನು
ಭಕ್ತಿಯಿಂದ ಪೂಜಿಸಿದ ಭಾಗ್ಯಶಾಲಿ ೪

ಗುರುಸಾರ್ವಭೌಮರಿಗೆ ಪರಮ ಪ್ರೀತಿಯ ಕಂದ
ವರಮಧ್ವಮತ ಸುಧಾಂಬುಧಿಗೆ ಚಂದ್ರ
ಪರಮಾತ್ಮ ಭೂಪತಿವಿಠ್ಠಲನ ಪೂಜಿಸುವ
ಪರಮ ಪ್ರಶಾಂತ ಧೀರೇಂದ್ರ ಸನ್ನಿಧಿವಾಸ ೫

## ೫. ಹರಿದಾಸರು

### ಶ್ರೀ ಪುರಂದರದಾಸರು

### ೩೧

ದಾಸರಾಜಾ ಪುರಂದರ ದಾಸರಾಜಾ ಪ

ದಾಸರಾಜ ಹರಿದಾಸಪೀಠ ಸಂ-
ಸ್ಥಾಪಿಸಿ ಘೋಷಿಸಿ ಬೆಳೆಸಿದ ಧೀರಾ ೧

ವ್ಯಾಸರಾಯರಿಂದ ದಾಸದೀಕ್ಷೆಯನು
ನೀ ಸ್ವೀಕರಿಸಿದಿ ಭೂಸುರವಂದ್ಯಾ ೨

ಶ್ರೀನಿವಾಸ ನವಕೋಟಿ-ನಾರಾಯಣ
ದಾನ ಧರ್ಮದಲಿ ಬಲು ಜಿಪುಣಾ ೩

ಭೂಸುರ ವೇಷದಿ ದೇಶಾವರಿಗೆ
ಶ್ರೀಶ ಬಂದರೆ ಷಣ್ಮಾಸ ಕಾಡಿದೆಯ ೪

ಸಾಪಾದ ಪೈಸಾಗಳ ರಾಶಿ ಸುರುವಿ ನೀ
ಒಂದು ಪೈಸೆ ಆರಿಸಿಕೊ ಎಂದಿ ೫

ಸೋತು ಶ್ರೀಹರಿಯು ನಿನ್ನ ಸತಿಗೆ ಮೊರೆಯಿಡೆ
ಪತಿವ್ರತೆ ಕೊಟ್ಟಳು ರತ್ನದ ಮೂಗುತಿ ೬

ಭೂಪತಿವಿಠಲನು ಚಮತ್ಕಾರ ತೋರಿಸಿ
ದಾಕ್ಷಣ ನೀ ಹರಿದಾಸನಾದೆಯೊ ೭

## ಶ್ರೀ ಮಹಿಪತಿರಾಯರ ಸ್ತುತಿಪರಹಾಡುಗಳು

### ೩೨

ಏನುಕೌತುಕವೊ ಮಹಿಪತಿರಾಯರದು ಘನಮಹಿಮೆ ತಿಳಿಯದು
ಮೋಹಶಾಸ್ತ್ರಗಳ ರಚಿಸಲು ಬೇಕೆಂದು ಹರಿಯಾಜ್ಞೆಯನರಿದು
ಈ ಮಹಿಯೊಳವತರಿಸಿ ಬಂದನೆಂದು ರುದ್ರಾಂಶನೆ ಅಹುದು
ಪದ್ಯ ಪದ್ಯಗಳಲಿ ಅತಿಗೂಢ ಅರ್ಥ ವಿಹುದು ಮೂಢರಿಗೆ ತಿಳಿಯದದು ಅ

ಮ ಎನ್ನಲು ಮನ ಪ್ರಸನ್ನವಾಗುವದು ಮಹಿಮೆಯ ತಿಳಿಯುವದು
ಹಿ ಎನ್ನಲು ಹಿಡಿಸುವದು ಹಿತದಹಾದಿ ಸುಜನರ ಕೈವಾರಿ
ಪ ಎನ್ನಲು ಪರಿಪರಿಯ ಕಷ್ಟದೂರಾ ಪರಮಾದರಕೆದ್ವಾರಾ
ತಿ ಎನ್ನಲು ತಿಳಿಯಾಗುವದ್ಯೆ ಬುದ್ಧಿ ಸರ್ವಾಂಗಶುದ್ಧಿ ೬

ಮಹಿಪತಿರಾಯರು ತಪವಗೈದಸ್ಥಾನಾ ಅಲ್ಲಿಯ ವೃಂದಾವನಾ
ಮೂರುಕ್ಷೇತ್ರ ಶಾಲಿಗ್ರಾಮದ ಸವನಾ ಮಹಿಮೆಯು ಪರಿಪೂರ್ಣಾ
ತೀರ್ಥ ಭಾವಿಯೊಳು ಸುರನದಿ ಅವತರಣಾ ಮಹಿಪತಿ ಸುತಕೃಷ್ಣಾ
ಕರುಣಾನಿಧಿ ಭೂಪತಿವಿಠ್ಠಲ ಪ್ರಿಯನಾ ಸಂತತ ಹಿಡಿಚರಣಾ ೭

### ೩೩

ಕೃಷ್ಣತಾತ ಮಹಿಪತಿರಾಯರ ಭಜಿಸೊ
ಅಭಿಮಾನವ ತ್ಯಜಿಸೊ ಅನುಮಾನವ ತ್ಯಜಿಸೊ ಪ

ರಾಜವೈಭವದ ಭೋಗಗಳನುಭವಿಸಿ ಶ್ರೀ ಹರಿಯ ಸ್ಮರಿಸಿ
ಭೋಗದೊಳಗೆ ತ್ಯಾಗದ ಪಾಠವ ಕಲಿಸಿ ಕೊಡುಗೈದೊರೆಯೆನಿಸಿ
ಯೋಗಬಂದತಕ್ಷಣ ವೈಭವ ತ್ಯಜಿಸಿ ಯೋಗಿಯನಾಶ್ರೈಸಿ
ಯೋಗಾಭ್ಯಾಸದಿ ಬೇಗ ಹರಿಯ ಒಲಿಸಿ ಅವನೊಳು ಮನಬೆರೆಸಿ ೧

ಹರಿಯಧ್ಯಾನಕನುಕೂಲವಾದ ಮೆಟ್ಟಾ ಹುಡಕುತುತಾಹೊರಟಾ
ವರಕಾಖಂಡಿಕಿ ಕ್ಷೇತ್ರದಿ ಕಾಲಿಟ್ಟಾ ವಿಶ್ರಾಂತಿಗೆ ಕುಳಿತಾ
ಅರೆನಿಮಿಷದಿ ಹರಿಧ್ಯಾನದಿ ಮೈಮರೆತಾ ಸಮಾಧಿ ಇಳಿಯುತಾ
ವರ್‍ಋಷಿಮುನಿಗಳು ತಪವಗೈದಮೆಟ್ಟಾ ಎನುತಲಿಯೆ ನಿಂತಾ ೨

ಹಗಲು ಇರಳು ಹರಿಧ್ಯಾನದಿ ತಾ ಮುಳುಗಿ ಅಲ್ಲಿರುತಿರಲಾಗಿ
ನಗೆ ಮುಖದಲಿ ಝಗಝಗ ಕಾಂತಿಯು ಬೆಳಗಿ ಸುತ್ತಲು ಬೆಳಕಾಗಿ
ಜಗದಜನಕೆ ಅದು ಅತಿ ಅಚ್ಚರಿಯಾಗಿ ಯೋಗಿಗೆ ಶಿರಬಾಗಿ
ಬಗೆ ಬಗೆ ಭಕುತರು ಬಂದರು ತಾವಾಗಿ ಮಹಿಪತಿಮಹಾಯೋಗಿ ೩

ಅಷ್ಟಸಿದ್ಧಿಗಳು ನೆಲೆಸಿದವಾಗಲ್ಲಿ ಆಶ್ರಮ ಬಾಗಿಲಲಿ
ಎಷ್ಟು ಭಕುತಿಜನ ಬಂದರು ಸಹಿತಲ್ಲಿ ಇಷ್ಟಾರ್ಥ ಕರದಲಿ
ಮೃಷ್ಟಾನ್ನ ಭೋಜನ ಪ್ರತಿದಿನದಲ್ಲಿ ನಡೆಯಿತು ಸಮತೆಯಲಿ
ಇಷ್ಟವಾದ ಆಧ್ಯಾತ್ಮಿಕ ಮಾರ್ಗದಲಿ ಉಪದೇಶ ಪಡೆಯುತಲಿ ೪

## ೩೪

ಗರುವ ರಹಿತನ ಮಾಡು ಗುರುರಾಯನೇ
ಸರ್ವದಾ ಮನದೊಳಗೆ ನಿಲ್ಲು ಮಹಿಪತಿರಾಯ ಪ

ಅಹಂಕಾರವನು ಅಳಿಸು ಮಮಕಾರವನು ಮರೆಸು
ಸಕಲಕ್ಕು ಶ್ರೀ ಹರಿಯ ಪ್ರೇರಣೆ ಎಂದೆನಿಸು
ಲಕುಮಿವಲ್ಲಭನ ಕರೆತಂದು ಹೃದಯದಲಿ ನಿಲಿಸು
ಭಕುತಿಯನು ಹರಿಗುರುಗಳಲಿ ಸ್ಥಿರವಾಗಿ ಇರಿಸು ೧

ಆರು ಅರಿಗಳಗೆಲಿಸು ಮೂರುದಿನದಿನಬೆಳೆಸು
ಮೂರುರಾಶಿಯ ಬಿಡಿಸಿ ಮೂರು ವ್ರತ ಹಿಡಿಸು
ಮೂರಾರುವಿಧ ಭಕುತಿ ಮೂರು ಕಾಲಕೆ ಕೊಟ್ಟು
ಮುರಾರಿ ಮೂರುತಿಯ ಮನದೊಳಗೆ ನಿಲಸು ೨

ಮನಪವಿತ್ರವ ಮಾಡು ಮನದೊಳಗೆ ನೀಕೂಡು
ಮನದ ವ್ಯಕ್ತಿಗಳನು ಅಂತರಮುಖವ ಮಾಡು
ಜನುಮ ಜನುಮದಿ ಹರಿಯ ದಾಸರ ಮನೆಕಾಯ್ವ
ಶುನಕನೆಂದೆನಿಸಿ ಭೂಪತಿವಿಠ್ಠಲನ ತೋರು ೩

## ೩೫

ನಿನ್ನವನು ನಾನಯ್ಯ ಅನ್ಯರವನಲ್ಲಾ
ನಿನ್ನ ಕರುಳಿನ ಬಳ್ಳಿ ಮಿಡಿಯು ಮಹಿಪತಿರಾಯ ಪ

ನಿನ್ನ ಪೌತ್ರನ ಮಗಳ ಬಳ್ಳಿಯೊಳು ಜನಿಸಿ ನಾ
ನಿನ್ನ ಮಹಿಮೆಯ ಗುರುತ ಅರಿಯಲಿಲ್ಲಾ
ಸಣ್ಣವನು ನಾನೀಗ ತಪ್ಪು ಒಪ್ಪಿದ ಮೇಲೆ
ಇನ್ನು ದಯಮಾಡು ಮುತ್ತಜ್ಜ – ಅಜ್ಜರ ಅಜ್ಜ ೧

ನಿನ್ನ ಕರುಳಿನ ಬಳ್ಳಿ ಎಲ್ಲಿ ಹುಟ್ಟಿದರೇನು
ಮೂಲದಿಂದಲ್ಲವೇ ಮಿಡಿಗೆ ಆಹಾರ
ಮೂಲಮಿಡಿಗಳ ಮರೆತು ಆಹಾರ ಕೊಡದಿರಲು
ಮಿಡಿಯು ಬಾಡುವದಿಲ್ಲವೇನೊ ತಾತಯ್ಯ ೨

ನಿನ್ನವನು ನಾನೆಂದು ಒಪ್ಪಿಸಿದ ಗುರುರಾಯ
ಇನ್ನು ಸಲಹುವ ಭಾರ ನಿನ್ನದಯ್ಯಾ
ನಿನ್ನ ಘನತೆಗೆ ಕೂಂದು ತರದಂತೆ ಕಾಪಾಡು
ಘನ್ನ ಭೂಪತಿ ವಿಠ್ಠಲನ ತೋರು ದಯಮಾಡು ೩

## ೩೬

ಮಹಿಪತಿ ಸುತ ಕೃಷ್ಣರಾಯ ಕೃಪೆಯಮಾಡೊ ಮಹರಾಯಾ
ಸಹಿಸಲಾರೆ ತಾಪತ್ರಯ ಕರುಣದಿ ಪಿಡಿಕೈಯ್ಯಾ ಪ

ನಿನ್ನ ಕರುಳ ಬಳ್ಳಿಯಲಿ ಜನಿಸಿ ನಿನ್ನ ಮರತೆನೆಂದು
ನೀನು ಮರೆಯಬೇಡಾ ತಾತಾ ಶಿರದಲಿ ಇಡು ವರದಹಸ್ತಾ ೧

ನಿಮ್ಮ ಕೀರ್ತನೆ ಕೇಳುವಾಗ ಮೈ ಮರೆತರು ಸತ್ಯಪೂರ್ಣರು
ಚಕ್ರಧರನ ನಕ್ರಹರನ ತಂದು ತೋರಿದ ಮಹಾಮಹಿಮನೆ ೨

ಜ್ಞಾನ ಭಕ್ತಿ ವೈರಾಗ್ಯ ತ್ರಿವೇಣಿ ನಿಮ್ಮ ವಾಣಿ
ಶ್ರೀನಿಧಿ ಭೂಪತಿವಿಠ್ಠಲನ ಒಲಿಸಿದ ಹರಿದಾಸ ಸುಮಣಿ ೩

## ೩೭

ರಾಯರ ನೋಡಿರೈ ಮಹಿಪತಿರಾಯರ ಪಾಡಿರೈ ಪ

ರಾಯರ ನೋಡುತ ಪಾಡುತ ಭಕುತಿಯ
ಮಾಡಲು ಬೇಡಿದ ವರಗಳ ಕೊಡುವಾ ೧

ತಂದೆಯ ನೋಡಿರೈ ಮಹಿಪತಿಕಂದನ ಪಾಡಿರೈ
ಕುಂದಗಳೆಣಿಸದೆ ಬಂದು ಭಕುತಜನ
ವೃಂದವ ಪೊರೆಯುವ ತಂದೆ ಮಹಿಪತಿ ೨

ಭೋಗಿಯ ನೋಡಿರೈ ತಾಪಸಯೋಗಿಯ ಪಾಡಿರೈ
ತ್ಯಾಗರಾಜ ಭೂಪತಿವಿಠ್ಠಲಪ್ರಿಯ
ಭೋಗಿಭೂಷಣಾಂಕ ವೈಷ್ಣವಾಗ್ರಣಿ ೩

## ವಿಜಯದಾಸರು

## ೩೮

ಸಾರಿಭಜಿಸಿರೋ ವಿಜಯರಾಯರಂಘ್ರಿಯ
ಪಾರುಮಾಳ್ಪರಾ ಸಂಸಾರಸಾಗರಾ ಪ

ದೇಶ ದೇಶವಾ ಪರದೇಶಿಯಂದದಿ
ಬ್ಯಾಸರಿಲ್ಲದೆ ತಿರುಗಿ ಕಾಶಿಗ್ಹೋದರು ೧

ಸಪ್ನದಲ್ಲಿ ಶ್ರೀ ಪುರಂದರದಾಸರಾಯರು
ವ್ಯಾಸಕಾಶಿಯಲ್ಲಿ ದಾಸ ದೀಕ್ಷೆಕೊಟ್ಟರು ೨

ಬಾಯಿ ತೆರೆಯಿತು ನಾಲಿಗೆ ಮೇಲೆ ದಾಸರು
ವಿಜಯವಿಠ್ಠಲಾ ಎಂದು ಬರೆದು ಬಿಟ್ಟರು ೩

ಎಚ್ಚರಾಯಿತು ದಿವ್ಯ ಜ್ಞಾನ ಹುಟ್ಟಿತು
ಧೈನ್ಯ ಓಡಿತು ಹರಿಯ ಧ್ಯಾನ ಹತ್ತಿತು ೪

ದಾಸರಾದರು ಹರಿಯ ದಾಸರಾದರು
ಕೂಸೀಮಗ ದಾಸ ವಿಜಯದಾಸರಾದರು ೫

ಹರಿಯ ಶ್ರೇಷ್ಠತೆ ಹಿಂದೆ ಒರೆಗೆ ಹಚ್ಚಿದಾ
ಭೃಗುಮಹರ್ಷಿಯೇ ನಮ್ಮ ವಿಜಯದಾಸರು ೬

ಪಾಪಕಳೆವರು ಭಕ್ತರ ತಾಪಕಳೆವರು
ಭೂಪತಿವಿಠ್ಠಲನ ಅಪರೋಕ್ಷ ಮಾಳ್ಪರು ೭

## ಗೋಪಾಲದಾಸರು

### ೩೯

ಗೋಪಾಲದಾಸರಾಯರ ಪಾದ ನಂಬಿದರೆ
ತಾಪತ್ರಯವ ಕಳೆವರು
ಭೂಪಾಲಮಧ್ಯ ಪಾದಾಬ್ಜ
ಸದ್ಗುರು ಜಗನ್ನಾಥದಾಸರಿಗೆ ತಮ್ಮಾಯುಷ್ಯ ನೀಡಿದ ಪ

ವಿಜಯದಾಸರ ಪರಮ ಪ್ರೀತಿ ಪಾತ್ರರು ಇವರು
ಪರಮ ಭಗವದಭಕ್ತರು

'ಭಕ್ತಿಯಲಿ ಭಾಗಣ್ಣ' ನೆಂಬ ಗೌರವ ಪಡೆದ
ಭಾಗ್ಯಶಾಲಿಗಳು ಇವರು
ಸುಖದ ಪ್ರಾರಬ್ಧವಿವರದು ರಾಜಯೋಗಿಗಳು
ದುಃಖವೆಂಬುದೆ ಅರಿಯರು
ನಿತ್ಯಾ ಉತ್ಸವ ನಿತ್ಯ ಮಂಗಲವು ಇವರು
ಇದ್ದಲ್ಲಿ ನಿತ್ಯ ಸುಖವೇ ಸುಖವು ೧

ಜ್ಞಾನ ಗಂಗಾ ನದಿಯು ವೈರಾಗ್ಯ ಯಮುನೆಯು
ಸದ್ಭಕ್ತಿ ಸರಸ್ವತೀ ಈ ಬಗೆಯ
ತ್ರಿವೇಣಿಸಂಗಮವು ಇವರಲ್ಲಿ
ಎದ್ದು ಕಾಣುವದು ನಿತ್ಯ
ವಿಜಯರಾಯರ ನೆರಳಿನಿಂದಲಿ ಸರ್ವದಾ
ಅವರಲ್ಲಿ ಇವರವಾಸ
ಗುರುಭಕ್ತಿಯಲಿ ಇವರ ಸರಿಮಿಗಿಲು ಯಾರಿಲ್ಲ
ಭಾಗಣ್ಣದಾಸರಿವರೇ ಅವರು ೨

ಪಂಢರಾಪುರದ ಶ್ರೀ ಪಾಂಡುರಂಗನು ಇವರ
ಭಕ್ತಿಭಾವಕೆ ಮೆಚ್ಚಿದಾ
ಬಹುದಿವಸ ತನ್ನದರುಷನಕೆ ಬರಲಿಲ್ಲೆಂದು
ಕಳವಳದಿ ಪಾಂಡುರಂಗಾ
ಕುದುರೆಯನು ಏರಿ ತಾನೆ ಅವರಬಳಿ ಪೋಗಿ
'ಆಲೆ ನಾಹಿ' ಎಂದು ಕರೆದಾ
ಮರುದಿನವೆ ಪಂಢರಿಗೆ ತ್ವರದಿ ಓಡುತ ಹೋಗಿ
ಭೂಪತಿವಿಠ್ಠಲನ ಬಿಗಿದೊಪ್ಪಿಕೊಂಡಾ ೩

## ಜಗನ್ನಾಥದಾಸರು

### ೪೦

ವಂದಿಪೆವು ಶ್ರೀ ಜಗನ್ನಾಥ ದಾಸರಿಗೆ
ಬಂಧು ಬಳಗವ ಕೂಡಿಕೊಂಡು ಸದ್ಭಕ್ತಿಯಲಿ ಪ

ಹರಿಕಥಾಮೃತಸಾರ ಉದ್ಗ್ರಂಥವನು ರಚಿಸಿ
ಧರೆಗೆ ಮಹದುಪಕಾರ ಮಾಡಿದವಗೆ
ವರಮಧ್ವಸಿದ್ಧಾಂತ ಸಾರ ಸರ್ವಸ್ವವನು
ತಿಳಿಯಾದ ಭಾಷೆಯಲಿ ತಿಳಿಸಿದ ಸಮರ್ಥನಿಗೆ ೧

ಪಾಂಡಿತ್ಯ ಮದದಿ ಸ್ತೋತ್ತವರ ದ್ರೋಹವಮಾಡಿ
ತತ್ಫಲವನುಂಡು ಮನಗಂಡು ಬೆಂದು
ಬೆಂಡಾಗಿಬಂದು ಶರಣೆಂದು ಪಾದಕೆಬೀಳೆ
ವಿಜಯ ಗೋಪಾಲ ದಾಸರು ಅನುಗ್ರಹಿಸಿದರು ೨

ಸದ್ಭಕ್ತ ಸುಜ್ಞಾನ ವೈರಾಗ್ಯ ಆಯುಷ್ಯ
ದಯಪಾಲಿಸಿದು ದಾಸ ದ್ವಯರಿಗೆ
ವೈರಾಗ್ಯ ಒಡಮೂಡಿ ಪಾಂಡಿತ್ಯ ಮದ ಓಡಿ
ಹರಿದಾಸ ದಿಕ್ಷೆಯನು ಪಡೆದಾಗ ಶ್ರೀನಿವಾಸಚಾರ್ಯ
ಹರಿದಾಸ ನಾದ ೩

ಗುರು ಆಜ್ಞೆ ಕೊಡಲು ಪಂಢರಿಗೆ ಹೋದರು ಅಲ್ಲಿ
ರುಕ್ಮಿಣಿ ಪಾಂಡುರಂಗನ ಜೊತಣ
ಚಂದ್ರಭಾಗಿಯಲಿ 'ಜಗನ್ನಾಥವಿಠಲ'
ನೆಂಬ ಅಂಕಿತವು ದೊರಕಿತು ಸ್ನಾನಕಾಲದಲಿ ೪

ನಿತ್ಯ ಹರಿನಾಮ ಸಂಕೀರ್ತನವು ಹಗಲಿರಳು ನಿತ್ಯ
ನೂತನ ಪದ ಸುಳಾದಿಗಳ ಸುಗ್ಗಿ
ನಿತ್ಯ ಸದ್ಭಕತರಿಗೆ ಪಾಠ ಪ್ರವಚನ
ಭಕ್ತರಾಧೀನ ಭೂಪತಿವಿಠ್ಠಲನು ಕುಣಿದ ೫

## ರಾಮದುರ್ಗದ ಶ್ರೀನಿವಾಸಾಚಾರ್ಯರು

### ೪೧

ರಾಮದುರ್ಗದ ಪರಮ ಪೂಜ್ಯ ಆಚಾರ್ಯರನು
ನೇಮದಿಂದ ಸ್ಮರಿಸೊ ಮನುಜಾ
ಕಾಮಿತಾರ್ಥವ ಕೊಟ್ಟು ಪ್ರೇಮದಿಂದ ಕೈಪಿಡಿದು
ಸನ್ಮಾರ್ಗ ತೋಗಿಸುವರರು ಅವರು ಪ

ಮಧ್ವಮತದೊಳು ಜನಿಸಿ ಸಚ್ಛಾಸ್ತ್ರಗಳನೋದಿ ಪ್ರಸಿದ್ಧ
ಪಂಡಿತರಾಗಿ ಶುದ್ಧ ಆಚರಣೆ ಸದ್ವೈರಾಗ್ಯ
ಸದ್ಭಕ್ತಿ ಸುಜ್ಞಾನ ಪೂರ್ಣರಾಗಿ
ದುಡ್ಡಪ್ಪ ದೊಡ್ಡಪ್ಪ ಧಡ್ಡಪ್ಪರೆನ್ನದೆ ಸರ್ವಸಮದೃಷ್ಟಿ ಇಟ್ಟು
ವಿದ್ಯಾರ್ಥಿಗಳಿಗೆಲ್ಲ ಅನ್ನವಸ್ತ್ರವ ಕೊಟ್ಟು ಗುರುಕುಲ
ನಡಿಸಿದ ಋಷಿಗಳವರು ೧

ಸ್ನಾನಸಂಧ್ಯಾನ ಜಪಿತಪ ಅನುಷ್ಠಾನ ಅಗ್ನಿಹೋತ್ರವ
ನಡಿಸುತ ಧ್ಯಾನಮೌನವು ಸದಾ ರಾಮನಾಮ ಸ್ಮರಣೆ
ಪಾಠಪ್ರವಚನ ಪುರಾಣ ದಾನಧರ್ಮವು ದಿವ್ಯ ಸಂತಾನ
ಸಂಪತ್ತು ರಾಜಮನ್ನಣೆ ಪಡೆದರು ಕ್ಷಣ ವ್ಯರ್ಥ
ಕಳೆಯದೆ ವ್ಯರ್ಥಮಾತಾಡದೆ ದಿನಚರಿ
ನಡಿಸಿದರು ಕಡೆತನರ ೨

ಘನವೈಯ್ಯಾಕರಣಿ ಗರ್ವವು ಎಳ್ಳೆಷ್ಟು ಇಲ್ಲಾ
ವಿನಯ ಪೂರ್ಣಸ್ವಭಾವ ಹಣಹೆಣ್ಣು ಮಣ್ಣಿನಾಶೆಯು

ಪೂರ್ಣಬಿಟ್ಟವರು ಜನಹಿತದಿ ಸತತ ನಿಂತರು
ಧನ ಮಾನ ಮರ್ಯಾದೆಗಳಿಗಾಗಿ ಎಂದೆಂದೂ ಧಡಪಡ–
ಮಾಡಲಿಲ್ಲಾ ಗುಣನಿಧಿ ಭೂಪತಿ ವಿಠ್ಠಲನ ಭಜನೆಯಾ
ಕುಣಿಕುಣಿದು ಮಾಡುವ ಪರಮ ಭಾಗವತರು ೩

## ಗಲಗಲಿ ನರಸಿಂಹಾಚಾರ್ಯರು

### ೪೨

ನಮೋ ನಮೋ ನರಹರಿಪ್ರಿಯಾ
ನರಸಿಂಹಾರ್ಯ ಪ

ಗಲಗಲಿ ಶ್ರೀ ನರಸಿಂಹಾರ್ಯ ಕರುಣದಿಪೊರೆ
ಸದ್ಗುರುವರ್ಯಾ ಶರಣು ಬಂದೆನು ತಂದೆ
ಮಾಡೊ ದಯಾ ತಂದೆ ಮಾಡೊ ದಯಾ
ಪುನರ್ಜನ್ಮವಿತ್ತ ಮಹಾರಾಯಾ ೧

ನಿಮ್ಮ ಚರಿತ್ರವೆನಗೆ ಸ್ಫೂರ್ತಿ
ನಿಮ್ಮ ಸ್ಮರಣೆ ಜ್ಞಾನದ ಜ್ಯೋತಿ
ನಿಮ್ಮ ಅನುಗ್ರಹವೆ ಕೀರ್ತಿ
ನಿಮ್ಮ ಪಾದವೇ ಎನಗೆ ಗತಿ ೨

ನಿಮ್ಮಿಂದಲೇ ಗಾಲವ ಕ್ಷೇತ್ರ
ನಿಮ್ಮ ಮನೆಯು ಸದಾ ಅನ್ನಛತ್ರ
ನಿಮ್ಮ ಆಶ್ರಯವೇ ಜ್ಞಾನ ಸತ್ರ
ನಿಮ್ಮ ಸಂಚಾರವೇ ಮಹಾಯಾತ್ರಾ ೩

ಅಷ್ಟೋತ್ತ್ರ ಶತಕುಂಭ ಸ್ನಾನಾ ನಿತ್ಯ
ಅಷ್ಟೋತ್ತ್ರರ ಶತ ಕುಂಭಸ್ನಾನಾ
ಕೃಷ್ಣಾ ಭಾಗೀರಥಿ ಸನ್ನಿಧಾನಾ ಸೀತಾರಾಮ ಪ್ರತಿಮಾರ್ಚನಾ
ನಿತ್ಯ ರಾತ್ರಿ ಸುಭೋಜನಾ ೪

ಮುದ್ಗಲಾರ್ಯ ಬಾಚಾರ್ಯನಮೋ
ಸದ್ಗುರು ನರಸಿಂಹಾರ್ಯ ನಮೋ
ಸದ್ಭಕ್ತಪ್ರಿಯ ಭೂಪತಿವಿಠ್ಠಲ ಗಲಗಲಿ ನರಹರಿ
ತೊರವಿಯ ನರಹರಿ ಶೂರ್ಪಾಲಿಯ ನರಹರಿ ನಮೋ ನಮೋ ೫

## (ಊ) ಕ್ಷೇತ್ರಸ್ತುತಿಗಳು

### ೪೩

ಬರಬೇಕು ಬರಬೇಕು ಸಕಲ ಸಜ್ಜನಭಕ್ತರು
ಗುರುಸಾರ್ವಭೌಮರ ಆರಾಧನೆಗೆ ಗಲಗಲಿಗೆ ಪ

ಪಂಚರಾತ್ರೋತ್ಸವವು ವೈಭವದಿ ನಡೆಯುವದು
ಚಂಚಮಿತ ಸುಪ್ರಸಾದವು ಇರುವದು
ವಂಚಿಸದೆ ಸೇವೆಯನು ಮಾಡಿದರೆ ಗುರುರಾಯ
ವಾಂಛಿತಾರ್ಥವನಿತ್ತು ಸಂತೋಷಪಡಿಸುವನು ೧

ನಿತ್ಯ ಅಷ್ಟೋತ್ತರ ಅಲಂಕಾರ ಮಹಾಪೂಜೆ
ಕ್ಷೇತ್ರ ಭೋಜನ ಕೀರ್ತನೆ ಪುರಾಣ
ನೃತ್ಯಗೀತಗಳಿಂದ ಪಲ್ಲಕ್ಕಿ ಸೇವೆಯು
ಉತ್ತರಾರಾಧನೆಗೆ ರಥೋತ್ಸವದ ವೈಭವವು ೨

ಸಹಸ್ರಕುಂಭಾಭಿಷೇಕೋತ್ಸವವು ಕೊನೆಯದಿನ
ಸತ್ಯನಾರಾಯಣನ ಮಹಾಪೂಜೆಯು
ಪವಮಾನಹೋಮ ಸಂಭಾವನಾ ವಿತರಣೆ
ಮುಕ್ತಾಯವಾಗುವದು ಪಂಚರಾತ್ರೋತ್ಸವವು ೩

ಕೃಷ್ಣವೇಣಿಯ ಪುಣ್ಯಕ್ಷೇತ್ರವಿದು ಗಲಗಲಿಯು
ಪ್ರಲ್ಹಾದವರದ ಶ್ರೀನರಹರಿಯ ಕ್ಷೇತ್ರವು
ಶ್ರೀವೆಂಕಟೇಶವಿಠ್ಠಲ ದತ್ತ, ಎಲ್ಲಮ್ಮ ವೀರ
ಮಾರುತಿ ಪರ್ವತೇಶ್ವರನ ಕ್ಷೇತ್ರ ೪

ಗಾಲವ ಮಹರ್ಷಿಗಳು ತಪವಗೈದಿಹ ಕ್ಷೇತ್ರ
ಎಲ್ಲದರಲ್ಲಿಯೂ ಮುಂದಿರುವ ಕ್ಷೇತ್ರ

ದೇವ ಭಕ್ತರ ಕ್ಷೇತ್ರ ದೇಶಭಕ್ತರ ಕ್ಷೇತ್ರ
ಭೂಪತಿವಿಠ್ಠಲನ ಪ್ರೀತಿಯ ಕ್ಷೇತ್ರ ೫

## ೪೪

ಮೊದಲಿಗೆ ಶ್ರೀ ಯಮಧರ್ಮ ತನಯೆ
ಶ್ರೀ ಕೃಷ್ಣನಂಗದಿಂದ ಜನಿಸಿದಳು
ಕಮಲಸಂಭವನ ಲೋಕದೊಳಗಿದ್ದು
ಕೃಷ್ಣ ಕೃಷ್ಣೆ ಎಂದೆನಿಸಿದಳು ೧

ಸುಮನಸರೆಲ್ಲರು ಪ್ರಾರ್ಥನೆ ಮಾಡಲು
ಕೈಲಾಸಕೆ ದಯಮಾಡಿದಳು
ಆ ಮಹಾದೇವನ ಜಟಾಜೂಟದಿಂ
ಸಹ್ಯಾದ್ರಿಗೆ ಬಂದಿಳಿದಿಹಳು ೨

ಮುಂದೆ ಮುಂದೆ ತಾ ಸಾಗಿಬರತಿರಲು
ವೇಣಿನದಿಯು ಬಂದು ಕೂಡಿದಳು
ಕೃಷ್ಣ ವೇಣಿಗಳ ಸಂಗಮವಾಗಲು
ಕೃಷ್ಣವೇಣಿ ಎಂದೆನಿಸಿದಳು ೩

ಕೃಷ್ಣವೇಣಿ ಹರಿದಂಥ ಸ್ಥಳಗಳು
ಋಷಿಮುನಿಗಳು ತಪವ ಗೈದಿಹರು
ಋಷಿಮುನಿಗಳು ತಪವ ಗೈದಕ್ಷೇತ್ರಗಳು
ಪುಣ್ಯಕ್ಷೇತ್ರ ವೆಂದೆನಿಸಿದವು ೪

ಗಾಲವೃಷಿಗಳು ತಪವಗೈದಸ್ಥಳ
ಗಾಲವಕ್ಷೇತ್ರವು ಗಲಗಲಿಯು
ಗಲಗಲಿಯಲ್ಲಿಯ ಚಕ್ರತೀರ್ಥರ
ಋಷಿಬಂಡಿಗಳೇ ಗಾಲವರ ಆ[illegible] ೫

ಗಾಲವಕ್ಷೇತ್ರದ ಪಂಚಕೋಶವು
ಪುಣ್ಯಭೂಮಿ ಎಂದೆನಿಸುವದು

ಗಾಲವಷಿಗಳ ಪುಣ್ಯದ ಬಲವೇ
ಗಲಗಲಿಯ ಕೀರ್ತಿಗೆ ಕಾರಣವು ೬

ಗಾಲವೃಷಿಗಳ ನಂಬಿದ ಜನರಿಗೆ
ಭೂಪತಿವಿಠ್ಠಲ ಒಲಿಯುವನು
ಗಾಲವೃಷಿಗಳ ಮರೆತುಬಿಟ್ಟರೆ
ನಷ್ಟವಾಗುವದು ಗಲಗಲಿಯು ೭

## ೪೫

ಮಂಗಲಂ ಮುಚಕುಂದ ವರದ ಹರಿಗೆ
ಮಂಗಲಂ ಪ್ರಲ್ಹಾದ ವರದ ನರಹರಿಗೆ ಪ

ಮಂಗಲಂ ಮಾಧವಗೆ ವಂಗಲಂ ಶ್ರೀಧರಗೆ
ಮಂಗಲಂ ಗಿರಿಧರ ಕಾವೇರಿರಂಗನಿಗೆ
ಮಂಗಲಂ ಶ್ರೀಪಾಂಡುರಂಗನಿಗೆ ಭವಭಂಗ
ಸಂಗೀತ ಪ್ರಿಯನಾದ ಪಾಂಡುರಂಗನಿಗೆ ೧

ಮಂಗಲಂ ಅಕ್ರೂರವರದ ಶ್ರೀಕೃಷ್ಣನಿಗೆ
ಮಂಗಲಂ ಪುಂದಲೀಕ ವರದ ವಿಠ್ಠಲಗೆ
ಮಂಗಲಂ ಧ್ರುವರಾಜ ವರದನಾರಾಯಣಗೆ
ಮಂಗಲಂ ಮಧ್ವಮುನಿಗೊಲಿದ ವ್ಯಾಸರಿಗೆ ೨

ಪುರಂದರವಿಠ್ಠಲಗೆ ಸಿರಿವಿಜಯವಿಠ್ಠಲಗೆ
ಗೋಪಾಲವಿಠ್ಠಲ ಮೋಹನವಿಠಲಗೆ
ಜಗನ್ನಾಥವಿಠಲಗೆ ಪ್ರಾಣೇಶವಿಠ್ಠಲಗೆ
ಶ್ರೀಪತಿವಿಠ್ಠಲ ಭೂಪತಿವಿಠ್ಠಲಗೆ ೩

## ೬. ನೀತಿ–ಬೋಧೆ

### ಆತ್ಮನಿವೇದನೆ

#### ೪೬

ಅಪರಾಧವೆಣಿಸದಲೆ ಕೃಪೆಮಾಡು ತಂದೆ
ಅಪಣಾರ್ಯಕೃತ ಸ್ತೋತ್ರಪ್ರಿಯ ರಾಘವೇಂದ್ರ ಪ

ವರ್ಣಾಶ್ರಮಕೆ ಉಚಿತ ಧರ್ಮಕರ್ಮವ ಬಿಟ್ಟು
ಹೊನ್ನು ಹೆಣ್ಣು ಮಣ್ಣಿಗಾಗಿ ಧಡಪಡಿಸಿ
ಮನ್ನಿಸದೆ ಗುರುಹಿರಿಯರನು ಹೀಯಾಳಿಸಿ
ಕಣ್ಣು ನೆತ್ತಿಯ ಮೇಲೆ ಬಂದು ನಾ ಮೆರೆದೆ ೧

ಹಂದಿಯಂದದಿ ಕಂಡ ಕಂಡಲ್ಲಿ ಬಾಯೊಳಗೆ
ತಿಂಡಿ ತಿನಿಸು ತುರುಕಿ ಹೆಂಡಮದವೇರಿ
ಖಂಡವನು ಬೆಳಸಿ ಮುಸಗಾಡುತ ಕೋಣನ ತೆರದಿ
ಕಂಡದ್ದು ಮಾಡಿ ನಾ ದಣಕೊಂಡೆ ನಾ ತಂದೆ ೨

ದೇಹ ಕುಗ್ಗಿತು ಈಗ ದೇಹ ಹಾಳಾಯಿತು
ಆ ಹರೆಯ ಮಬ್ಬಳಿದು ಮುದಿ ಮಂಗನಾದೆ
ಶ್ರೀಹರಿ ಭೂಪತಿವಿಠ್ಠಲನು ನೆನಪಾದ
ಕರುಣದಿಂದ ಕೈಪಿಡಿದು ಉದ್ಧರಿಸು ತಂದೆ ೩

### ದಾನಧರ್ಮ ವಿಚಾರ

#### ೪೭

ಕೊಡಬೇಕು ದಾನಗಳ ಸತ್ಕಾರ್ಯಕೆ
ಬಿಡಬೇಕು ಕೈಸಡಿಲು ಮೋಕ್ಷಸಾಧನೆಗೆ ಪ

ಬೇಡದಲೆ ಕೊಡುವವರು ರೂಢಿಯೊಳಗುತ್ತಮರು
ಬೇಡಿದರೆ ಕೊಡುವ ದಾನಿಯು ಮಧ್ಯಮ
ಬೇಡಿದರು ಕಾಡಿದರು ಕೊಡದವರು ಅಧಮರು
ಕೊಡದೆ ಬಡಬಡಿಸುವವರು ಮೂರ್ಖ ಅಧಮಾಧಮರು ೧

ದುಡ್ಡು ಇದ್ದರೆ ಮಾತ್ರ ದೊಡ್ಡವರು ಅನಬೇಡ
ದುಡ್ಡಿದ್ದು ದಾನ ಧರ್ಮವು ನಡೆಯಬೇಕು
ದುಡ್ಡು ಕಾಯುವ ಸರ್ಪಕ್ಕೆ ಇಹವಿಲ್ಲ ಪರವಿಲ್ಲ
ಬಿದ್ದು ಹೋದರೆ ಅವರ ಬಾಯೊಳಗೆ ಮಣ್ಣು ೨

ಧನಿಕರಿಗೆ ಭೂಷಣವು ದಾನಧರ್ಮವು ಸದಾ
ಧನವಿದ್ದ ಜಿಪುಣತಾ ಜೀವಂತ ಹೆಣವು
ಧನವಿದ್ದು ದಾನಮಾಡುವ ಪುಣ್ಯವಂತರಿಗೆ
ಘನಮಹಿಮ ನಮ್ಮ ಭೂಪತಿವಿಠ್ಠಲನೊಲಿಯುವನು ೩

## ತಾಯಿಯ ಹರಕೆ

## ೪೮

ಬಣ್ಣಿಸುತ ಮಕ್ಕಳನು ಹರಸುವಳು ತಾಯಿ
ಎಣ್ಣೆ ಉಣಿಸುತ ತನ್ನ ಚಿನ್ನ ಚಿಕ್ಕರುಗಳಿಗೆ ಪ

ಆಯುಷ್ಯವಂತನಾಗು ಆಸ್ತಿಕನು ನೀನಾಗು
ಭಕ್ತವತ್ಸಲ ಹರಿಯಭಕ್ತನಾಗು
ನಿತ್ಯನಿರ್ಮಲನಾಗು ನೀತಿವಂತನು ಆಗು
ಸತ್ಯನಿಷ್ಠನಾಗು ಸಿರವಂತನಾಗೆಂದು ೧

ಶೂರನೀನಾಗು ಬಲುಧೀರ ನೀನಾಗಯ್ಯಾ
ಧೈರ್ಯದಿಂದ ಸತ್ಕಾರ್ಯ ನಿರತನಾಗು

ದುರುಳರನು ದೂರಿರಿಸು ಪರರ ಪೀಡಿಸದಿರು
ಕಾರುಣ್ಯ ನಿಧಿಯಾಗಿ ಸುಜನರನು ಪೊರೆಯೆಂದು ೨

ದೇಶವನು ಪ್ರೀತಿಸು ದುರಾಶೆಗೊಳಗಾಗದಿರು
ಕರ್ಯತನು ಆಗದಿರು ಧರ್ಮ ಬಿಡಬೇಡಾ
ಉದ್ಯೋಗಪತಿಯಾಗು ಜಿಪುಣ ನೀನಾಗದಿರು
ಭೂಪತಿವಿಠ್ಠಲನ ಭಕ್ತ ನೀನಾಗೆಂದು ೩

## ೪೯

ವೈದಿಕ ಧರ್ಮಧ್ವಜ ಫಡಫಡಿಸಲ ಗಗನದೊಳೆತ್ತರದಿ
ವೈದಿಕ ತತ್ವಜ್ಞಾನ ಪ್ರಕಾಶವು ಪಸರಿಸಲೀ ಜಗದಿ ೧

ಜ್ಞಾನ ಭಕ್ತಿ ವೈರಾಗ್ಯ ಧೈರ್ಯ ಔದಾರ್ಯ ತಪಶ್ಚರ್ಯ
ದಿನ ದಿನ ಬೆಳೆಯಲಿ ದಾನಧರ್ಮಗಳು ದಯಾ ಸತ್ಯ ಶೌರ್ಯ ೨

ದುಷ್ಟ ಶತ್ರುಗಳ ಸದ್ದು ಅಡಗಲಿ ಜಗನಿರ್ಭಯವಿರಲಿ
ಭ್ರಷ್ಟಾಚಾರವು ನಿರ್ಮೂಲಾಗಲಿ ಸತ್ಯಕ್ಕೆ ಜಯವಿರಲಿ ೩

ವರ್ಣಾಶ್ರಮಗಳ ಧರ್ಮದ ಮರ್ಮವು ತಿಳಿಯಲಿ ಜಗಕೆಲ್ಲಾ
ಕರ್ಮಾ ಕರ್ಮ ವಿಕರ್ಮ ಮರ್ಮವನು ಅರಿಯಲಿ ಜನರೆಲ್ಲಾ ೪

ಜಯ ಜಗದೀಶ್ವರರೆಂಬ ನಿನಾದವು ತುಂಬಲಿ ಜಗದಲ್ಲಿ
ಜಯ ಭೂಪತಿವಿಠ್ಠಲ ಸರ್ವೋತ್ತಮ ಜಯಹರಿ ಎಂದೆನಲಿ ೫

## ೫೦

ಹೇಗೆ ಮಾಡಬೇಕು ಭಜನೆಯನು ಹೇಗೆ ಮಾಡಬೇಕು
ಬೇಗ ಜ್ಞಾನ ಭಕ್ತಿ ವೈರಾಗ್ಯ ಬರುವಂತೆ ಭಜನೆಮಾಡಬೇಕು ಪ

ಆಧ್ಯಾತ್ಮಿಕ ವಿಷಯದಲಿ ಮೊದಲು ಬಲು ಶುದ್ಧಜ್ಞಾನ ಬೇಕು
ಮಹಾತ್ಮ್ಯದ ಸುಜ್ಞಾನ ಪೂರ್ವಕ ಸುಧೃಡ ಸ್ನೇಹಬೇಕು
ದೇಹದೌಲತ್ತಿನ ಸ್ವರೂಪವರಿತು ವೈರಾಗ್ಯ ಹುಟ್ಟಬೇಕು
ಈ ಮೂರು ಮನಸಿನಲಿ ಮೂಡುವಂತೆ ನಾವು ಭಜನೆ ಮಾಡಬೇಕು ೧

ನಾನು ನನ್ನದೆಂಬ ಅಹಂಕಾರ ದಿನದಿನಕೆ ಅಳಿಯಬೇಕು
ಮಾನಾಪಮಾನವು ಆದರೆ ಹಿಗ್ಗದೆ ಕುಗ್ಗದೆ ಇರಬೇಕು
ಹೆಣ್ಣು ಹೊನ್ನು ಮಣ್ಣುಗಳ ವಿಷಯದಲಿ ತ್ಯಾಗ ವೈರಾಗ್ಯ ಬುದ್ಧಿಬೇಕು
ಪುಣ್ಯ ಪಾಪಗಳನರಿತ ಸದ್ಭಕ್ತರ ಸಂಗತಿ ಇರಬೇಕು ೨

ಮಧ್ವಮತದ ಸಾತ್ವಿಕರ ಸಂಗದಲಿ ಭಜನೆ ನಡೆಯಬೇಕು
ಶುದ್ಧಮನದ ಸಾತ್ವಿಕರ ಸಂಗದಲಿ ಭಜನೆ ನಡೆಯಬೇಕು
ಬುದ್ಧಿಗೇಡಿ ದುರ್ವ್ಯಸನಿ ದುಷ್ಟರನು ದೂರದಲಿ ಇಡಬೇಕು
ಶ್ರದ್ಧೆಯಿಂದ ಭೂಪತಿವಿಠ್ಠಲನನು ಭಜಿಸಿ ಕುಣಿಯಬೇಕು ೩

## ೫೧

### ಪ್ರಸಾದ

(ಖಂಡಕಾವ್ಯದ ಆಯ್ದ ಪದ್ಯಗಳು)

ಗಣಾಧೀಶ ಗೌರೀಶ್ ವಾಗೀಶ ಶ್ರೀಶಾ
ನಮಿಸಿ ಬೇಡುವ ಪ್ರಸಾದವನು ಜಗದೀಶಾ
ನೆಲಸಿ ಹೃದಯದಿ ಬಂದು ನುಡಿಸು ದಯದಿಂದಾ
ನೀ ನುಡಿಸಿದಂತೆ ನುಡಿಯುವೆ ಸ್ಫೂರ್ತಿಯಿಂದಾ ೧

ದೇಹ ದೇವಾಲಯವು ದೇವರೊಳಗಿಹನು
ಮನದ ಗರ್ಭಾಲಯದಿ ಮಲಗಿಕೊಂಡಿಹನು

ನಾಲಿಗೆಯ ನಾಮಗರ್ಜನೆಯ ಬಲದಿಂದಾ
ಮನದ ಕದ ತೆಗೆಯೆ ಕಾಣುವನು ಗೋವಿಂದಾ ೨

ಮನವೆ ಕಾರಣವು ಬಂಧಮೋಕ್ಷಗಳಿಗೆ
ಮನವೆ ಕಾರಣವಿಲ್ಲಿ ಸುಖದುಃಖಗಳಿಗೆ
ಮನಸು ಬಿಗಿಹಿಡಿದ್ಹಿಡಿದು ವಿಷಯಗಳ ತ್ಯಜಿಸು
ಮನತು ನಾಮಸ್ಮರಣೆಯೊಳು ಸದಾ ಇರಿಸು ೩

ಯಾವಾಗಲೂ ರಾಮ ನಿನ್ನೊಳಗೆ ಇರುವಾ
ಭಾವದಿಂದಲಿ ಕರೆಯೆ 'ಓ' ಎಂದು ಬರುವಾ
ದೇವರನು ನಂಬಿದರೆ ಸರ್ವದಾ ಕಾವಾ
ಯಾವ ಅಂಜಿಕೆಯು ನಿನಗಿಲ್ಲ ತಿಳಿ ಜೀವಾ ೪

ನಿನ್ನೊಳಗೆ ನೀ ನಿನ್ನ ರಾಮನನು ನೋಡು
ನಿನ್ನ ಬೇಡಿಕೆಗಳನು ರಾಮನಲಿ ಬೇಡು
ಅನ್ಯರನು ಅಲಕ್ಷಿಸದೆ ಭಜನೆಯನು ಮಾಡು
ಪುಣ್ಯವಂತರ ಸಂಗದೊಳು ಸದಾ ಕೂಡು ೫

ಶ್ರವಣ ಭಕ್ತಿಯು ಬೇಕು ಮೊದಲು ಚೆನ್ನಾಗಿ
ಶ್ರವಣವಾಗುವವರೆಗೆ ನಾದತಾನಾಗಿ
ಭವ ಸಮುದ್ರವನು ದಾಟುವಡೆ ಸುಖವಾಗಿ
ಶ್ರವಣವೇ ಮುಖ್ಯ ಸಾಧನವು ನಿಜವಾಗಿ ೬

ನಾದ ಹುಟ್ಟಿದ ಮೇಲೆ ನಾಮ ಕೀರ್ತನವು
ನಾಮ ಕೀರ್ತನದಿ ಅಸ್ಪಷ್ಟ ದರುಶನವು
ನೇಮ ಹೆಚ್ಚಾದಂತೆ ಸ್ಮರಣೆ ಶಾಶ್ವತವು
ಸ್ಮರಣೆಯೊಳು ಸಂಪೂರ್ಣ ವಸ್ತುದರುಶನವು ೭

ಅನನ್ಯ ಭಕ್ತಿಯ ಬಲವ ಬಣ್ಣಿಸುವದೇನು
ಕಣ್ಮುಂದೆ ಸರ್ವದಾ ಹರಿಯು ಕುಣಿಯುವನು

ಕಣ್ಣು ಮುಚ್ಚಣಿಕೆಯಾಟವನು ಆಡುವನು
ಅಣುರೇಣು ಪರಿಪೂರ್ಣನಾಗಿ ತೋರುವನು ೮

ಕುಣಿಯುವನು ಕುಣಿಸುವನು ನಗುತ ನಲಿಸುವನು
ದಣಿಯುವನು ದಣಿಸುವನು ಉಣುತ ಉಣಿಸುವನು
ಜನರಿಗದ್ಭುತ ಚಮತ್ಕಾರ ತೋರುವನು
ಕ್ಷಣ ಬಿಡದೆ ಕೆಳಗಿಳಿಯದಂತೆ ಕಾಯುವನು ೯

ದೇವರನು ನಂಬಿ ಕೆಡಕಾದವರು ಇಲ್ಲ
ಜದೇವರನು ಬಿಟ್ಟು ಸುಖಹೊಂದಿದವರಿಲ್ಲಾ
ದೇವರನು ಒಲಿಸುವೆಡೆ ಭಾವವಿರಬೇಕು
ಭಾವವಿಲ್ಲದ ಢೋಂಗಿನರ್ಚನೆಯು ಸಾಕು ೧೦

ಚಿನ್ನ ಬೆಳ್ಳಿಗಳ ಮಂಚಪವು ಬೇಕಿಲ್ಲಾ
ಸಣ್ಣಕ್ಕಿ ಅನ್ನ ಪಕ್ವಾನ್ನ ಬೇಕಿಲ್ಲ
ಮಣ್ಣು ಕುಳ್ಳಿಯೊಳು ಒಣ ಅಂಬಲಿಯು ಸಾಕು
ಘನ್ನ ಮಹಿಮನಿಗೆ ನಿರ್ಮಲ ಭಕುತಿ ಬೇಕು ೧೧

ಶ್ರವಣ ಭಕ್ತಿಯ ದಾಟದವನು "ಸಾಧಕ" ನು
ಪಾದಸೇವನದಿಂದ 'ಸಾಧು' ಆಗುವನು
ದಾಸ್ಯ ಭಕ್ತಿಯ ಮುಂದೆ 'ಸಿದ್ಧ' ನಾಗುವನು
ಸಖ್ಯಭಕ್ತಿಯ ಮುಂದೆ 'ಗುರು'ವು ಆಗುವನು ೧೨

ಭಕ್ತಿ ಮಾರ್ಗವು ಬಹಳ ಸುಲಭ ಸಾಧನವು
ಭಕ್ತಿ ಸರ್ವರಿಗೆ ವಿಷಯದೊಳು ಪರಿಚಿತವು
ವಿಷಯದೊಳಗಿನ ಪ್ರೀತಿ ಎಳೆದೆಳೆದು ತೆಗೆದು
ಪರಮಾತ್ಮನೊಳು ಇಡಲು ಭಕ್ತಿಯಾಗುವದು ೧೩

ಉಂಡದ್ದು ಶ್ರೀ ಹರಿಗೆ ನೈವೇದ್ಯವೆನ್ನು
ಕಂಡದ್ದು ಶ್ರೀ ಹರಿಯ ಪ್ರತಿರೂಪವೆನ್ನು

ಮಲಗಿದ್ದು ಶ್ರೀ ಹರಿಗೆ ಸಾಷ್ಟಾಂಗವೆನ್ನು
ಸುಲಭ ಪೂಜೆಯ ಮರ್ಮವೆನು ತಿಳಿದು ನೀನು ೧೪

ಸಾಲವನು ಮಾಡಿ ಹೋಳಿಗೆ ಹೊಡಿಯಬೇಡಾ
ಜೇಲಿಗಂಜುತ ದೇಶಕಾರ್ಯ ಬಿಡಬೇಡಾ
ಆಲಸ್ಯದಲಿ ಕಾಲವನು ಕಳಿಯಬೇಡಾ
ಕೆಲಸದಲಿ ಕೀಳು ಮೇಲೆಂದು ಅನಬೇಡಾ ೧೫

ಸ್ವಚ್ಛವಿರಬೇಕು ಮನಬುದ್ಧಿ ದೇಹದೊಳು
ಅಚ್ಚುಕಟ್ಟಿರಬೇಕು ಸರ್ವಕಾರ್ಯದೊಳು
ಎಚ್ಚರಿರಬೇಕು ಜನಪಾತ್ರೆ ರಾತ್ರಿಯೊಳು
ಬಿಚ್ಚು ಮನವಿರಬೇಕು ಸ್ವಜನ ಮಿತ್ರರೊಳು ೧೬

ಬಡತನವು ಬಂದಾಗ ಧೈರ್ಯ ಬಿಡಬೇಡ
ಹಿಡಿದು ನೆಂಟರ ಮನೆಯ ನೀ ಕೂಡಬೇಡ
ದುಡಿದು ತಿನ್ನಲು ಸ್ವಲ್ಪ ಸಹ ನಾಚಬೇಡ
ಮಡದಿ ಹುಟ್ಟಿದ ಮನೆಯ ನೀ ಸೇರಬೇಡಾ ೧೭

ಗಾಜಕಾರಣದೊಳು " ಮುಚ್ಚುಮನ" ಬೇಕು
ಧರ್ಮಕಾರಣದೊಳಗೆ "ಸ್ವಚ್ಛಮನ" ಬೇಕು
ಅರ್ಥಕಾರಣದೊಳಗೆ " ಮೆಚ್ಚುಮನ" ಬೇಕು
ಕಚ್ಚೆಕೈಗಳು ಸದಾ ಸ್ವಚ್ಛವಿರಬೇಕು ೧೮

ಸಂಸಾರ ಮಾಡುವಡೆ ಧನವ ಸಂಗ್ರಹಿಸು
ಸನ್ಯಾಸಿಯಾಗುವೆಡೆ ವೈರಾಗ್ಯ ಬೆಳೆಸು
ಸರ್ವಕರ್ಮಗಳಲ್ಲಿ ಶ್ರೀಹರಿಯ ಸ್ಮರಿಸು
ಸರ್ವದಾ ಸಂತ ಸಂಗದೊಳು ಸಂಚರಿಸು ೧೯

ಸಂತ ಸಂಗದೊಳು ಸಂಚರಿಸುವುದು ಸ್ನಾನಾ
ಸಂತ ವಚನಾಮೃತದ ಪಾನವೇ ಸ್ನಾನಾ

ಸಂತರನು ಸಂತೋಷಪಡಿಸುವುದು ಸ್ನಾನಾ
ಶಾಂತಮನದಿಂ ಹರಿಯ ಚಿಂತಿಪುದ ಸ್ನಾನಾ ೨೦

ಬಾಲ್ಯದಲಿ ಬ್ರಹ್ಮಚರ್ಯದಿ ಬಲವ ಬೆಳೆಸು
ತಾರುಣ್ಯದಲಿ ದುಡಿದು ಧನವ ನೀ ಗಳಿಸು
ವೃದ್ಧಾಪ್ಯದೊಳು ಸದಾ ಶ್ರೀಹರಿಯ ಸ್ಮರಿಸು
ಶ್ರೀಹರಿಯ ಸ್ಮರಣೆಯೊಳು ಆಯುಷ್ಯ ಸವೆಸು ೨೧

ಮೊದಲು ನಿನ್ನ ಪ್ರಯತ್ನ ತಪ್ಪದೆಲೆ ಮಾಡು
ಅದು ನೀಗದಿರೆ ಮುಂದೆ ದೈವವನು ನೋಡು
ಮದುವೆಯಾಗುವ ಮೊದಲು ತಿಳಿತಿಳಿದು ನೋಡು
ದುಡಿದು ಧನ ಗಳಿಸಿ ಸುಖದಿಂದ ಬಾಳುವೆ ಮಡು ೨೨

ಧನವಿಲ್ಲದವನ ಸಂಸಾರ ಸುಖವಲ್ಲಾ
ಮನೆಯೊಳಗೆ ನಿತ್ಯ ಕಿರಿಕಿರಿಯು ತರವಲ್ಲಾ
ದನದಂತೆ ಹೆಣ್ಣು ನುಡಿಯುವುದು ಸರಿಯಲ್ಲಾ
ಎಣಿಕೆಯಿಲ್ಲದೆ ಮಕ್ಕಳಾಗುವುದು ಸಲ್ಲಾ ೨೩

ನೆಂಟರೊಳು ಬಹುದಿನ ಕೆಳಗಿರಬೇಡಾ
'ಫ್ರಂಟಸೀಟಿ'ನ ಮೇಲೆ ನೀ ಕೂಡಬೇಡಾ
ಒಂಟಿಯಲಿ ಹೆಂಡತಿಯ ಬಿಟ್ಟು ಇರಬೇಡಾ
ಗಂಟು ಒಬ್ಬರ ಕೈಗೆ ಕೊಟ್ಟು ಆಳಬೇಡಾ ೨೪

ನಿನ್ನಂತೆ ತಿಳಿ ಪರರ ಸುಖ ದುಃಖಗಳನು
ಅನ್ಯಥಾ ನೋಡದಿರು ಅಣ್ಣ ತಮ್ಮರನು
ಸರ್ವಥಾ ಸಹಿಸದಿರು ಅನ್ಯಾಯಗಳನು
ತಿಳಿಯದೇ ಹಳಿಯದಿರು ಭಿನ್ನ ಮತಗಳನು ೨೫

ಅತಿ ಮತುಗಳು ಬೇಡ ಅತಿ ಮೌನ ಬೇಡಾ
ಅತಿ ತಿನಸು ಬೇಡ ಅತಿ ಉಪವಾಸ ಬೇಡಾ

ಅತಿ ವಿಹಾರವು ಬೇಡ ಅತಿ ವಿನಯ ಬೇಡಾ
ಅತಿ ಉದಾರತೆ ಬೇಡ ಜೀನತನ ಬೇಡಾ ೨೬

ಭೂಮಿಂಗೆ ಭಾರವಾಗುತ ತಿರುಗಬೇಡಾ
ಕೂಳಿಂಗೆ ಕಾಳಾಗಿ ನೀ ಕೂಡಬೇಡ
ಸಾಲ ಸಿಗುವಾಗ ಸಂತೋಷ ಪಡಬೇಡಾ
ಸಾಲವೇ ಶೂಲವೆಂಬುದು ಮರೆಯಬೇಡಾ ೨೭

ಹನಿಗೆ ಹನಿ ಕೂಡಿದರೆ ಹಳ್ಳದಾಗುವುದು
ತೆನಿಗೆ ತೆನಿ ಕೂಡಿದರೆ ರಾಶಿಯಾಗುವುದು
ಕ್ಷಣಬಿಡದೆ ಕಂಡಲ್ಲಿ ವಿದ್ಯೆಯನು ಗಳಿಸು
ಕಣಬಿಡದೆ ಧನ ಧಾನ್ಯಗಳನು ಸಂಗ್ರಹಿಸು ೨೮

ಮಾತು ಕೃತಿಗಳಿಗೆ ಬಲು ಮೇಳವಿರಬೇಕು
ನೀತಿಯೊಳು ತನ್ನ ಮನಸಾಕ್ಷಿ ಇರಬೇಕು
ಮಾತು ಬಲು ಸವಿಯಿದ್ದು ಸತ್ಯವಿರಬೇಕು
ಸತ್ಯವಿಲ್ಲದ ಸುಳ್ಳು ಸವಿ ಮಾತು ಸಾಕು ೨೯

ಐಕ್ಯವಿದ್ದರೆ ಸೌಖ್ಯ ಭೇದದೊಳು ಬೇದಾ
ಐಕ್ಯವಿದ್ದರೆ ಬಲವು ಕ್ಷಯಬೇನೆ ಭೇದಾ
ಐಕ್ಯವಿದ್ದರೆ ಹಿಗ್ಗು ಭೇದದೊಳು ಕುಗ್ಗು
ಐಕ್ಯದಿಂದ ಸ್ವಾತಂತ್ರ್ಯ ರಥವನ್ನು ಜಗ್ಗು ೩೦

ತನ್ನ ಅಭಿಮಾನ ತನ್ನವರ ಅಭಿಮಾನ
ತನ್ನ ಕುಲಗೋತ್ರ ಜಾತಿಯ ಸ್ವಾಭಿಮಾನ
ತನ್ನ ಭಾಷಾರಾಷ್ಟ್ರ ಧರ್ಮಾಭಿಮಾನ
ಮಾನವನಿಗಿರಬೇಕು ಇಲ್ಲದವ "ಶ್ವಾನಾ" ೩೧

ತನ್ನತನ ಬಿಡಬೇಕು ತನ್ನವರಿಗಾಗಿ
ತನ್ನವರ ಕುಲಗೋತ್ರ ಜಾತಿಗಳಿಗಾಗಿ

ಕುಲಗೋತ್ರ ಜಾತಿಗಳ ತಾಯ್ನಾಡಿಗಾಗಿ
ತಾಯ್ನಾಡು ನುಡಿಧರ್ಮ ಪರಮಾತ್ಮಗಾಗಿ ೩.೨

ತನ್ನ ಉದ್ಯೋಗ ಮನಮುಟ್ಟಿ ಮಾಡುವರು
ಉಣಲು ಅಧಿಕಾರ ಆಮೇಲೆ ದೊರಕುವದು
ಉಣುವಾಗ ಶ್ರೀಹರಿಯ ಸ್ಮರಣೆ ಮಾಡುವದು
ಮನೆಯೊಳಗೆ ಶಿಸ್ತು ಶಾಂತಿಗಳ ಕಾಯುವದು ೩.೩

ಹರಿಕಥಾ ಕೀರ್ತನ ಪುರಾಣ ಪಠಿಸುವದು
ಸರಸ ವಾಙ್ಮಯದ ಅಭ್ಯಾಸ ಮಡುವದು
ತರು ಬರುವ ತನ್ನ ವ್ಯವಹಾರ ನೋಡುವದು
ಪರ ಪರಿಸ್ಥಿತಿಗಳನು ತೂಗಿ ನೋಡುವದು ೩.೪

ವಿಶ್ರಾಂತಿ ಅಭ್ಯಾಸಿ ಸರಸ ಸಲ್ಲಾಪ
ನಿಶ್ಚಿಂತೆಯಿಂದ ನಿದ್ರೆಯು ಸೌಖ್ಯರೂಪ
ನಿತ್ಯ ಮಾನವನ ದಿನಚರಿಯ ಈ ರೂಪ
ನಿಶ್ರೇಯಸಕೆ ಸುಲಭ ಸಾಧನವು ಭೂಪಾ ೩.೫

ಸ್ವಚ್ಛ ಹವೆ ನೀರು ವ್ಯಾಯಾಮ ವಿಶ್ರಾಂತಿ
ಸಾತ್ವಿಕ ಸಸತ್ವಾನ್ನ ಪಾನಗಳ ಪ್ರೀತಿ
ಉಚ್ಚತಮ ಧ್ಯೇಯ ಆಚರಣೆಗಳ ರೀತಿ
ಮೋಕ್ಷಕ್ಕೆ ಸಾಧನವು ಇಹದಿ ಸಂತೃಪ್ತಿ ೩.೬

ದೇಹ ಬಿದ್ದರೆ ಹಿಂದೆ ಕೀರ್ತಿಯಿರಬೇಕು
ಕೀರ್ತಿ ಬರುವಂಥ ಕಾರ್ಯವ ಮಾಡಬೇಕು
ಕಾರ್ಯದೊಳು ಕುಶಲತನ ದಕ್ಷತೆಯು ಇರಬೇಕು
ಫಲವು ಪರಮಾತ್ಮನಾಧೀನವೆನಬೇಕು ೩.೭

ಸರ್ವದಾ ಸುಖವೆ ಇದ್ದವರು ಯಾರುಂಟು
ಅವರವರ ಕರ್ಮ ಫಲವೇ ಅವರ ಗಂಟು

ಬೆಳತು ಕತ್ತಲೆಯಂತೆ ಚಕ್ರ ಆರುಗುವದು
ಸುಖ ದುಃಖ ಬರುವಾಗ ಬಂದು ಹೋಗುವುದು ೩೮

ಅನುಭವದಿ ಹೆಚ್ಚು ಸಾಧನ ಬೆಳೆಯಬೇಕು
ಅನುಭವದ ಮಾತುಗಳು ಬಚ್ಚಿಡಲು ಬೇಕು
ಅನುಭವವು ಬಂತೆಂದು ಗರ್ವ ಪಡಬೇಡಾ
ಗರ್ವದಿಂದಲಿ ಮತ್ತೆ ಕೆಳಗಿಳಿಯ ಬೇಡಾ ೩೯

ಅಡಗಿ ಅಂಬಲಿ ಅರವಿ ಅಂಚಡಿಯ ಕಡೆಗೆ
ಹುಡುಗರ ಬಲಾರೋಗ್ಯ ನಡೆನುಡಿಯ ಕಡೆಗೆ
ಕಡು ಚಾಣ್ಮೆಯಿಂದ ನೋಡುವದು ಸತಿ ಕೆಲಸಾ
ಅವಳಿಗನುಕೂಲ ಮಾಡುವದು ಪತಿ ಕೆಲಸಾ ೪೦

ಪತಿಯಿಂದಲೇ ಸತಿಯು ಸತಿಯಿಂದ ಪತಿಯು
ಸತಿಪತಿಯ ಪ್ರೇಮದಿಂದಾತ್ಮದುನ್ನತಿಯು
ಪತಿಯ ಕೋಪದಿ ಕಲ್ಲು ಆಗುವಳು ಸತಿಯು
ಸತಿಯ ಶಾಪದಿ ಕತ್ತೆಯಾಗುವನು ಪತಿಯು ೪೧

ಸಾವಿಗಂಜಲು ಬೇಡ ಸಾವಿಗಳಬೇಡಾ
ಸಾವು ಅಂದರೆ ಭಯಂಕರ ತಿಳಿಯಬೇಡಾ
ದೇಹಕ್ಕೆ ಬಾಲ್ಯ ಯೌವನ ಮುಪ್ಪಿನಂತೆ
ದೇಹಾಂತರ ಪ್ರಾಪ್ತಿಯೇ ಮರಣಗೀತೆ ೪೨

ವಿದ್ಯಾರ್ಥಿ ಬಡವನಿದ್ದರೆ ಭಿಕ್ಷೆನೀಡು
ಅಶನಾರ್ಥಿ ಟೊಣಪನಿದ್ದರೆ ದೂರ ಮಾಡು
ಹಸಿವೆ ಚೆನ್ನಾಗಿ ಇದ್ದರೆ ಊಟ ಮಾಡು
ಹಸಿಯು ಸಾಕಷ್ಟು ಇದ್ದರೆ ಬಿತ್ತಿನೋಡು ೪೩

ಷುದ್ಧ ಆಚರಣೆಯಿದ್ದರೆ ಮಾತನಾಡು
ಬುದ್ಧಿ ಬಲು ಚುರುಕು ಇದ್ದರೆ ವಾದ ಮಡು

ದುಡ್ಡು ರಗಡಿದ್ದರೆ ಘಡಾಮೋಡ ಮಾಡು
ಜಡ್ಡು ಇದ್ದರೆ ಪಥ್ಯದುಪವಾಸ ಮಾಡು ೪೪

ಹಾಳುಹರಟೆಯ ಬಿಟ್ಟು ಶ್ರೀ ಹರಿಯ ಸ್ಮರಿಸು
ಕಾಲುವನು ನೋಡಿ ಸತ್ಕರ್ಮ ಆಚರಿಸು
ನಾಳೆ ಮಾಡುವೆನೆಂಬ ಮಾತು ದೂರಿರಿಸು
ನಾಳೆ ಮಾಡುವ ಧರ್ಮ ಇಂದು ನೀ ಮುಗಿಸು ೪೫

ಮನ ಮುಟ್ಟಿ ಸ್ಮರಣೆ ಸಂತತ ಮಾಡಬೇಕು
ಮನಸು ಓಡಲು ಮತ್ತೆ ಜಗ್ಗಿ ತರಬೇಕು
ಅನುಭವವು ಬಂದಂತೆ ಮನಸು ಕರಗುವದು
ಮನಸು ಕರಗಿದರೆ ವಾಸನೆಯು ಅಳಿಯುವದು ೪೬

ಎಲ್ಲ ಕಡೆಯಲಿ ಇರುವನೊಬ್ಬನೇ ದೇವ
ಎಲ್ಲ ನಾಮಗಳಿಂದಲೂ ಕರೆಸಿಕೊಳುವಾ
ಯಾವ ಬೇಕಾದ ಹೆಸರಿನ ದೇವರನ್ನು
ಭಕ್ತಿಯಿಂ ಭಜಿಸಿದರೆ ಬಂದು ಪೊರೆಯುವನು ೪೭

ಧನಕನಕದಾಶೆಯನು ತೊರೆದವನು ಸಂತ
ವನಿತೆಯರ ಬಲೆಯೊಳಗೆ ಸಿಗದವನು ಸಂತ
ಮನದಿ ಮಹಾದೇವನನು ಕಂಡವನು ಸಂತ
ಜನರೊಳು ಜನಾರ್ಧನನ ನೋಡುವನು ಸಂತ ೪೮

ಘೋರ ಯುದ್ಧದಿ ನರನ ರಥವ ನಡೆಸಿಹನು
ಸೀರೆಯಾಗುತ ಸತಿಯ ಮಾನ ಉಳಿಸಿದನು
ನೀರಿನವನಾಗಿ ಎಂಜಲವ ಬಳಿದಿಹನು
ಪರಮ ಪುರುಷನ ಕರುಣೆಗೆಣೆಯು ಉಂಟೇನು ೪೯

ಹೃದಯ ದೊಳಗಿದ್ದ ಶ್ರೀಹರಿಯ ಮರೇತು
ಕಡುದ್ವೈನ್ಯ ಬಿಡಬೇಡ ವಿಷಯದೊಳು ಬೆರೆತು

ಕಾಮಧೇನುವಿನ ಕೆಚ್ಚಲೊಳಿದ್ದ ನೀನು
ಅಮೃತವನು ಬಿಟ್ಟು ರತ್ನವನು ಕುಡಿವೆಯೇನು ೫೦

ಸರ್ವ ದುಃಖಗಳು ನಿರ್ಮೂಲವಾಗುವದು
ಸಂಸಾರ ಪರಮಾರ್ಥ ಕೂಡಿ ನಡೆಯುವವು
ಪ್ರಭು ರಾಮಚಂದ್ರನ ಪ್ರಸಾದ ಮಹಿಮೆಯನು
ಪಠಿಸಿ ಆಚರಿಸಿದರೆ ಸುಖದಿ ಬಾಳುವನು ೫೧

ಜಯಜಯತು ಆರ್ಯ ಭೂಮತೆ ವಿಖ್ಯಾತೆ
ಜಯತು ಭಾರತಮಾತೆ ಸರ್ವಜನ ತ್ರಾತೆ
ಜಯಜಯತು ಜಯಹಿಂದ ಜನನಿ ಕಡು ಕರುಣಿ
ಜಯ ಜಯತು ಸರ್ವ ಸಂಸ್ಕೃತಿಯ ಮುಕುಟಮಣಿ ೫೨

ಅತಿಥಿ ಬಂದರೆ ಮನ ದೊಡ್ಡದಿರಲಿ
ಒಣಹೆಮ್ಮೆ ಬೇಡ ಆದರದ ಮಾತಿರಲಿ
ಮಾತು ಕೃತಿ ನಿಜ ಪ್ರೇಮ ತುಂಬಿರಲಿ
ಊಟ ಉಪಚಾರದಿಂದ ಸಂತೋಷಗೊಳಲಿ ೫೩

ಗುಡಿಯೇಕೆ ಬೇಕು ಮನದೊಳಗೆ ಹರಿಯುಂಟು
ಅದರ ಕದ ತೆಗೆಯ ಪ್ರತಿಬಂಧವೇನುಂಟು
ಗುಡಿಯೊಳಗೆ ಹೊಗಿಸಬೇಕೆಂಬುವುದು ಛಲವು
ಛಲ ವಿದ್ದರೇನದಕೆ ಆಧ್ಯಾತ್ಮ ಬೆಲೆಯು ೫೪

ಮನ ಪವಿತ್ರವಿದ್ದರೆ ದೇವ ಒಲಿವಾ
ಮನಸು ಅಪವಿತ್ರವಿದ್ದರೆ ದೇವ ಕುದಿವಾ
ಮನ ಸುಪ್ರಸನ್ನವಿದ್ದರೆ ದೇವ ಒಲಿವಾ
ಮನಸು ಧುಸುಮುಸು ಇದ್ದರೆ ದೇವ ಕುದಿವಾ ೫೫

ಮನಸು ನಿರ್ಭಯವಿದ್ದರಾ ದೇವ ಒಲಿವಾ
ಮನಸು ನಿರ್ಮಲವಿದ್ದರಾ ದೇವ ಒಲಿವಾ

ಮನಸು ನಿರಹಂಕಾರವಾದಾಗ ಬರುವಾ
ಮನಸು ನಿಷ್ಕಪಟವಾದರೆ ಬಂದು ಪೊರೆವಾ ೫೬

ಅನ್ಯರಿಗೆ ನಿನ್ನ ಭಾರವ ಹಾಕಬೇಡ
ನಿನ್ನ ಯೋಗ್ಯತೆಮೀರಿ ಭಾರ ಹೊರಬೇಡ
ನಿನ್ನ ಮನೆತನದ ಜಗಳ ಬೈಲಿಗಿಡಬೇಡ
ಹೆಣ್ಣು ಮಕ್ಕಳ ಮೇಲೆ ಕೈ-ಎತ್ತಬೇಡ ೫೭

ನಿನ್ನ ಹಿರಿಮೆಯನು ನೀ ಹೇಳಬೇಡ
ಅನ್ಯರನು ಕೀಳೆಣಿಸಿ ಮಾತಾಡಬೇಡ
ಕಣ್ಮುಚ್ಚಿ ಇನ್ನೊಬ್ಬರನುಕರಣೆ ಬೇಡ
ನಿನ್ನ ಸಂಸ್ಕೃತಿಯ ವೈಶಿಷ್ಟ್ಯ ಬಿಡಬೇಡ ೫೮

ಸುವಿಚಾರದಿಂದ ಧ್ಯೇಯವ ಗೊತ್ತುಪಡಿಸು
ಗೊತ್ತುಪಡಿಸಿದ ಧ್ಯೇಯವನ್ನು ನಿತ್ಯಸ್ಮರಿಸು
ಮುಟ್ಟಲಾ ಧ್ಯೇಯವನು ಶಕ್ತಿ ಸಂಗ್ರಹಿಸು
ಶಕ್ತಿಯನು ಚಾತುರ್ಯದಿಂದ ನೀ ಬಳಿಸು ೫೯

ಸಮಯ ಪ್ರತಿಕೂಲವಿರೆ ವೈರಿಗಳ ನಮಿಸು
ನಮಿಸಿ ಒಳಹೊಕ್ಕವರ ಬಲವ ಹದಗೆಡಿಸು
ಶ್ರಮಪಟ್ಟು ಅಮಿತಬಲ ಗುಪಿತದಿಂ ಬೆಳಿಸು
ಸಮಯ ಸಾಧಿಸಿ ದುಷ್ಟಜನರನು ಸಂಹರಿಸು ೬೦

ದೇಹದೊಳು ನೀನುಂಟು ದೇಹ ನೀನಲ್ಲ
ನಾ ಎಂಬ ಜ್ಞಾನ ನಿನಗುಂಟು ಆದಕಿಲ್ಲ
ನೀನು ಈ ದೇಹದಿಂದ ಹೊರಬೀಳಲಾಗ
ಹೆಣವೆಂದು ಕರೆಯುವರು ದೇಹವನು ಬೇಗ ೬೧

ಹುಟ್ಟುವವ ನೀನಲ್ಲ ಹುಟ್ಟುವದು ದೇಹ
ಬೆಳೆಯುವವ ನೀನಲ್ಲ ಬೆಳೆಯುವದು ದೇಹ

ಸಾಯುವವ ನೀನಲ್ಲ ಸಾಯುವದು ದೇಹ
ರೂಢಿಯೊಳು ನಿನಗಿದನು ಹಚ್ಚುವದು ಮೋಹ ೬೨

ಖೋಡಿ ಮನವನು ಹಿಡಿದು ಸಾಧು ಮಡುವದು
ಸಾಧು ಮಾಡುತ ನಾಮ – ಘೋಷ ಹಚ್ಚುವದು
ಓಡಿ ಹೋಗಲು ಮತ್ತೆ ಎಳೆದೆಳೆದು ತಂದು
ಬೋಧಿಸುತ ನಾಮ ಜಪದೊಳು ಸೇರಿಸೆಂದು ೬೩

ಒಮ್ಮೆ ಹರಿನಾಮದೊಳು ಮನಸು ಸೇರಿದರೆ
ಅದಕೆ ಆಗುವ ಸುಖವು ಆ ರುಚಿಯು ಬೇರೆ
ಆ ರುಚಿಯ ಆ ಸುಖವು ಹತ್ತಿದರೆ ಮನಕೆ
ತಿರುಗಿ ಎಂದಿಗೂ ಅದು ಹೋಗದದು ವಿಷಯಸುಖಕೆ ೬೪

ಚಿತ್ತ ಸ್ಥಿರವಿಲ್ಲದಿರೆ ಬುದ್ಧಿ ಸ್ಥಿರವಿಲ್ಲ
ಬುದ್ಧಿ ಸ್ಥಿರವಿಲ್ಲದಿರೆ ಭಾವನೆಯು ಇಲ್ಲ
ಭಾವನೆಯು ಇಲ್ಲದಿದ್ದರೆ ಶಾಂತಿಯಿಲ್ಲ
ಶಾಂತಿಯೇ ಇಲ್ಲದವ ಸುಖವೇನು ಬಲ್ಲ ೬೫

ಅನುಕೂಲ ಮತ ಮಾತ್ರ ನೀ ಎಣಿಸಬೇಡ
ಪ್ರತಿಕೂಲ ಮತ ಉಪೇಕ್ಷೆಯ ಮಾಡಬೇಡ
ಅನುಕೂಲ ಪ್ರತಿಕೂಲಗಳನು ತಿಳಿ ತಿಳಿದು
ಏನಾದರೊಂದು ಸಾಹಸ ಕಾರ್ಯ ಮಾಡು ೬೬

ಉದ್ಯೋಗದೊಳು ಸದಾ ಆನಂದ ಉಂಟು
ಉದ್ಯೋಗದೊಳಗೆ ಲಕ್ಷ್ಮಿಯ ವಾಸವುಂಟು
ಉದ್ಯೋಗವನು ಮಾಡಿ ದೇವರನು ಬೇಡು
ಉದ್ಯೋಗ ಬಿಟ್ಟು ಕುಳಿತರೆ ನಿನಗೆ ಕೇಡು ೬೭

ದೀರ್ಘ ಯೋಚನೆಯ ಮಾಡುತ ನೀ ಕೂಡಬೇಡ
ಯೋಗ್ಯ ಮುಂಬೆಳಕು ಇಲ್ಲದೆ ಧುಮುಕಬೇಡ

ಹಿಗ್ಗಿ ಮೈಮರೆಯದಿರು ದೈವ ತೆರೆದಾಗ
ಕುಗ್ಗಿ ಎದೆ ಒಡೆಯದಿರು ವಿಧಿ ಕಾಡುವಾಗ ೬೮

ದೈವವನಕೂಲವಿದ್ದಾಗ ಎಚ್ಚರಿಕೆ
ಗರ್ವ ಸೇರುವದು ತಿಳಿಯದಲೆ ಎಚ್ಚರಿಕೆ
ಗರ್ವದಿ ಸ್ಮೃತಿಗೆ ಸಮ್ಮೋಹವೆಚ್ಚರಿಕೆ
ಸಮ್ಮೋಹದಿಂದ ಸರ್ವನಾಶ ಎಚ್ಚರಿಕೆ ೬೯

ದೈವ ಯತ್ನಗಳ ಗತಿ ಗಹನವಾಗಿಹುದು
ಒಬ್ಬೊಬ್ಬರನುಭವವು ಒಂದೊಂದು ಇಹುದು
ವಾದದಿಂ ಬಗೆಹರಿಯದಂಥ ವಿಷಯವಿದು
ಇದರ ಹದ ತಿಳಿದು ಯತ್ನವಂ ಮಾಡುವದು ೭೦

ಜೋಲು ಮೋರೆಯ ಹಾಕಿ ನೀ ಕೂಡಬೇಡ
ಕಾಲು ಅಪ್ಪಳಿಸಿ ಕೆಲಸಕೆ ಹತ್ತಬೇಡ
ಸ್ಟೈಲು ಉಡುಗೆಯ ಉಟ್ಟುಕೊಂಡೋಡಬೇಡ
ಮೈಲಿಗೆಯ ಮನದಿಂದ ಜಪ–ಮಾಡಬೇಡ ೭೧

ಕಾರ್ಯ ಮಾಡುವ ಜನಕೆ ಮರ್ಯಾದೆ ಮಡು
ಬಾಯಬಡುಕ ಜನರ ಕೃತಿಯನು ತಿಳಿದು ನೋಡು
ಧೈರ್ಯದಿಂ ದುರ್ಜನರ ಕೂಡ ಹೋರಾಡು
ಆರ್ಯ ಸಂಸ್ಕೃತಿಯ ಸಂರಕ್ಷಣೆಯ ಮಾತು ೭೨

ಗುಣ ಕರ್ಮಗಳ ನೋಡಿ ಮಾನವನು ಮಾಡು
ಒಣ ಜನ್ಮ ಜಾತಿ ತುಸು ದುರ್ಲಕ್ಷ ಮಾಡು
ಗುಣ ಕರ್ಮದಿಂದ ಅತಿ ನೀಚನಾದವನು
ಜನುಮ ಮಾತ್ರದಿ ಹೇಗೆ ಶ್ರೇಷ್ಠನಾಗುವನು ೭೩

ತಪ್ಪು ಇಲ್ಲದೆ ಕ್ಷಮೆಯ ಬೇಡುವವ ಮೂರ್ಖ
ತಪ್ಪಿದರು ಒಪ್ಪಿದವನು ಕಡುಮೂರ್ಖ

ತಪ್ಪು ಆಗುವದು ಮಾನವನ ಸಹಜಗುಣ
ತಪ್ಪು ಒಪ್ಪುತ ತಿದ್ದಿಕೊಳ್ಳುವದು ಸುಗುಣ ೭೪

ನಿನ್ನ ಬಂಧುಗಳೆ ನಿನಗಾಗುವರು ಕೊನರೆಗೆ
ಅನ್ಯರಿಗೆ ಆ ಕರುಳು ಬರುವದು ಹೇಗೆ
ನಿನ್ನ ಬಂಧುಗಳೆಲ್ಲ ಮೂರ್ಖರೆನಬೇಡ
ಅನ್ಯರಿಂದ ನೀ ಮೂರ್ಖನೆನಿಸಿಕೊಳಬೇಡ ೭೫

ಜನರ ಮನೆಗಳು ಬಹಳ ದಿವಸ ಇರಬೇಡ
ಇರುವದೇ ಆದರವರಿಗೆ ಭಾರ ಬೇಡ
ಅರಿತವರ ಕೆಲಸಗಳ ಮನೆಯಂತೆಮಡು
ಗೃಹದ ರೀತಿರಿವಾಜು ಕೆಡದಂತೆ ನೋಡು ೭೬

ದುಡ್ಡು ಇದ್ದಾಗ ಎಲ್ಲರ ಪ್ರೀತಿಯುಂಟು
ದುಡ್ಡು ಕಳಕೊಂಡು ಹೋದರೆ ಮೋರೆಗಂಟು
ದುಡ್ಡಿನಿಂದಲೆ ಜನರ ಬೆಲೆ ಕಟ್ಟಬೇಡ
ದೊಡ್ಡ ಗುಣಗಳನರಿತು ನಮಿಸದಿರಬೇಡ ೭೭

ಧನದ ವಿಷಯದಿ ಖಂಡ ತುಂಡ ಇರಬೇಕು
ಮನಬಿಚ್ಚಿ ಮೊದಲಿಗೆ ಮಾತಾಡಬೇಕು
ಒಣ ಮಬ್ಬುತನ ಮನದಮಂಡಿಗೆಯು ಬೇಡ
ಕೊನೆಗೆ ಗುಣಗುಟ್ಟುತಲಿ ಹಳಹಳಿಸಬೇಡ ೭೮

ಯಂತ್ರಮಯ ಜೀವನದ ಯುಗವು ನಡೆದಿಹುದು
ಸ್ವಾತಂತ್ರ್ಯವೆಲ್ಲಿ ಬಡವರಿಗೆ ಉಳಿದಿಹುದು
ದ್ರವ್ಯಮಯವಾದ ವ್ಯವಹರ ಸಾಗಿಹುದು
ದೇವ ಧರ್ಮಕೆ ಅರ್ಧಚಂದ್ರ ಬಂದಿಹುದು ೭೯

ತಾಯ್ತನದ ಸುಖಕೆ ಸರಿಯಾದ ಸುಖವಿಲ್ಲ
ತಾಯ್ತನದ ಕರುಳಿಂಗೆ ಬೆಲೆಯಂಬುದಿಲ್ಲ

ತಾಯಿಗಿಂದಧಿಕ ದೈವತವು ಬೇರಿಲ್ಲ
ತಾಯ್ – ಸೇವೆಗಿಂದಧಿಕ ಪುಣ್ಯಾವೆ ಇಲ್ಲ ೮೦

ಚನ್ನಾಗಿ ಸಂಸಾರ ಮಾಡಬಲ್ಲವನು
ಸುಲಭದಿಂ ಪರಮಾರ್ಥವನು ಸಾಧಿಸುವನು
ಸಂಸಾರದೊಳಗಿದ್ದು ಸನ್ಯಾಸಿಯೆನಿಸು
ಸನ್ಯಾಸಿಯಾಗಿ ಸಂಸಾರದೊಳು ಈಸು ೮೧

ಮನೆಯಲ್ಲಿಯೇ ಸ್ವರ್ಗ ಮನೆಯಲ್ಲಿಯೇ ನರಕ
ಜಾಣರಿಗೆ ತಿಳಿಯುವದು ನೋಡಿದರೆ ಗಮಕ
ಜಾಣ ಪ್ರೇಮಳ ಪತಿಯಮನೆ ಸತಿಗೆ ಸ್ವರ್ಗ
ಕೋಣ ಕರ್ದಮ ಕಟುಕ ಪತಿಯಿರಲು ನರಕ ೮೨

ಪತಿಯ ಮನ ಒಲಿಸಿ ಕೋತಿಯ ತೆರದಿ ಕುಣಿಸಿ
ಅತ್ತೆ ಮಾವರು ಬಂಧುಬಳಗವನು ಹೊರನುಗಿಸಿ
ಸ್ವೇಚ್ಛೆಯಿಂ ಎದೆಮೆಟ್ಟಿ ಬೇರಿರುವ ಸೊಸೆ
ಸೊಸೆಯಲ್ಲ ರಕ್ಕಸಿಯು ಕಿವಿಹೊಕ್ಕ ತೊಣಸಿ ೮೩

ಸರ್ವದಾ ಸತ್ವಗುಣಿ ಶಾಂತ ನಿರುತಿಹನು
ರಾಜಸನ ಶಾಂತಿಯಿಂ ಧಡಪಡಿಸುತಿಹನು
ಕಿರಿಕಿರಿಯು ತಾಮಸಿಗೆ ಬಿಟ್ಟುರುವದಿಲ್ಲಾ
ತ್ರಿಗುಣಗಳ ದಾಟದಿದ್ದರೆ ಮೋಕ್ಷವಿಲ್ಲಾ ೮೪

ಅನ್ನದೊಳು ಮುಖ್ಯ ಸಾತ್ವಿಕ ಗುಣವು ಬೇಕು
ಸಂಪಾದನೆಯ ಮಾರ್ಗ ಸರಳವಿರಬೇಕು
ಸಂಸರ್ಗ ಸಂಸ್ಕಾರ ಸುಷ್ಟವಿರಬೇಕು
ಸಾತ್ವಿಕಾನಂದ ಮನದಿಂದ ಉಣಬೇಕು ೮೫

ಮೂಲ ಮನವಿಹುದು ಮೂರರೊಳೊಂದು ಪಾಲು
ಸನ್ನಿವೇಶಗಳಿಂದ ಮತ್ತೊಂದು ಪಾಲು

ತಿನ್ನುವಾ ಅನ್ನದಿಂದ ಉಳಿದೊಂದು ಪಾಲು
ಮೂರು ಕೂಡಿದ ಮನವೆ ನಿನಗೆ ಹರಿಗೋಲು ೮೬

ಪ್ರಾರಬ್ಧವನುಭವಿಸಿ ತೀರಿಸಲು ಬೇಕು
ಅಪರೋಕ್ಷದಿಂದ ಸಂಚಿತ ಕಳಿಯಬೇಕು
ಸರ್ವದಾ ನಿರಪೇಕ್ಷ ಸತ್ಕರ್ಮ ಬೇಕು
ನಿರಭಿಮಾನದಿ ಕರ್ಮದ ಬೀಜ ಸುಡಬೇಕು ೮೭

ದಯೆಯು ಧರ್ಮದಮೂಲ ದಯವಂತನಾಗು
ಭಯವು ದುಃಖದಮೂಲ ನಿರ್ಭಯನು ಆಗು
ಲೋಭ ಪಾಪದ ಮೂಲ ನಿರ್ಲೋಭಿಯಾಗು
ತ್ಯಾಗ ಪುಣ್ಯದ ಮೂಲ ತ್ಯಾಗಿ ನೀನಾಗು ೮೮

ನಿನ್ನ ಉದ್ಧಾರವನು ನೀ ಮೊದಲ ಮಾಡು
ಮನೆತನದ ಉನ್ನತಿಯಕಡೆಗೆ ನೀ ನೋಡು
ನಿನ್ನ ನೆರೆಹೊರೆ ಜನರ ಕಲ್ಯಾಣಮಾಡು
ಆಮೇಲೆ ವಿಶ್ವದದ್ಧಾರ ಮಾತಾಡು ೮೯

ಹಳೆಯದಿದ್ದರೆ ಎಲ್ಲ ಒಳಿತು ಎನಬೇಡ
ಹೊಸದೆಂಬ ಮಾತ್ರದಿಂದಲೆ ಹಳಿಯಬೇಡ
ಒಳಿತು ಕೆಡಕುಗಳು ಎಲ್ಲದರಲ್ಲಿ ಇಹವು
ತಿಳಿದು ಉಪಯೋಗಿಸಿದರದು ಜಾಣತನವು ೯೦

ಕಾಲಮಹಿಮೆಯ ಕಷ್ಟ ಬಂದಿತೆನಬೇಡ
ಕಾಲಕ್ಕೆ ಹೆಚ್ಚಿನ ಮಹತ್ವ ಕೊಡಬೇಡ
ಕಾಲ ನಿರ್ಮಾಣ ಹಿರಿಯರ ಕೈಯ್ಯೊಳಿಹುದು
ಎಂಥ ಹಿರಿಯರು ಅಂಥ ಕಾಲ ಬರುತಿಹುದು ೯೧

ಹಿರಿಯರಾಚರಣೆಯಿಂ ಮನೆತನದ ಬೆಳಕು
ಹಿರಿಯರಾಚರಣೆಯಿಂ ಮನೆತನಕೆ ಹುಳುಕು

ಹಿರಿಯರೇ ಕಾರಣರು ಮನೆಯ ಸುಸ್ಥಿತಿಗೆ
ಹಿರಿಯರೇ ಕಾರಣರು ಮನೆಯ ದುಸ್ಥಿತಿಗೆ ೯೨

ದೇಹವೇ ರಥವು ಸಾರಥಿಯು ಪರಮಾತ್ಮ
ಜೀವ ಅರ್ಜುನ ಧರ್ಮ ಸಮ್ಮೂಢ ಆತ್ಮ
ಸರ್ವ ಭಾವದಿ ಶರಣುಹೊಗು ಸಾರಥಿಗೆ
ಸಾರಥಿಯು ಮುಟ್ಟಿಸುವ ನಿನ್ನ ಸದ್ಗತಿಗೆ ೯೩

ಜ್ಞಾನಪೂರ್ವಕ ವಿಹಿತ ಕರ್ಮಗಳ ಮಾಡು
ಚಿತ್ತಶುದ್ಧಿಗೆ ಕರ್ಮಸಾಧನವು ನೋಡು
ಉದ್ದೇಶ ಪರಿಣಾಮಗಳ ತೂಕ ಮಾಡು
ಮೂಢತನ ರೂಢಿಗಳನರಿತು ಬಿಟ್ಟುಬಿಡು ೯೪

ಬಾಲಭಾವದಿ ದೇವರೊಳು ಹಟವಮಾಡು
ಬಾಲಭಾವದಿ ದೇವರೊಳು ಮಮತೆಮಾಡು
ಬಾಲಭಾವದಿ ದೇವರಿಗೆ ಬೇಡಿಕಾಡು
ಬಾಲಭಾವದಿ ನಿನ್ನ ಸರ್ವಸ್ವ ನೀಡು ೯೫

ಮಾತೃಭಾವದಿ ಅವನ ತೊಡೆಯ ಮೇಲಾಡು
ಮಾತೃಭಾವದಿ ನೀನು ವಾತ್ಸಲ್ಯ ಮಾಡು
ಮತೃಭಾವದಿ ತೂಗಿ ತೊಟ್ಟಿ ಮುದ್ದಾಡು
ಮಾತೃಭಾವದಿ ಬಿದ್ದು ಕಿರಿಕಿರಿಯಮಾಡು ೯೬

ಸಖ್ಯಭಾವದಿ ಹಾಲು ಮೊಸರೆರೆಯ ಬೇಕು
ಸಖ್ಯಭಾವದಿ ಬೆಣ್ಣೆ ಬಾಯ್ತುಂಬ ಬೇಕು
ಸಖ್ಯಭಾವದಿ ಕೊಳಲಿನೊಳು ಕುಣಿಯಬೇಕು
ಸಖನೆಂದು ಗೋಪಿಯಂದದಿ ಕುಣಿಸಬೇಕು ೯೭

ನಿನ್ನೊಳಗೆ ಆತನನು ನೀ ನೋಡಬೇಕು
ಅವನೊಳಗೆ ಸರ್ವವನು ನೀ ಕಾಣಬೇಕು

ತನ್ನತನ ಮರೆತು ಅವನೊಳು ಬೆರೆಯಬೇಕು
ಅವನ ಸೂತ್ರದ ಬೊಂಬೆ ನೀನಾಗಬೇಕು ೯೮

ಮೀನನಾದರೆ ಅವನ ಕಣ್ಣು ನೀನಾಗು
ಕೂರ್ಮನಾದಾಗವನ ಬೆನ್ನು ನೀನಾಗು
ವರಾಹರೂಪದ ಹರಿಯ ಕೋರೆ ನೀನಾಗು
ನರಹರಿಗೆ ನೀ ಹದನವಾದ ನಖವಾಗು ೧೦೦

ವಟುವಾಮನಗೆ ಪಾದರಕ್ಷೆ ನೀನಾಗು
ದುಷ್ಟ ಸಂಹಾರಕನ ಪರಶು ನೀನಾಗು
ಅಟವಿವಾಸಗೆ ಬಿಲ್ಲುಬಾಣ ನೀನಾಗು
ದಿಟ್ಟ ಗೊಲ್ಲನ ಕರೆದ ಕೊಳಲು ನೀ ನಾಗು ೧೦೧

ಬುದ್ಧನಾದರೆ ಬುದ್ಧಿವಂತ ನೀನಾಗು
ಕಲ್ಕಿಯಾದರೆ ಚಲುವ ಕುದುರೆ ನೀನಾಗು
ಎಲ್ಲಿದ್ದರೂ ಅವನ ನೆರಳು ನೀನಾಗು
ಪ್ರಹ್ಲಾದ ಧ್ರುವ ಅಂಬರೀಷ ನೀನಾಗು ೧೦೨

ಧನದೊಳಗೆ ಧನ ತಪೋಧನನು ನೀನಾಗು
ಭಾಗ್ಯದೊಳು ವೈರಾಗ್ಯ ಭಾಗ್ಯವಂತನಾಗು
ಇಂದ್ರಿಯಂಗಳ ಜಯದಿ ನೀ ಶೂರನಾಗು
ಪಂಡಿತನು ತತ್ವದಾಚರಣೆಯೊಳು ಆಗು ೧೦೩

ಸ್ವಾತಂತ್ರವೇ ಸ್ವರ್ಗ ಪರತಂತ್ರ ನರಕ
ಮಾತೃಭೂಮಿಯ ಸೇವೆ ಮಡದವ ಶುನಕ
ಪತಿತರುದ್ಧಾರ ಮಾಡುವದು ಸದ್ಧರ್ಮ
ಪತಿತರನು ತುಳಿಯುವದು ಸೈತಾನಕರ್ಮ ೧೦೪

ಸಂಸಾರ ಸಾಗರವ ದಾಟಿಸಲು ದೇವ
ದೇಹವೆಂಬುವ ನೌಕೆ ನಿನಗೆ ಕೊಟ್ಟಿರುವಾ

ಅಂಬಿಗನು ತಾನು ಸುಕ್ಕಾಣಿ ಹಿಡಿದಿರುವ
ನಂಬುತಲಿ ಹುಟ್ಟು ಹಾಕಿದರೆ ದಾಟಿಸುವ ೧೦೫

ಪರಮ ಪುರುಷನು ಪ್ರೇರಿಸಿದ ಪ್ರಸಾದವನು
ಹರುಷದಿಂದ ಪಠಿಸಿ ಜೀರ್ಣಿಸುವ ಮಾನವನು
ಸರಸಾಗಿ ಸುಖದಿ ಸಂಸಾರ ಮಾಡುವನು
ಪರಮ ಪುರುಷಾರ್ಥ ಸುಲಭದಿ ಸಾಧಿಸುವನು ೧೦೬

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಅಂಕಿತನಾಮಸೂಚಿ

೪. ಕೀರ್ತನೆಗಳ ಅಕಾರಾದಿ ಸೂಚಿ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

ಅಂಘ್ರಿ - ಕಾಲು, ಹೆಜ್ಜೆ
ಅಂಬರಮಣಿ - ಸೂರ್ಯ
ಅರ್ಕ - ಸೂರ್ಯ
ಅಗಜೆ - ಪಾರ್ವತಿ
ಅಜಿತಪೀಠಪುರ- ಉಡುಪಿ
ಅಣು - ಅತ್ಯಂತ ಸೂಕ್ಷ್ಮವಸ್ತು, ಶಿವ
ಅರ್ಣವ - ಸಮುದ್ರ
ಅಚಿಂತ್ಯ - ಚಿಂತಿಸಲಾಗದ, ಕಲ್ಪನೆಗೆ ಮೀರಿದ
ಅನಲ - ಬೆಂಕಿ
ಅನಿಮಿಷ - ದೇವತೆ, ಮೀನು
ಅನೃತ - ಸುಳ್ಳು
ಅರವಿದೂರ - ಪರಿಪೂರ್ಣನಾದವ ದೋಷರಹಿತ
ಅಲವಬೋಧರು- ಮಧ್ವಾಚಾರ್ಯರು (ಅತಿರೋಹಿತರು)
ಆತ್ಮಜ - ಮಗ
ಆರುಮೂರರದ್ವಾರ -ನವರಂಧ್ರಗಳು
ಅಷ್ಟಾಂಗಗಳು - ಎಂಟು ಅಂಗಗಳು
ಅಕ್ಷಿ - ಕಣ್ಣು
ಆರು ಮೊಗದವ -ಷಣ್ಮುಖ
ಆರು ವೈರಿಗಳು- ಅರಿಷಡ್ವರ್ಗಗಳು (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ

ಆರೆರಡು ಪೆಸರು-ಹನ್ನೆರಡು ಹೆಸರು
ಆಲು - ನೀರನ್ನು ಇಡುವ ಸಣ್ಣಪಾತ್ರೆ, ಹೂಜಿ
ಆಲುಕ - ಆದಿಶೇಷ
ಆಲುಪಾಲಕ - ಹರಿಗೋಲನ್ನು ಕಾಯುವವ
ಆವಲ್ಯ - ತಾವರೆ ಜಾತಿಯ ಹೂ
ಆವು - ಹಸು
ಆಹತಿ - ಹೊಡೆತ, ಪೆಟ್ಟು
ಇಂದುಕುಲಾಧಿಪ-ಚಂದ್ರವಂಶಕ್ಕೆ ಒಡೆಯ
ಇಟ್ಟಳಿ - ರಾಶಿ, ಗುಂಪು, ಸಮೂಹ
ಇನ - ಸೂರ್ಯ
ಇಭಮುಖ - ಗಣೇಶ
ಈರಡಿ - ಎರಡು ಪಾದ
ಉಡು - ತಾರೆ, ನಕ್ಷತ್ರ
ಉತ್ತ - ನಡುವಣ ಸ್ಥಳ, ಮಧ್ಯಸ್ಥಳ
ಉದಧಿ - ಸಮುದ್ರ
ಎಚ್ಚು - ಬಾಣಬಿಡು

**ಕ**

ಕಂಗೋರಿ – ಗೋಡೆಯಲ್ಲಿ ಮಾಡಿದ ಕೆತ್ತನೆಯ ಅಥವಾ ಬಣ್ಣದ ಅಲಂಕಾರ
ಕಂಜಮಿತ್ರ – ಸೂರ್ಯ
ಕಂಜಜ – ಬ್ರಹ್ಮ
ಕಂಬುಕಂಧರ – ಶಂಖದ ಹಾಗಿರುವ ಕೊರಳು
ಕಂಸಾರಿ – ಕೃಷ್ಣ
ಕಂಸಾಳದ ರವ– ಕಂಚಿನ ದೊಡ್ಡ ತಾಳದ ಶಬ್ದ
ಕಟಿಹಾರ – ಟೊಂಕದ ಆಭರಣ
ಕಚ್ಛಪ – ಆಮೆ
ಕಠ್ಯಾಣಿ – ಶ್ರೇಷ್ಠವಾದದ್ದು, ಬಹು ಬೆಲೆಯುಳ್ಳದ್ದು
ಕಪರ್ದಿ – ಜಡೆಗಟ್ಟಿದ ಕೂದಲುಳ್ಳವ, ಶಿವ
ಕಪಿಲ – ಕೋತಿಯ ಬಣ್ಣವುಳ್ಳ, ನಸುಗೆಂಪು ಬಣ್ಣದ ಒಬ್ಬ ಋಷಿಯ ಹೆಸರು
ಕರವೀರಪುರ – ಕೊಲ್ಹಾಪುರ
ಕರಿಗೊರಳ – ಈಶ್ವರಿ, ಶಿವ
ಕಲಕ – ಬೆರಕೆ, ಮಿಶ್ರಣ
ಕಾಪ್ಯಪುರ – ಕಾಪು(ಉಡುಪಿ ಹತ್ತಿರದ ಒಂದು ಊರು)
ಕಾಯಜನಯ್ಯ– ವಿಷ್ಣು
ಕಾಯಾಸ – ಊಹೆ, ಅಂದಾಜು
ಕಾಸಾರ – ಕೊಳ
ಕಿಂಕರ – ಆಳು, ಸೇವಕ, ದಾಸ
ಕಿರಿಯಯ್ಯ – ಚಿಕ್ಕಪ್ಪ
ಕೀಟಕಾಂತಕ – ಕೀಟಲೆಗಾರನ ನಾಶ ಮಾಡಿದವ
ಕುಂಚಿಕೆ – ಕುಂಚ, ಬೀಗದ ಕೈ
ಕುಂಭಿಣಿ – ಭೂಮಿ
ಕುಮುದಮಿತ್ರ – ಚಂದ್ರ
ಕುಲಿಶ – ವಜ್ರಾಯುಧ
ಕೃಂತ – ತುಂಡುಮಾಡುವ ಸಾಧನ, ಕತ್ತರಿಸುವ ಸಲಕರಣೆ
ಕೃಪಣ – ತುಚ್ಛವಾದ, ಹೀನನಾದವ
ಕೇತಕಿ – ಕೇದಗೆ, ತಾಳೆ ಹೂ
ಕ್ಷೋಣಿ – ಭೂಮಿ

**ಗ**

ಗರಳ – ನಂಜು, ವಿಷ
ಗಾರುಮಾಡು – ಹಿಂಸಿಸು, ತೊಂದರೆಪಡಿಸು
ಗ್ರಾಸ – ನುಂಗುವುದು, ತುತ್ತು, ಕವಳ
ಗೇಹ – ಮನೆ

**ಘ**

ಘಟಣೆ – ಸೇರುವಿಕೆ, ಹೊಂದುವಿಕೆ, ಪ್ರಾಪ್ತಿ
ಘೋರಿಸು – ಕಷ್ಟಪಡಿಸು, ಸಂಕಟಕ್ಕೆ ಗುರಿಮಾಡು

**ಚ**

ಚಕ್ರಾಬ್ಧಿ ನಗರ – ಹಾನಗಲ್ಲು
ಚತುರಾನನ – ಬ್ರಹ್ಮ

ಚಾರು - ಚೆಲುವಾದ, ಸುಂದರವಾದ

ಚ್ಛವಿ - ಛವಿ, ಕಾಂತಿ, ಹೊಳಪು, ಶೋಭ

ಜ

ಜಗದುದರಧರ - ವಿಷ್ಣು

ಜಾಮಾತ - ಅಳಿಯ

ಜುಲುಪಿ ಕೇಶ - ಮುಂಗೂದಲು, ಮುಂಗುರುಳು

ತ

ತಪನ - ಕಾಯಿಸುವ, ಸುಡುವ

ತಮಂಧ - ಕಗ್ಗತ್ತಲೆ

ತಲೆಯೋಡು - ತಲೆಬುರುಡೆ

ತ್ರಯೀಜ್ಞಾನ - ಸಾತ್ವಿಕ, ರಾಜಸ, ತಾಮಸಗಳು

ತಾಪತ್ರಯ - ಆದಿದೈವಿಕ, ಆದಿಭೌತಿಕ ಆಧ್ಯಾತ್ಮಿಕ

ತ್ರೈತತ್ವ - ವೈಚಾರಿಕ, ತೈಜಸ, ತಾಮಸ(ರುದ್ರನಿಗೆ ಸಂಬಂಧಿಸಿದಂತೆ)

ತೊಗಲುಡುಗೆ - ಚರ್ಮದ ಉಡುಗೆ

ತೋಕರುವರ - ?

ತೋಯಜ - ಕಮಲ

ದ

ದಧಿ ಚೋರ - ಕೃಷ್ಣ

ದ್ವಾದಶ ತದಾತ್ಮ- ಹನ್ನೆರಡು ರೂಪ ಸ್ವರೂಪಗಳಲ್ಲಿ ಕಾಣಿಸುವವನು, ಸೂರ್ಯ

ದಿನಮಣಿ - ಸೂರ್ಯ

ದ್ವಿಪತುಂಡ - ಗಣಪತಿ

ದುಕೂಲ - ರೇಷ್ಮೆ ಬಟ್ಟೆ, ಪಟ್ಟೆ ವಸ್ತ್ರ

ದೇವತರು - ಕಲ್ಪವೃಕ್ಷ

ನ

ನಂದತನುಜ - ಕೃಷ್ಣ

ನಕ್ರ - ಮೊಸಳೆ

ನಗರಾಜ - ಪರ್ವತರಾಜ

ನರನಟನ - ಮನುಷ್ಯರಂತೆ ನಟಿಸುವವ

ನವವಿಧಭಕ್ತಿ - ಶ್ರವಣ, ಕೀರ್ತನ, ಸ್ಮರಣ,ಪಾದ ಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ ಎಂಬ ಒಂಬತ್ತು ವಿಧವಾದ ಭಕ್ತಿ.

ನಿಕರ - ಸಮೂಹ

ನೆಗಳು - ಕೈಗೊಳ್ಳು, ಪ್ರಸಿದ್ಧಿ

ಪ

ಪಂಚಕಷ್ಟ - (ಕ್ಲೇಶ)-ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ ಮತ್ತು ಅಭಿನಿವೇಶ ಎಂಬ ಐದು ಕಷ್ಟಗಳು

ಪಂಚಕೃಷ್ಣಾ - ರಯ್ಯ-?

ಪಂಚದ್ವಯಾನನ- ರಾವಣ

ಪಂಜಿಕೆ - ಪಂಚಾಂಗ, ವ್ಯಾಖ್ಯಾನ

ಪಂಚಪ್ರಾಣ - ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ವಾಯುಗಳು

ಪಂಚಭೂತ - ಭೂಮಿ, ನೀರು, ತೇಜಸ್ಸು, ವಾಯು ಮತ್ತು ಆಕಾಶ

ಪಂಚಮಹಾಪಾತಕ–ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ ಮತ್ತು ಇವುಗಳನ್ನು ಮಾಡಿದವರ ಸಂಸರ್ಗ.

ಪಂಚಮುದ್ರೆಗಳು– ಆವಾಹನೀ, ಸ್ಥಾಪನೀ,ಸನ್ನಿಧಾಪನಿ, ಸಂಬೋಧಿನೀ, ಸಂಮುಖ್ಯಿಕರಣೀ

ಪಂಚಾಗ್ನಿ - ಆವಸಥ್ಯ(ಪವನ), ವಾಪನ(ಸಭ್ಯ) ತ್ರೇತು(ದಕ್ಷಿಣಾಗ್ನಿ) ಗಾರ್ಹಪತ್ಯ ಆವಹನೀಯ

ಪಂಚಾನನ - ಸದ್ಯೋಜಾತ, ವಾಮದೇವ,ಅಘೋರ, ತತ್ಪುರುಷ ಮತ್ತು ಈಶಾನ ಎಂಬ ಹೆಸರುಳ್ಳ ಐದು ಮುಖವುಳ್ಳವನು ಶಿವ

ಪಂಚಶರಾ - ತಾವರೆ, ಅಶೋಕ, ಮಾವು, ಮಣ್ಣಗೆ ಮತ್ತು ನೈದಿಲೆಗಳೆಂಬ ಐದು ಹೂ ಬಾಣಗಳು ಪಠವಳಿ, ರೇಶ್ಮೆ, ಪೀತಾಂಬರ, ಪಟ್ಟೆಮಡಿ

ಪದುಮಜಾಂಡೋದರ - ವಿಷ್ಣು

ಪರಿವೃಢ - ಶ್ರೇಷ್ಠವಾದ, ಪ್ರಮುಖವಾದ

ಪರುಷಮಣಿ - ತನ್ನನ್ನು ಸೋಕಿದ ಇತರ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವ ಮಣಿ

ಪಾತಕಿ - ಪಾಪಿ

ಪಾಲಾಬ್ಧಿ - ಹಾಲಿನ ಸಮುದ್ರ

ಪಾಶ ಪಾಹಿ - ವರುಣ, ಯಮ

ಪೋರ ಪಟು - ಬಾಲಕೃಷ್ಣ

ಪೋರಿ - ತುಂಟ ಹುಡುಗಿ, ಬಾಲಕಿ

ಫಲ್ಗುಣಸಖ - ಕೃಷ್ಣ

ಬ

ಬಟ್ಟೆ - ದಾರಿ

ಬಿಸಜ ಭವಾಂಡ –?

ಬುಧ ಚಕೋರ ತತ್ವ–?

ಬೃಂದಾರಕ - ಸ್ವರ್ಗದ, ದೇವಲೋಕಕ್ಕೆ ಸೇರಿದ

ಭ

ಭಾಸಿತಾಕ್ಷಿ - ಹೊಳೆಯುವ ಕಣ್ಣುಳ್ಳವಳು

ಭ್ರೂಲತೆ - ಹುಬ್ಬು

ಭೃಂಗಾರಕ - ನೀಲಕುಂತಲ, ತುಂಬಿಯಂತೆ ಕಪ್ಪಾದ ಮುಂಗುರುಳು

ಮಂಡ - ಹಾಲಿನ ಕೆನೆ, ಅನ್ನಬಸಿದ ಗಂಜಿ

ಮಂದಜಭವ - ಬ್ರಹ್ಮ

ಮಚ್ಚ - ಮೀನು

ಮತಾಬ್ಧಿ - ಮತ ಎಂಬ ಸಮುದ್ರ

ಮರುದ್ವಾಕ್ಷ - ?

ಮಿಸುನಿ – ಚಿನ್ನ

ಮುನ್ನೀರಶಯ್ಯ – ವಿಷ್ಣು

ಮಾಣವಕ – ವಿದ್ಯಾರ್ಥಿ, ಶಿಷ್ಯ

ಮಾತುಳ – ಮಾವ

ಮಾತುಳಾಂತಕ – ಕೃಷ್ಣ(ಮಾವಕಂಸನನ್ನ ಕೊಂದವ)

ಮಾಯಿಗಳು – ಮಾಯಾವಾದಿಗಳು, ಅದ್ವೈತಿಗಳು

ಮಿಥ್ಯಾವಾದಿ – ಅದ್ವೈತಿ

ಮೂರವತಾರ – ಹನುಮ, ಭೀಮ, ಮಧ್ವರು

ಮೇಖಲಾ – ಡಾಬು

**ಲ**

ಲಾವಕ – ಕಡಿಯುವವನು

**ವ**

ವೃಷಕೇತುಪಿತ – ವಿಷ್ಣು

ವಕ್ತ್ರ – ಬಾಯಿ, ಮುಖ

ವನಚರ – ಬೇಡನು

ವಾರಿಜಾಂಬಕ – ಕಮಲನೇತ್ರ

ವರತಟೀ ದೇಶ – ?

ವರಧೂಸರ – ?

ವಾಕ್ಯಾರ್ಥ – ವಾಕ್ಯದ ತಾತ್ಪರ್ಯಾರ್ಥ

ವಾಕು – ಮಾತು

ವಾಜಿ – ಕುದುರೆ

ವಾರಿಜಭವಮುಖಿ – ಲಕ್ಷ್ಮೀ

ವಿದ್ರುಮ – ನವರತ್ನಗಳಲ್ಲಿ ಒಂದು, ಹವಳ

ವಿರಿಂಚಿ – ಬ್ರಹ್ಮ

ವಿರಿಂಚಿಪಿತ – ವಿಷ್ಣು

ವೃಷ್ಣಿ – ವೇದಾಧ್ಯಯನ ಮಾಡುವ ವಿದ್ಯಾರ್ಥಿಯ ಆಸನ, ದರ್ಭಾಸನ

ವ್ಯೋಮಾಂಗಣ – ಗಗನ, ಆಕಾಶ

**ಶ**

ಶರಧಿ – ಸಾಗರ

ಶ್ವಪಚ – ಚಂಡಾಲ

ಶ್ವಸನ – ವಾಯುದೇವರು, ಉಸಿರಾಟ, ಗಾಳಿ

ಶೀರಕಟಿ – ತೆಳ್ಳನೆಯ ನಡುವುಳ್ಳವಳು(ನು)

ಶೈವಲ – ಪಾಚಿ, ಹಾವಸೆ

ಶೋಣಿತಪುರ – ಮಂತ್ರಾಲಯ

ಶೌಂಡ – ಕುಡಿದ, ಮತ್ತೇರಿದ

**ಸ**

ಸದಮಲ – ಪವಿತ್ರವಾದ

ಸರ್ಪಸುತಪುರ – ಹಾವನೂರು

ಸಮೀರ – ಗಾಳಿ

ಸಲ್ಹಾದ – ಹಿರಣ್ಯಕಶಿಪುವಿನ ಇನ್ನೊಬ್ಬ ಮಗ

ಸ್ಯಂದ – ಹನಿಯುವಿಕೆ, ತೊಟ್ಟಿಕ್ಕುವಿಕೆ

ಸಾರಸಚ್ಛಾಸ್ತ್ರ – ಆರು ಶಾಸ್ತ್ರಗಳು

ಸುರಸರಿತೆ – ಗಂಗಾನದಿ

ಸೂರ್ಯಸುತ – ಕರ್ಣ,ಸುಗ್ರೀವ, ಶನಿ

ಸೂರಿ – ವಿದ್ವಾಂಸ

**ಹ**

ಹದುಳ – ಕ್ಷೇಮ

ಹರಿ – ಸಿಂಹ, ಕುದುರೆ

ಹವ್ಯವಾಹನ – ಅಗ್ನಿ

ಹಾಟಕಾಂಬರ – ಜರಿ ಬಟ್ಟೆ

ಹುಡದಿ – ಗಲಾಟೆ, ಗದ್ದಲ

ಹೊಂತಕಾರಿ – ಚಾತುರ್ಯವುಳ್ಳವಳು, ಚತುರೆ

# ಅನುಬಂಧ–೨

## ಟಿಪ್ಪಣಿಗಳು

೧

ಭಗವಂತನಿಗೆ ಅನನ್ಯವಾಗಿ ಶರಣಾಗತನಾಗು ಎಂಬುದನ್ನು ಮಾರ್ಮಿಕವಾಗಿ ಈ ಸುಳಾದಿಯಲ್ಲಿ ತಂದಿದ್ದಾರೆ.

೨

ಭಗವಂತ–ಭಕ್ತನಲ್ಲಿರುವ ಸತಿಪತಿಭಾವದ ಸಶಕ್ತವರ್ಣನೆ

ಸಾಕಿದೇನು=ಸಾಕು+ಇದೇನು

೧೦

ದಶಾವತಾರ ವರ್ಣನೆ : ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ . ಬುದ್ಧ ಮತ್ತು ಕಲ್ಕಿ.

೧೪

ಗಿರಿಜೇಶಗೆ ನಿನ್ನರಮೈ ಇತ್ತ–ಶ್ರೀಹರಿಯು ಶಿವನಿಗೆ ತನ್ನ ಅರ್ಧ ಶರೀರವನ್ನಿತ್ತುದು ಒಂದು ನವೀನ ಕಲ್ಪನೆ. ಇದಕ್ಕೆ ಯಾವುದಾದರೊಂದು ಪುರಾಣದ ಆಧಾರವಿರಬೇಕು.

೧೭

ಈ ಹಾಡಿನಲ್ಲಿ ಕೆಲವು ಅಪೂರ್ವ ಪೌರಾಣಿಕ ಪ್ರಸಂಗಗಳಿವೆ. ಅವನ್ನು ಬ್ರಹ್ಮಾಂಡ, ಭವಿಷ್ಯೋತ್ತರ ಪುರಾಣಗಳಿಂದ ಎತ್ತಿಕೊಂಡಂತೆ ಕಾಣುತ್ತದೆ.

ಎತ್ತಿನ ಪೆಸರುಳ್ಳ ಮತ್ತ ರಕ್ಕಸನ್ನ–ಬಾಲಕೃಷ್ಣನನ್ನು ಕೊಲ್ಲಲು ಧೇನುಕನೆಂಬ ರಾಕ್ಷಸ ಬರುತ್ತಾನೆ. ಕೃಷ್ಣ ಬಲರಾಮರಿಂದ ಸೋತುಹೋದ ಆ ರಕ್ಕಸನು ತನ್ನ ಕುತ್ತಿಗೆಯನ್ನೇ ಕಡಿದು ಅರ್ಪಿಸಹೋದಾಗ ಭಗವಂತ ಅವನಿಗೆ ಮೋಕ್ಷಮಾರ್ಗ ತೋರುತ್ತಾನೆ.

ಸಾಸಿರ ಮುಖವುಳ್ಳ ಶೇಷನಹಂಕಾರ ಒಮ್ಮೆ ಲಕ್ಷ್ಮೀನಾರಾಯಣರು ಏಕಾಂತದಲ್ಲಿದ್ದಾಗ ಶೇಷನನ್ನು ಬಾಗಿಲಿಗೆ ಕಾವಲಿರಿಸುತ್ತಾರೆ. ಆ ವೇಳೆಗೆ ವಾಯುದೇವರು ಬರುತ್ತಾರೆ. ಅವರನ್ನು ಶೇಷನು ಒಳಗೆ ಬಿಡುವುದಿಲ್ಲ. ಪರಸ್ಪರರ ವಿವಾದವನ್ನು ಕೇಳಿ ನಾರಾಯಣನು ಹೊರ ಬಂದು ಏನೆಂದು ವಿಚಾರಿಸುವನು. ಶೇಷ ತಾನು ಹೆಚ್ಚು ಎಂಬ ರೀತಿಯಲ್ಲಿ ಜಂಬದಿಂದ ಮಾತಾಡಿದಾಗ ನಿಮ್ಮಿಬ್ಬರ ಸಾಮರ್ಥ್ಯದ ಪರೀಕ್ಷೆಯಾಗಲಿ ಎಂದು ಪರಮಾತ್ಮ ಹೇಳುತ್ತಾನೆ. ಯಾವ ಪರೀಕ್ಷೆ? ಶೇಷನು ತನ್ನ ಸಮಸ್ತ ಶರೀರವನ್ನು ಪರ್ವತಕ್ಕೆ (ಈಗಿನ ತಿರುಪತಿ ಬೆಟ್ಟ) ಸುತ್ತುವರಿಯಬೇಕು. ವಾಯುದೇವರು ಅದನ್ನು ಉರುಳಿಸಬೇಕು; ಉರುಳಿಸಲಾಗದಿದ್ದರೆ ಶೇಷ ಗೆದ್ದಂತೆ ಇದು ನಿಯಮ. ಅದರಂತೆ ಶೇಷ ಪರ್ವತವನ್ನು ಸುತ್ತುವರಿದ. (ಅದು ಕಾರಣದಿಂದ ತಿರುಪತಿ ಬೆಟ್ಟಕ್ಕೆ ಶೇಷಾಚಲವೆಂಬ ಹೆಸರೂ ಇದೆ ). ಆದರೆ ವಾಯುದೇವರು ಬರಿಯೆ ತನ್ನ ಕಾಲಿನ ಕಿರುಬೆರಳಿನಿಂದ ಅದನ್ನು ದೂಡಿದ್ದರ ಪರಿಣಾಮವಾಗಿ ಪರ್ವತ ಬುಡಮೇಲಾಯಿತಂತೆ. ಶೇಷನ ಅಹಂಕಾರವನ್ನು ವಾಯುವು (ಶ್ವಸನ) ಮುರಿದದ್ದು ಹೀಗೆ.

ಈ ಬೆಟ್ಟದ ಮಹತ್ವವನ್ನು ವ್ಯಕ್ತಪಡಿಸಲೆಂದೇ ಮುಂದಿನ ನುಡಿಯೂ 'ಮಾಧವ ಮಾದಿಗ,' ಬಂದಿದೆ. ಆ ಕಥೆ ಹೀಗಿದೆ.

ಮಾಧವನೆಂಬ ಸದ್ಬ್ರಾಹ್ಮಣ ಕುಂತಳೆ ಎಂಬ ಮಾದಿಗ ಹೆಣ್ಣಿನೊಡನೆ ಮೋಹಗೊಳ್ಳುತ್ತಾನೆ. ಆಕೆ 'ನಿನ್ನ ಬ್ರಾಹ್ಮಣ್ಯವನ್ನೆಲ್ಲ ಬಿಡಬೇಕು' ಎಂಬ ಕರಾರು ಹಾಕುತ್ತಾಳೆ. ಅವಳೊಟ್ಟಿಗೆ ೧೨ ವರ್ಷ ಸಂಸಾರ ಮಾಡಿಯಾದ ಮೇಲೆ ಆಕೆ ಸಾಯುತ್ತಾಳೆ. ಅದರಿಂದ ಹುಚ್ಚು ಹಿಡಿದಂತಾಗಿ, ಯಾವುದೋ ಒಂದು ಯಾತ್ರಾ ಗುಂಪಿನೊಂದಿಗೆ ಈತ ತಿರುಪತಿಯ ಬೆಟ್ಟಕ್ಕೆ ಬರುತ್ತಾನೆ. ಬೆಟ್ಟದ ಸ್ಪರ್ಶ ಮತ್ತು ಸಂಸರ್ಗದಿಂದಾಗಿ ಅವನು ತನ್ನ 'ಪಾಪ'ವನ್ನೆಲ್ಲ ಕಾರಿಕೊಳ್ಳುತ್ತಾನೆ. ಬ್ರಾಹ್ಮಣ ಜೀವನದ ಸ್ಮರಣೆಯಾಗುತ್ತದೆ. ಪರಮಾತ್ಮನಾದ ಮಾಧವ ಈ ಬ್ರಾಹ್ಮಣನನ್ನು ಉದ್ಧರಿಸಿದ ರೀತಿ ಇದು. (ಪುರಾಣದಲ್ಲಿ ಈ ಕತೆ ಇನ್ನೂ ವಿಸ್ತಾರವಾಗಿ ಬಂದಿದೆ.)

### ೨೬

ಈ ಕೀರ್ತನೆಗೆ ಭಾಗವತದ ವೇಣುಗೀತದ ಶ್ಲೋಕವೊಂದರ ಆಧಾರವಿದೆ:

ವಾಮಬಾಹುಕೃತ ವಾಮಕಪೋಲೊ
ವಲ್ಗಿತ ಭ್ರುರ ದರಾರ್ಪಿತ ವೇಣುಃ
ಕೋಮಲಾಂಗುಲಿಭಿರಾಶ್ರಿತ ಮಾರ್ಗಂ
ಗೋಪ ಈರಯಿತ ಮುಕುಂದ

### ೨೮

ಮುಕ್ಕುಂದ–ಮುಕುಂದ

೩೫

ದಶಾವತಾರದ ಇನ್ನೊಂದು ಹಾಡು. ಆದರೆ ಒಂದೊಂದು ಅವತಾರವನ್ನು ವಿಶ್ಲೇಷಿಸುವಲ್ಲಿ ನಾವೀನ್ಯವಿದೆ.

೩೮

ವೈಕಾರಿಕ, ತೈಜಸ, ತಾಮಸ– ಎಂಬೀ ಮೂರು ತತ್ವಗಳು ರುದ್ರದೇವರಿಗೆ ಸಂಬಂಧಿಸಿದವು; ಮಾಧ್ವ ಸಿದ್ಧಾಂತದಲ್ಲಿ ವಿಶೇಷ ಪ್ರಾಧಾನ್ಯವನ್ನು ಪಡೆದಿದೆ.

೪೦

ಶಿವ ಪಾರಮ್ಯವನ್ನು ನಿಂದಾಸ್ತುತಿಯ ಮೂಲಕ, ಪಾರ್ವತಿಯ ನೆಪವಾಡಿ ವರ್ಣಿಸಲಾಗಿದೆ.

೪೧

ವ್ರತಗಳಲ್ಲಿ ಮೌನಗೌರಿ ಎಂಬ ವ್ರತವಿದೆ. ಅದರ ನೆಪದಿಂದ 'ಮಾತಾಡೇ ಮೌನದ ಗೌರಿ' ಎಂದು ಕರೆದಿದೆ. ನಿಜವೆಂದರೆ ಪೂಜೆ ಮಾಡುವವರೇ ಮೌನದಿಂದರಬೇಕು ಈ ವ್ರತದಲ್ಲಿ!

೪೨

ಇತಿಹಾಸಪ್ರಸಿದ್ಧ ಶ್ರೀ ವ್ಯಾಸತೀರ್ಥಯತಿಗಳ ವರ್ಣನೆ. ಬ್ರಹ್ಮಣ್ಯತೀರ್ಥರು ಇವರ ವಿದ್ಯಾಗುರುಗಳು. ಶ್ರೀಪಾದರಾಜರು ದೀಕ್ಷಾಗುರುಗಳು. ವಿಜಯನಗರದ ಕೃಷ್ಣದೇವರಾಯನನ್ನು ಮಹಾರೋಗದಿಂದ ಪಾರುಮಾಡಿದ್ದರು. ಪುರಂದರ, ಕನಕದಾಸರು ಇವರಿಂದಲೇ ಉದ್ಧಾರವಾದವರು. ಕೀರ್ತನೆಯ ಕೊನೆಯಲ್ಲಿ ಶ್ರೀ ವಾದಿರಾಜರಿಗೂ ಪಾಠಹೇಳಿದರೆಂಬ ಮಾತಿದೆ. ಅದಕ್ಕೆ ಸಮಕಾಲಿನ ಆಧಾರವಿಲ್ಲ.

೪೩

ಉತ್ತರಾದಿಮಠದ ೧೩ನೆಯ ಪೀಠಾಧಿಪತಿಗಳಾದ ರಘೂತ್ತಮತೀರ್ಥರ ಸ್ತುತಿ. ತಿರುಕೊಯ್ಯಲೂರಿನಲ್ಲಿ ಅವರ ವೃಂದಾವನವಿದ್ದು, ಶ್ರೀದವಿಠಲರು ಅದನ್ನು ಸಂದರ್ಶಿಸಿದಾಗ ರಚಿಸಿದ ಕೀರ್ತನೆ.

### ೪೪

ಸೋದೆಯಲ್ಲಿ ನೆಲೆನಿಂತ ಶ್ರೀ ವಾದಿರಾಜರ ಸ್ತೋತ್ರವಿದು. 'ಹಯವದನ' ಮುದ್ರಿಕೆಯಲ್ಲಿ ಮುನ್ನೂರಕ್ಕೆ ಮೇಲ್ಪಟ್ಟು ಕೀರ್ತನೆಗಳನ್ನು ರಚಿಸಿದ್ದಾರೆ. ೧೨೦ ವರ್ಷ ಬಾಳಿದ ಕ್ರಿ.ಶ. ೧೪೮೦–೧೬೦೦) ಮಹಾಮಹಿಮರು.

### ೪೫

ಮಂತ್ರಾಲಯದ ಶ್ರೀ ರಾಘವೇಂದ್ರರನ್ನು ಕೊಂಡಾಡುವ ಈ ಹಾಡು ತುಂಬಾ ಜನಪ್ರಿಯವಾದದ್ದು.

### ೪೬

ಇಲ್ಲಿಯ ಶ್ರೀ ಸತ್ಯಬೋಧರು ಸವಣೂರಲ್ಲಿ ನೆಲೆನಿಂತ ಕ್ರಿ.ಶ. ೧೭೪೪–೧೭೮೪ ಸುಪ್ರಸಿದ್ಧ ಯತಿಗಳು. ಉತ್ತರ ಕರ್ನಾಟಕದ ಮಾಧ್ವರಿಗೆ ವಿಶೇಷವಾಗಿ ಬೇಕಾದವರು.

### ೪೭

ಶ್ರೀ ಸತ್ಯಧರ್ಮರು ಕ್ರಿ.ಶ. ೧೭೯೭–೧೮೩೦ ಉತ್ತರಾದಿಮಠದ ೨೭ನೆಯ ಪೀಠಸ್ಥರು. ಹೊಳೆಹೊನ್ನೂರಲ್ಲಿ ಇವರ ವೃಂದಾವನವಿದೆ.

### ೪೮–೫೨

ಶ್ರೀ ವಿಜಯದಾಸ ಗೋಪಾಲದಾಸರ ಶಿಷ್ಯರಾದ ಮಾನ್ವಿಯ ಶ್ರೀ ಜಗನ್ನಾಥದಾಸರ ಕುರಿತ ಹಾಡುಗಳಿವು. ಶ್ರೀದವಿಠಲರಿಗೆ ದಾಸಪದವಿಯೊದಗಿ ಬರುವಂತೆ ಮಾಡಿದ ಸ್ವರೂಪೋದ್ಧಾರಕರು. ಹೀಗಾಗಿ ಶ್ರೀದವಿಠಲ ಕೃತ ಹಲವಾರು ಹಾಡುಗಳು ಅವರಿಗೆ ಸಂಬಂಧಿಸಿವೆ.

'ರಂಗನೊಲಿದ ದಾಸರು ಭಾಗವತರು' ಎಂಬುದು ಶ್ರೀ ಜಗನ್ನಾಥದಾಸರಿಗೇ ವಿಶಿಷ್ಟವಾದ ಉಪಾಧಿಯಾಗಿದೆ.

ಶ್ರೀ ಜಗನ್ನಾಥದಾಸರು ತೀರಿಹೋದ ತಿಥಿಯೂ ಇಲ್ಲಿ ನಿಶ್ಚಿತವಾಗಿ ಬಂದಿದೆ. ಅದು ಕ್ರಿ.ಶ. ೧೮೦೯ನೆಯ ವರ್ಷದಲ್ಲಿ ಬರುವ ಭಾದ್ರಪದ ಕೃಷ್ಣ ನವಮಿ.

ಜಗನ್ನಾಥದಾಸರು ರಚಿಸಿದ ದೀರ್ಘಕಾವ್ಯ 'ಹರಿಕಥಾಮೃತಸಾರ'ದ ಪ್ರಸ್ತಾಪ ಅವಶ್ಯವಾಗಿ ಬಂದಿದೆ.

೫೨

ಬಲ್ಯಾದಿ=ಬಲಿ+ಆದಿ. ಬಲಿ ಮೊದಲಾದವರು ಭಗವಂತನ ಅಪಾರ ಮಹಿಮೆಯನ್ನು ನರರಿಗೆ ಬೋಧಿಸುತ್ತ ಅವನಿಗೆ ಶರಣಾಗತನಾಗಬೇಕೆನ್ನುವ ವಿಚಾರವನ್ನು ಇಲ್ಲಿ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ.

೬೧

ಅಕ್ರೂರನು ಕಂಸನಾಣತಿಯ ಮೇರೆಗೆ ಬಲರಾಮ ಕೃಷ್ಣರನ್ನು ಕರೆತರುವುದಕ್ಕೆಂದು ಗೋಕುಲಕ್ಕೆ ಬರುವ ಸಂದರ್ಭ ಇಲ್ಲಿದೆ. ಆ ರಥವು ಹೊರಡುವುದಕ್ಕೆ ಮುಂಚೆಯೇ ಅವನ ಮನೋರಥ ಗೋಕುಲ ತಲುಪಿದೆ ಎಂಬುದಾಗಿ ಭಾವವಿದು. ಶ್ರೀಕೃಷ್ಣನಲ್ಲಿ ಅಕ್ರೂರನಿಗಿದ್ದ ಭಕ್ತಿಯ ಪರಾಕಾಷ್ಠೆಯನ್ನು ಇಲ್ಲಿ ಕಾಣುತ್ತೇವೆ.

೬೬

ದಾಸರು ಇಲ್ಲಿ 'ಜೀವಸತಿ, ಪರಮಾತ್ಮಪತಿ' ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ.

೭೭

ಆವಲ್ಯ=ಯಾವಲ್ಲಿಯೇ

೯೬

ನರಸಿಂಹದೇವರ ಪರೋಕ್ಷ ವರ್ಣನೆ

ಶ್ರೀ ಸತ್ಯಬೋಧರು-೪೬ರ ಟಿಪ್ಪಣಿ ನೋಡಿರಿ.

೯೯

ದುರ್ವಿಷಯಗಳು ಹಂದಿ, ನಾಯಿಗಳಿಗೆ ಇರಬೇಕಾದಂಥವು. ಅವು ಇದ್ದುದಾದರೆ ಬ್ರಾಹ್ಮಣನಿಗೆ ಎಂದಿಗೂ ಸಲ್ಲವು.

೧೦೦(ಅ)

ತುಳಸೀದೇವಿಯ ಮೇಲಿನ ಈ ಹಾಡಿನಲ್ಲಿ ಅವಳ ಉದ್ಭವ, ಶ್ರೀಹರಿಗೆ ಅವಳು ಅತ್ಯಂತ ಪ್ರಿಯಳಾದದ್ದರ ಹಿನ್ನೆಲೆ ಬಂದಿವೆ.

## ೧೦೪

ಮೂರನೆಯ ಗುಣ–ತಮೋಗುಣ; ಸತ್ವ, ರಜಸ ಇವು ಮೊದಲಿನವು.

ಮೂರಾವತಾರ–ಹನುಮ, ಭೀಮ, ಮಧ್ವ ಇವು ವಾಯುದೇವರ (ಮರುತಾತ್ಮಜನ) ಮೂರು ಅವತಾರಗಳು

ಮೂರಾರು ದ್ವಾರಗಳು=೯. ಅವುಗಳಲ್ಲಿ ಏಳು ದ್ವಾರಗಳು ಜ್ಞಾನಸಾಧನೆಗೆ. ಅವೆಂದರೆ ಕಣ್ಣುಗಳು, ಕಿವಿಗಳು, ಮೂಗಿನ ಹೊರಳೆಗಳು, ಬಾಯಿ. ಇತ್ತ ಮೂತ್ರದ್ವಾರ ಗುದದ್ವಾರಗಳು, ಮೂತ್ರ ಪುರೀಷಗಳ ವಿಸರ್ಜನೆಗೆ.

ಆರೆರಡು ಪೆಸರುಳ್ಳ ಅಂಜನಾತ್ಮನಿಗೆ–ವಾಯುದೇವರಿಗೆ ೧೨ ವಿವಿಧ ಹೆಸರುಗಳಿವೆ.

ಪಂಚಮಹಾಪಾತಕಗಳಿವು: ಬ್ರಹ್ಮಹತ್ಯೆ, ಸುರಾಪಾನ, ಗುರುಭಾರ್ಯಾಗಮನ, ಕಳ್ಳತನ, ಮತ್ತು ಇವುಗಳ ಸಂಸರ್ಗ.

## ೧೦೫

ರುಖಮಾಪತಿ–ರುಕ್ಮಿಣಿಯ ಪತಿ

ಶ್ರೀ ವಿಜಯೀಂದ್ರರು ತಮ್ಮ ಗುರುಗಳಾದ ಶ್ರೀ ವ್ಯಾಸರಾಯರ ಮೇಲೆ ರಚಿಸಿದ ಹಾಡಿನ ಭಾವವೇ ಇಲ್ಲಿದೆ.

## ೧೦೮

ಶ್ರೀ ಸತ್ಯಪರಾಯಣರು ಉತ್ತರಾದಿಮಠದ ೩೦ನೆಯ ಪೀಠಾಧಿಪತಿಗಳು. ಕಾಲ: ಕ್ರಿ.ಶ.೧೮೪೨–೧೮೬೩

## ೧೦೯

ಇದೊಂದು ಲೌಕಿಕ ಸಂದರ್ಭದ ಹಾಡು. ಗುಂಡಪ್ಪ ಎಂಬವನ ಮನೆಗೆ ಹರಿಕೀರ್ತನ ಮಾಡುತ್ತ ಹೋದರು. ಅವನು ಭಿಕ್ಷುಕರಿಗೆ ಕೊಡುವ ರೀತಿಯಲ್ಲಿ ಹಣವನ್ನು ಕೊಟ್ಟಾಗ ದಾಸರು ಅಲ್ಲೇ ಎಸೆದು ಬಂದರು. ಹರಿದಾಸಜೀವನದ ಒಂದು ಬಗೆಯನ್ನು ಕಾಣಬಹುದು.

## ೧೨೪

ಅಷ್ಟಮಿ ನಿಶೆಯೊಳಾದರೂ ಉಷ್ಣವಲ್ಲವೆ ಕೃಷ್ಣಾ ಕೃಷ್ಣ ಹುಟ್ಟಿದ್ದು ಅಷ್ಟಮೀ ತಿಥಿಯ ಮಧ್ಯರಾತ್ರಿ. ಇಲ್ಲಿ ಉಷ್ಣ ಎಂದರೆ ತೇಜಃಪುಂಜನೆಂದು ತಿಳಿಯಬಹುದು.

೧೨೭

ಭಕ್ತರ ಹೃದಯದಲ್ಲಿ ಬಂದು ನೆಲೆಸುತ್ತಾನೆ ದೇವರು. ರಮಾ, ಬ್ರಹ್ಮ, ದೇವಾದಿಗಳ ಸೇವೆ ಬೇಸರ ತರಿಸಿತೆಂದು ಹಾಗೆ ಮಾಡಿದ್ದಾನೆಂದು ದಾಸರು ಊಹಿಸುತ್ತಾರೆ.

೧೩೦

ಯಶೋದೆ ಕಂದ ಕೃಷ್ಣನನ್ನು ಮಲಗಿಸುವ ಯತ್ನದಲ್ಲಿ ಕತೆ ಹೇಳುತ್ತಾಳೆ. ಯಾರದು? ಕೃಷ್ಣನ ಹಿಂದಿನ ಅವತಾರದ ಶ್ರೀ ರಾಮಚಂದ್ರನ ಕತೆ. ಮಲಗಿದಲ್ಲಿಯೆ 'ಹೂಂ' ಎನ್ನುತ್ತ ಕತೆಯನ್ನು ಆಲಿಸುತ್ತಿದ್ದಾನೆ. ಕಥಾ ಮಧ್ಯದಲ್ಲಿ 'ರಾವಣನು ಸೀತೆಯನ್ನು ಅಪಹರಿಸಿದ' ಎಂದು ಯಶೋದೆ ನುಡಿದಾಗ 'ಹೂಂ'ಕಾರದ ನಟನೆ ಮಾಯವಾಗಿ, ಕೋಪದಿಂದ ಕಿಡಿಕಿಡಿಯಾಗುತ್ತಾನೆ ಹಿಂದಿನ ಪ್ರಸಂಗದ ಅರಿವಾಗಿ! ಸುಂದರವಾದ ಕಲ್ಪನೆ ಇಲ್ಲಿದೆ.

೧೫೦

ಬಾಲಕೃಷ್ಣನ ವೇಣುನಾದದ ನಿಮಿತ್ತದಿಂದ ಭಗವಂತನು ಗೈದ ಹಲವಾರು ಮಹಿಮೆಗಳನ್ನು ಇಲ್ಲಿ ಕೊಟ್ಟಿದೆ. ದಶಾವತಾರವೂ ಕಾಣಿಸಿಕೊಂಡಿದೆ.

೧೫೨

ವೈಷ್ಣವರಿಗೆ ಸಾಲಿಗ್ರಾಮವು ಅತ್ಯಂತ ಪೂಜನೀಯ. ಅದು ಪಾಷಾಣವಲ್ಲ ಎಂಬುದಾಗಿ ವಿವರಿಸಿದ್ದಾರೆ.

೧೫೪

ಮಂದಗೆ ಎಂದರೆ ಮಂದನಾದವಗೆ ಜಡಮತಿಗೆ ಉದ್ಧಾರ ಗೈದನೆಂಬುದಕ್ಕೆ ಸೂಕ್ತವಾದ ಹೋಲಿಕೆಗಳನ್ನು ಕೊಟ್ಟಿದ್ದಾರೆ.

೧೫೪–೧೫೬

ದಶಾವತಾರದ ಮೇಲಿನ ಹಾಡುಗಳೇ ಎಲ್ಲಾ, ಅವೇ ಹತ್ತು ಅವತಾರಗಳದ್ದು. ನವನವೀನ ಕಲ್ಪನೆಗಳಿವೆ.

೧೫೭

ಇದೊಂದು ವಿನೂತನ ಕಲ್ಪನೆಯ ಹಾಡು. ಶ್ರೀಮನ್ನಾರಾಯಣನ ದಶಾವತಾರಗಳು, ಅವನ ಅರ್ಧಾಂಗಿ ಲಕ್ಷ್ಮೀದೇವಿಯಲ್ಲಿ ಪ್ರತಿಮಾ ಸ್ವರೂಪವಾಗಿ ಕಾಣಿಸಿಕೊಂಡಿವೆ. ಹಾಗೆಂದು

ಅವಳಿಗೆ ಹೇಳುತ್ತಾನೆ. ಉದಾಹರಣೆಗೆ ಮತ್ಸ್ಯಾವತಾರ. ಆದರೆ ಲಕ್ಷ್ಮಿಯು ಮೀನಾಕ್ಷಿಯೇ "ಅಲ್ಲಿರುವುದು ಸ್ವಚ್ಛ ಜಲ. ಆದ್ದರಿಂದ ಮತ್ಸ್ಯಾವತಾರದ ಉತ್ಸವವನ್ನು ನೀ ತೋರುತ್ತಿರುವಿ" ಎಂದು ಹೇಳಿದೆ.

೧೬೫

ಚಂದಿರನಗ್ರಜೆ-ಲಕ್ಷ್ಮೀದೇವಿ. ಏಕೆಂದರೆ ಸಮುದ್ರಮಥನ ಕಾಲದಲ್ಲಿ ಲಕ್ಷ್ಮೀ ಉದಯಿಸಿದ ಮೇಲೆ ಚಂದ್ರ ಬರುತ್ತಾನೆ.

೧೭೩

ಕಾಪ್ಯಪುರ-ಇದು ಉಡುಪಿಯ ಹತ್ತಿರದ 'ಕಾಪು' ಇರಬೇಕು. ಶ್ರೀ ಮಧ್ವಾಚಾರ್ಯರ ಜನ್ಮಸ್ಥಳವೆಂದು ಪ್ರಸಿದ್ಧ ಪಡೆದ ಪಾಜಕವು ಹತ್ತಿರದಲ್ಲೇ ಇದೆ.

೧೭೫

ಲಂಕೆಯಲ್ಲಿ ಸೀತಾದೇವಿ ಹನುಮಂತನನ್ನು ಕಂಡಾಗಿನ ದೃಶ್ಯವಿದು.

೧೭೬

ಇಲ್ಲಿ ಬರುವ ಕುಂಚೂರು ಹಿರೇಕೇರೂರ ತಾಲೂಕಿನಲ್ಲಿಯ ಊರು. ನರಸಿಂಹವಿಠಲರ ಜನ್ಮ ಸ್ಥಳ. ಇಲ್ಲಿ ಹನುಮಂತದೇವರ ಗುಡಿ ಇದೆ.

೨೦೨ ಇಲ್ಲಿ ವರ್ಣಿತರಾದ ಶ್ರೀ ಜಯತೀರ್ಥರು ಉತ್ತರಾದಿಮಠದ ೫ನೆಯ ಪೀಠಸ್ಥರು(೧೩೬೫-೧೩೮೭). ಅವರು ಪೂರ್ವಾಶ್ರಮದಲ್ಲಿ ದೇಶಪಾಂಡೆ ಮನೆತನದವರೆಂದು ಈ ಕೀರ್ತನೆಯಲ್ಲಿ ಉಕ್ತವಾಗಿದೆ. ನದಿಯನ್ನು ದಾಟುವಾಗ ಕುದುರೆಯ ಮೇಲೆ ಕುಳಿತೇ ನೀರು ಕುಡಿಯುತ್ತಿದ್ದುದನ್ನು ಕಂಡು, ಶ್ರೀ ಅಕ್ಷೋಭ್ಯತೀರ್ಥರು "ಕಿಂ ಪಶುಪೂರ್ವದೇಹೇ" ಎಂದರಂತೆ. ಅದರಿಂದ ಅವರಿಗೆ ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ಅವರ ಕೃತಿ ಸಮುದಾಯವನ್ನು ಹೊತ್ತುಕೊಂಡಿದ್ದ ಎತ್ತಿನ ಜನ್ಮದ ನೆನಪಾಗಿ ಶಾಸ್ತ್ರಾಧ್ಯಯನ ಮಾಡಿದರು ಇತ್ಯಾದಿ ಪ್ರಸಂಗ ಇಲ್ಲಿ ವರ್ಣಿತವಾಗಿದೆ.

ದ್ವೈತ ತತ್ವಜ್ಞಾನ ವಿವೇಚನೆಯಲ್ಲಿ ಶ್ರೀ ಮಧ್ವಾಚಾರ್ಯರ ಅನಂತರ ಇವರದ್ದೇ ಪ್ರಮುಖ ಪಾತ್ರ. ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆಲ್ಲ ಟೀಕೆ ಬರೆದವರಾದ್ದರಿಂದ ಟೀಕಾಚಾರ್ಯರೆಂಬ ಬಿರುದು ಸಂದಿದೆ.

## ೧೮೫–೧೮೬

ಶ್ರೀ ಬ್ರಹ್ಮಣ್ಯತೀರ್ಥರು ಕುಂದಾಪುರ ಪೀಠದವರು. ಇವರ ಶಿಷ್ಯರೇ ಸುಪ್ರಸಿದ್ಧ ಶ್ರೀ ವ್ಯಾಸರಾಯರು. ತಮ್ಮ ಹುಟ್ಟೂರಾದ ಅಬ್ಬೂರಿನಲ್ಲಿರುವ ಇವರ ವೃಂದಾವನವನ್ನು ನರಹರಿವಿಠಲರು ಸಂದರ್ಶಿಸಿದಾಗ ಬರೆದ ಕೀರ್ತನೆ ಇದು.

## ೧೯೫

ಇದೊಂದು ವಿಶಿಷ್ಟ ವಿಷಯಕವಾದ ಹಾಡು. ಓರ್ವ ದಾಸರ ಕುರಿತದ್ದು. ಯಾರವರು? ಉದ್ಧರಿಸಿ ಸಲಹಿವನ 'ಮಧ್ವಪತಿ ವಿಠಲಾ' ಎಂದಿರುವುದರಿಂದ ಈ ಅಂಕಿತದ ಒಬ್ಬ ದಾಸರನ್ನು ಕುರಿತು ಇರಬಹುದು. ಆ ಅಂಕಿತದ ಒಬ್ಬ ದಾಸರು ಆಗಿಹೋದರು. ಅವರ ಹೆಸರು ವೆಕ್ಕೇನಹಳ್ಳಿಯ ತಿಮ್ಮಣ್ಣದಾಸರು. ಕಲಿವರ್ಷ ೧೭೫೩–೧೮೩೩. ವಿಜಯದಾಸರ ಶಿಷ್ಯ ಮೋಹನದಾಸರಿಂದ ದೀಕ್ಷೆಪಡೆದವರು. 'ಪದಿನಾರ ಶತಕದೊಳು ಮೊದಲು ಜನ್ಮವ ತಾಳಿ, .. ಮತ್ತೆ ಕರ್ದನು ಬಲದಿ.. ಜನ್ಮ ತಾಳಿದೆ' ಎಂಬ ಮಾತು ಬರುವುದರಿಂದ, ಮೇಲೆ ಹೇಳಿದ ವರ್ಷಗಳಿಗೆ ಹೊಂದುತ್ತದೆ. ಪೂರ್ವಜನ್ಮದಲ್ಲಿ ಓರ್ವ ಪ್ರಸಿದ್ಧ ಹರಿದಾಸರು, ೧೮ನೆಯ ಶತಮಾನದಲ್ಲಿ ಮತ್ತೆ ಜನಿಸಿದರೆಂದು ಇದರಿಂದ ಅರ್ಥವಾಗುತ್ತದೆ. ಅವರು ತೀರಿಕೊಂಡ ತಿಥಿಯೂ ಇಲ್ಲಿ ಉಲ್ಲೇಖಗೊಂಡಿದೆ : ನಳನಾಮ ಸಂವತ್ಸರದ ಪುಷ್ಯ ಅಮಾವಾಸ್ಯೆ.

## ೨೦೯

ಆರು ನೆಗಳಿಗಳು–ಕಾಮ, ಕ್ರೋಧಾದಿ ಆರು 'ಮೊಸಳೆಗಳು'.

## ೨೧೧

'ಶಿಷ್ಟ ಹೆಂಡತಿಯ ನೀಗಿ....ಇಷ್ಟ ಪುತ್ರರ ಕೂಡಿ ಬಂದು' ಇದರಿಂದ ದಾಸರ ಪತ್ನಿಯು ಮಧ್ಯದಲ್ಲಿ ತೀರಿಹೋಗಿರಬೇಕು.

## ೨೪೯

'ಮಲಗಿ ಪಾಡೆ ಮುರಲೀಧರನು ವಲಿದು ಕುಳಿತು ಕೇಳ್ವನು' ಎಂಬುದು ಜಗನ್ನಾಥದಾಸರ ಸುಪ್ರಸಿದ್ಧವಾದ 'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ....' ಎನ್ನುವ ಹರಿಕಥಾಮೃತ ಸಾರದ ಭಾವಾನುವಾದ.

## ೨೫೭

ಇದೇ ಪಲ್ಲವಿಯು ಹಾಡು ಪುರಂದರದಾಸರ ಒಂದು ರಚನೆಯದೂ ಆಗಿದೆ.

## ೨೬೯

'ರಾಯ ಬಾರೊ ತಂದೆ ಕಾಯ ಬಾರೊ' ಎಂಬ ಜಗನ್ನಾಥ ವಿಠಲರ ಹಾಡಿನ ಅನುಕರಣೆ ಈ ಹಾಡಿನಲ್ಲಿದೆ.

## ೨೭೬–೨೭೭

ಈ ಹಾಡಿನಲ್ಲಿ ಸತ್ಯಬೋಧರ ಜೀವನದ ಸಾಧನೆಯ ಬಹುತರ ಎಲ್ಲ ವಿವರಗಳು ಬಂದಿವೆ.

## ೨೭೮–೨೮೩

ಶ್ರೀ ಸತ್ಯಧೀರರಿಂದ ಆಶ್ರಮವನ್ನು ಸ್ವೀಕರಿಸಿದ ಸತ್ಯಜ್ಞಾನರು ಕ್ರಿ.ಶ. ೧೯೦೬ರಿಂದ ೧೯೧೪ ರವರೆಗೆ ಪೀಠಸ್ಥರಾಗಿದ್ದರು.

ಹನುಮೇಶವಿಠಲರು ಇವರಿಂದಲೇ ದಾಸದೀಕ್ಷೆ ವಹಿಸಿ ಅಂಕಿತನನ್ನು ಪಡೆದ ವಿಷಯ ೨೮೩ರಲ್ಲಿ ಬಂದಿದೆ.

## ೩೦೨

ಇಲ್ಲಿ ವರ್ಣಿತರಾದ ಶ್ರೀ ಸತ್ಯಧೀರರು ಉತ್ತರಾದಿಮಠದ ೩೫ನೆಯ ಪೀಠಾಧಿಪತಿಗಳು. (ಕಾಲಃ ೧೮೮೬–೧೯೦೬). ಹನುಮೇಶರು ಅವರನ್ನು ಕಣ್ಣಾರೆ ಕಂಡಿದ್ದರು.

# ಭೂಪತಿ ವಿಠಲರು

## ಕೀರ್ತನೆ ೨

ಈ ಉದಯರಾಗದಲ್ಲಿ ದಶಾವತಾರದ ವರ್ಣನೆ ಸೊಗಸಾಗಿ ಬಂದಿದೆ.

## ಕೀರ್ತನೆ ೫

ಶ್ರೀ ಹರಿಯ ಪಾದದ್ವಯದ ಮಹಿಮೆಯನ್ನು ಬೇರೆ ಹಲವು ಹರಿದಾಸರು ವರ್ಣಿಸಿದ್ದಾರೆ. ಲಕ್ಷ್ಮೀದೇವಿಯು ಪಾದವನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಮೆಲ್ಲಗೆ ಒತ್ತುವಳು ಎಂಬ ಇಲ್ಲಿಯ ಕಲ್ಪನೆ ಹೊಸತು ಎನ್ನಬಹುದೆ ?

## ಕೀರ್ತನೆ ೬

ತಿರುಪತಿ ಮತ್ತು ಉಡುಪಿಯಲ್ಲಿರುವ ಭಗವಂತನೇ ಇಲ್ಲಿ ಎಂದರೆ ಪಂಢರಪುರದಲ್ಲಿ ನೆಲೆನಿಂತಿದ್ದಾನೆ, ಎಂಬ ಏಕೋಭಾವವನ್ನು ತೋರ್ಪಡಿಸಿದ್ದಾರೆ.

## ಕೀರ್ತನೆ ೭

ಇದೊಂದು ಅಷ್ಟಕ ಗಲಗಲಿಯಲ್ಲಿಯ ಪಾಂಡುರಂಗ ದೇವರ ನಿತ್ಯ ಪೂಜ ಸೇವಾದಿಗಳನ್ನು ವರ್ಣಿಸಿದ್ದಾರೆ. ಆಗಿನ ಭಕ್ತಿ ಭಾವದ ಉನ್ಮಾದ ಎಷ್ಟೆಂದರೆ ಮೂರ್ತಿಯನ್ನು ನೋಡುತ್ತಾ ನಿಂತರೆಂದರೆ ಅವರನ್ನು ದಬ್ಬಿದರೂ ಹಾಗೇ ನಿಲ್ಲುವರಂತೆ.

## ಕೀರ್ತನೆ ೯

ವಿಜಾಪುರ ಜಿಲ್ಲೆಯ ಗೆಣ್ಣೂರು ಎಂಬಲ್ಲಿ ಇರುವ ದುರ್ಗಾದೇವತೆಯ ವರ್ಣನೆ ಇದು. ದಕ್ಷಿಣ ಕನ್ನಡಜಿಲ್ಲೆಯಲ್ಲಿ ವಿಶೇಷ ಪೂಜೆಗೊಳ್ಳುವ ಈ ದೇವತೆಯ ಗುಡಿಗಳು ಉತ್ತರ ಕರ್ನಾಟಕದಲ್ಲಿ ಕಡಿಮೆ. ದುರ್ಗಾದೈವತದಲ್ಲಿ ಮಹಾಲಕ್ಷ್ಮಿಯ ಅಂಶವೂ ಇದೆ. ಪಾರ್ವತಿಯ ರೌದ್ರರೂಪವೂ ಇದೆ.

## ಕೀರ್ತನೆ ೧೦-೧೨

ಈ ಮೂರು ಕೀರ್ತನೆಗಳು ಪ್ರಾಣದೇವರ ವರ್ಣನೆಗೆ ಮೀಸಲು. ಗಲಗಲಿ ಮಾತ್ರವಲ್ಲದೆ, ನೆರೆಯ ಯಲಗೂರು ತುಳಸೀಗೇರಿ, ಕುಲಗೋಡ, ಗೋವನದಿನ್ನಿ, ಈ ಊರುಗಳಲ್ಲಿಯ ಹನುಮಂತ ದೇವರನ್ನೂ ನೆನೆದಿದ್ದಾರೆ.

ಮಳೆರಾಯನ ತಂದಾ ಮಳೆಯಲ್ಲೆ ಬಂದಾ ಗಲಗಲಿಗೆ ಇನ್ನು ಬರಗಾಲ ಭಯವಿಲ್ಲೆಂದಾ ಎಂಬ ಮಾತಿನ ಮೂಲಕ ಮಾರುತಿಯ ಸ್ಥಾಪನೆಯ ಸಂದರ್ಭವನ್ನು ಅರ್ಥ ಮಾಡಿಕೊಳ್ಳಬಹುದು.

೧೨ ನೇಯ ನುಡಿಯಲ್ಲಿ ಬಂದಿರುವ ಉಮರ್ಜಿ ಆಚಾರ್ಯರು ಹತ್ತೊಂಬತ್ತನೆಯ ಶತಮಾನದ ಓರ್ವ ಮಾಧ್ವ ವಿಶ್ವಶಾಸ್ತ್ರಾಧ್ಯಯನ ವ್ವಂಡಿಸಿದವರು.

## ಕೀರ್ತನೆ ೧೫

ಇದು ದತ್ತಾತ್ರೇಯನ ಸ್ತುತಿ. ಮಾಧ್ವ ಪರಂಪರೆಯ ಕೀರ್ತನೆಗಳಲ್ಲಿ ಅಪೂರ್ವವಾಗಿ ಬರುತ್ತದೆ. ಹಾಗೆ ನೋಡಿದರೆ ದತ್ತಾತ್ರೇಯನೂ ವಿಷ್ಣುವಿನ ಒಂದು ಅವತಾರವೇ ಎಂದು ತಿಳಿಯಲಾಗುತ್ತದೆ.

## ಕೀರ್ತನೆ ೧೭-೧೯

೧೫/೧೬ ಶತಮಾನದ ಯತಿವರ್ಯರಾ ಶ್ರೀಪಾದರಾಜರು, ವ್ಯಾಸರಾಯರು, ವಿಜಯೀಂದ್ರರು ಮತ್ತು ವಾದಿರಾಜರು ಈ ನಾಲ್ವರನ್ನೂ ಏಕತ್ರ ಇಲ್ಲಿ ವರ್ಣಿಸಿರುವುದೆಂದು ವಿಶೇಷ. ಹರಿದಾಸ ಸಾಹಿತ್ಯಕ್ಕೆ ಆರಂಭದ ಚಾಲನೆ ಇತ್ತವರೇ ಅವರು. ಶ್ರೀ ವಿಜಯೀಂದ್ರರಂತೂ ರಾಘವೇಂದ್ರಸ್ವಾಮಿಗಳ ಪರಮ ಗುರುಗಳು.

## ಕೀರ್ತನೆ ೨೦-೨೬

ಗುರು ಶ್ರೀ ರಾಘವೇಂದ್ರರು ಭೂಪತಿವಿಠಲರಿಗೆ ಸ್ವರೂಪೋದ್ಧಾರಕರೆನ್ನಬಹುದು. ಅಂತಾಗಿ ಅವರ ವೃಂದಾವನವನ್ನು ಸ್ವಗ್ರಾಮದಲ್ಲಿ ಪ್ರತಿಷ್ಠಾಪಿಸಿದವರು. ಅವರ ಸ್ತುತಿಪರವಾದ ೩೦ ಕ್ಕೂ ಮೇಲ್ಪಟ್ಟು ಕೀರ್ತನೆಗಳನ್ನು ಈ ದಾಸರು ರಚಿಸಿದ್ದು ಕೆಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಮಂತ್ರಾಲಯದ ಹಾಗೂ ಗಲಗಲಿ ಇವೆರಡು ಸ್ಥಳಗಳ ಹೋಲಿಕೆಯನ್ನು ಕೀರ್ತನೆ ಮನೋಜ್ಞವಾಗಿದೆ. (ಕೀ. ೨೧) ರಾಘವೇಂದ್ರರು ಪ್ರಹ್ಲಾದರ ಅವತಾರವೆಂಬುದು ತೆರೆದ ವಿಷಯ. ಗಾಂಧೀಜಿಯ ಅಸಹಕಾರ, ಸತ್ಯಕ್ಕಾಗಿ ಛಲ ಮುಂತಾದ ಪರಿಕಲ್ಪನೆಗಳನ್ನು

ಒಂದರ್ಥದಲ್ಲಿ ಪ್ರಹ್ಲಾದನೇ ಮೊದಲಿಗೆ ತಂದವ ಎಂಬ ಮಾತು ವಿನೂತನವೆನಿಸುವುದು. (ಪೇಜಾವರ ಶ್ರೀ ವಿಶ್ವೇಶತೀರ್ಥರೂ) ಈ ಮಾತನ್ನು ಆಗಾಗ ತಮ್ಮ ಭಾಷಣಗಳಲ್ಲಿ ಹೇಳುತ್ತಿದ್ದರು) ಅಂತೂ ಭೂಪತಿವಿಠಲರು ಅನೇಕ ರೀತಿಯಿಂದ ಗುರು ರಾಘವೇಂದ್ರರ ಕೃಪೆಯನ್ನು ಕೋರಿದ್ದಾರೆ.

## ಕೀರ್ತನೆ ೨೭–೨೯

ಇಲ್ಲಿ ವರ್ಣಿತರಾದ, ಸವನೂರಿನ ಸತ್ಯಬೋಧರು, ಸತ್ಯಜ್ಞಾನರು ಮತ್ತು ಸತ್ಯ ಧ್ಯಾನರು ಉತ್ತರಾದಿಮಠದ ಪರಂಪರೆಯ ಯತಿಗಳು. ಭೂಪತಿವಿಠಲರು ಕೊನೆಯವರನ್ನು ಕಣ್ಣಾರೆ ಕಂಡಿದ್ದವರು.

## ಕೀರ್ತನ ೩೨–೩೭

ಭೂಪತಿವಿಠಲರು ಮಹಿಪತಿರಾಯರ ಕಾಖಂಡಕಿ ಮನೆತನದವರೇ. ದಾಸಸಾಹಿತ್ಯ ರಚನೆಗೆ ಪೇರಕರು. ಆದ್ದರಿಂದ ಅವರ ಸ್ತುತಿಪರ ಸ್ತೋತ್ರಗಳನ್ನು ಬಹುವಾಗಿ ರಚಿಸಿದ್ದಾರೆ. ಇಲ್ಲಿ ಕೆಲವನ್ನು ಮಾತ್ರ ಕೊಟ್ಟಿದೆ. ಒಂದು ಕೀರ್ತನೆಯಲ್ಲಿ ಮಹಿಪತಿರಾಯರ ಮಗ ಕೃಷ್ಣದಾಸರ ಪ್ರಸ್ತಾಪವೂ ಇದೆ. ಇವರು ರಚಿಸಿದ ಕೀರ್ತನೆಗಳು ಮಹಿಪತಿಸುತ ಮುದ್ರಿಕೆಯನ್ನು ಇವು ಸಾವಿರಕ್ಕೂ ಒಳಗೊಂಡಿವೆ. ಮಿಕ್ಕಿವೆ.

## ಕೀರ್ತನೆ ೪೧

ಇವರು ರಾಮದುರ್ಗದ ಶ್ರೀನಿವಾಸಾಚಾರ್ಯರು. ನಾಲ್ಕು ತಲೆಮಾರಿನ ಹಿಂದಿನವರು. ಶಿಷ್ಯರನ್ನು ಮನೆಯಲ್ಲಿ ನಿಲ್ಲಿಸಿಕೊಂಡು ವಿದ್ಯಾದಾನ ಮಾಡಿದವರು.

## ಕೀರ್ತನೆ ೪೨–೪೪

ಇದು ಭೂಪತಿವಿಠ್ಠಲರ ವಾಸಸ್ಥಳವಾದ ಗಲಗಲಿಯನ್ನು ಕುರಿತದ್ದು, ಕೃಷ್ಣಾ ಮತ್ತು ವೇಣೀ ನದಿಗಳ ಸಂಗಮ. ಪುರಾಣ ಕಾಲದಲ್ಲಿ ಗಾಲವ ಋಷಿಗಳು ಇಲ್ಲಿ ತಪಸ್ಸು ಮಾಡಿದರೆಂಬ ಕಾರಣದಿಂದ ಇದಕ್ಕೆ ಗಲಗಲಿ ಎಂಬ ಹೆಸರು ಬಂದಿತೆಂಬ ಪ್ರತೀತಿ : ಇದೆ. ಶಾಸ್ತ್ರಾಧ್ಯಯನ ಹಾಗೂ ಧಾರ್ಮಿಕ ನಿಯಮ ಪಾಲನೆಗೆ ಶತಮಾನಗಳಿಂದ ಪ್ರಸಿದ್ಧಿಯನ್ನು ಪಡೆದವರು. ಭೂಪತಿವಿಠಲರೆ ಸ್ಥಾಪಿಸಿದ್ದ ವೃಂದಾವನವಂತೂ ಸರಿಯೇ, ತತ್ಪೂರ್ವದಲ್ಲಿ ನರಸಿಂಹ, ವೆಂಕಟೇಶ, ಪಾಂಡುರಂಗ, ಮಾರುತಿ, ಈಶ್ವರ, ದತ್ತಾತ್ರೇಯ, ಎಲ್ಲಮ್ಮದೇವತೆ – ಹೀಗೆ ಹಲವಾರು ದೈವತಗಳಿರುವ ಊರು. ಇಲ್ಲಿ ದೇವಭಕ್ತರು ಇರುವಂತೆ ದೇಶಭಕ್ತರು ಇರುವ ಕ್ಷೇತ್ರ ಎನ್ನುತ್ತಾರೆ. ಅಂಶಗಳನ್ನು ದಾಸರು ತಮ್ಮ ಹಲವಾರು ಕೀರ್ತನೆಗಳಲ್ಲಿ ತಂದಿದ್ದಾರೆ.

ಬೇಕಾರು ಸ್ವಗ್ರಾಮದ ವೈಶಿಷ್ಟ್ಯವನ್ನು ಇಷ್ಟರಮಟ್ಟಿಗೆ ವರ್ಣಿಸಿದ್ದು ನನ್ನ ಗಮನಕ್ಕೆ ಬಂದಿಲ್ಲ.

## ಕೀರ್ತನೆ ೪೭

"ಆಡದೇ ಮಾಡುವನು ರೂಢಿಯೊಳಗುತ್ತಮನು" ಎಂಬ ಸರ್ವಜ್ಞನ ಸುಪ್ರಸಿದ್ಧ ಮತವನ್ನು, ಇಲ್ಲಿ "ಬೇಡದೇ ಕೊಡುವವರು ರೂಢಿಗೊಳಗುತ್ತಮರು" ಹೇಳಿದುದು ಯಥೋಚಿತವಾಗಿದೆ.

## ಕೀರ್ತನೆ ೪೮

ತಾಯಿಯು ಮಕ್ಕಳನ್ನು ಆಶೀರ್ವದಿಸುವ ರೀತಿ – ಇದು "ದೇಶವನು ಪ್ರೀತಿಸು' ಎಂಬುದು ಯಾವಕಾಲಕ್ಕೂ ಹೇಳಬೇಕಾದದ್ದೇ.

ಪ್ರಸಾದ ಈ ಕವನಮಾಲಿಕೆಯ ಹುಟ್ಟು ಮತ್ತು ಬೆಳವಣಿಗೆ ರೋಚಕವಾಗಿದೆ. ರಾಮಾಚಾರ್ಯರು ೧೯೩೦ರ ದಶಕದ ಆರಂಭದಲ್ಲಿ ಗಾಂಧೀಜಿ ಕರೆಕೊಟ್ಟ ಮೇರೆಗೆ ಬಿಸನಾಳದ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ, ವಿಜಾಪುರ ಜೇಲಿನಲ್ಲಿ ಸ್ಥಾನಬದ್ಧತೆಯಲ್ಲಿದ್ದರು. ಆಗ ನಿತ್ಯದ ಪ್ರಾರ್ಥನೆಗೆಂದೆ ಸೆರೆಮನೆವಾಸಿಗಳಿಗಾಗಿ ೫ ನುಡಿಗಳನ್ನು ರಚಿಸಿದರು. ಆ ಮುಂದೆ ಕೆಲವು ವರ್ಷಗಳಾದ ವಿಜಾಪುರದ ಬ್ರಾಹ್ಮಣ ವಿದ್ಯಾರ್ಥಿ ನಿಲಯದ ವಿದ್ಯಾರ್ಥಿಗಳು ನಿತ್ಯದ ಕೋರಾನ್ನ ಭಿಕ್ಷೆಗೆ ಹೋಗುವಾಗ ಹಾಡಲೆಂದು ಹೊಸ ಹೊಸ ನುಡಿಗಳನ್ನು ರಚಿಸುತ್ತ ನಡೆದರು. ಅವನ್ನೆಲ್ಲಿ ಸಂಕಲಿಸಿ ೧೯೬೦ ರ ದಶಕದಲ್ಲಿ ಪ್ರಕಟಿಸಲಾಯಿತು. ಕೆಲವೇ ತಿಂಗಳಲ್ಲಿ ಅದರ ಸಾವಿರ ಪ್ರತಿಗಳಲ್ಲಿ ತೀರಿ ಹೋದವೆಂದು ಮರುಮುದ್ರಣ ಮಾಡಿದರು.

ಅಲ್ಲಲ್ಲಿ ಆಗಾಗ ಕಣ್ಣಿಗೆ ಬಿದ್ದ ಸಂದರ್ಭಗಳು ಸ್ಮರಣೆಗೆ ಬಂದಂತೆಲ್ಲ ಮತ್ತು ಸ್ವಾನುಭವಕ್ಕೆ ಬಂದಂಥ ಪ್ರಾಪಂಚಿಕ ಹಾಗೂ, ಪಾರಮಾರ್ಥಿಕ ವಿಷಯಗಳ ಬಗ್ಗೆ ತಾವು ಕವನಿಸುವುದಾಗಿಯೂ ಹೆಣ್ಣುಮಕ್ಕಳನ್ನೂ ವಿದ್ಯಾರ್ಥಿಗಳನ್ನೂ ಗಮನದಲ್ಲಿಟ್ಟುಕೊಂಡು ತಾವು ಈ ಕವನಗಳನ್ನು ರಚಿಸಿದುದಾಗಿಯೂ ಹೇಳಿದ್ದಾರೆ.

ಇದೇ ದೃಷ್ಟಿಕೋಣದಿಂದ ಅವರು ಸಂಸಾರಸೂತ್ರಗಳನ್ನೂ ಪದ್ಯರೂಪದಲ್ಲಿ, ಎರಡು ಭಾಗಗಳಾಗಿ ರಚಿತವಾಗಿವೆ. ಅವನ್ನೂ ಇಲ್ಲಿ ಸೇರಿಸಿಲ್ಲ. ಪ್ರಸಾದದ ನಾಲ್ಕು ನೂರರಷ್ಟು ನುಡಿಗಳಲ್ಲಿ ಐವತ್ತನ್ನು ಮಾತ್ರ ಇಲ್ಲಿ ಕೊಟ್ಟಿದೆ.

ಈ ಪದ್ಯಗಳಲ್ಲಿ ಅವರ ಮುಗಿದ ಜೀವನಾನುಭವದ ಮತ್ತು ಜನಕ್ಕೆ ಒಳ್ಳೆಯದಾಗಬೇಕೆಂಬ ಸದ್ಭಾವವು ಓತಪ್ರೋತವಾಗಿದೆ. ವಿಚಾರಸರಣಿ ಪ್ರಗಲ್ಭವಾಗಿದ್ದರೂ ನಿರೂಪಣೆ ಅತ್ಯಂತ ಸಹಜಸುಲಭವಾಗಿದೆ. ಹೀಗೆ ಮಾಡಬೇಕು. ಹಾಗೆ ಮಾಡಬೇಕು ಎಂದು ವಿಧಿಸುತ್ತ ಇದ್ದರೂ, ಅವನ್ನು ಮಿತ್ರಸಮ್ಮಿತತ್ರಯ ಹೇಳಿದ್ದಾರೆ ಎನ್ನುವುದನ್ನು ಗಮನಿಸಬೇಕು.

# ಅನುಬಂಧ – ೩
## ಅಂಕಿತನಾಮಸೂಚಿ

# ಅನುಬಂಧ–೪

## ಕೀರ್ತನೆಗಳ ಅಕಾರಾದಿ ಸೂಚಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧. | ಅಂಜನಿಯ ಉದರದಿಂ ಪುಟ್ಟುತಾರ್ಭಟಿಸುತಲಿ | ೧೦೧ |
| ೨. | ಅಂಜಬ್ಯಾಡ ಬ್ಯಾಡೆಲೋ ಜೀವ | ೫೩ |
| ೩. | ಅಂಜಲ್ಯಾತಕೋ ಅಖಿಲಭವ ದುರಿತನೆ | ೧೦೨ |
| ೪. | ಅಂಜಿಬಿಡಲಬ್ಯಾಡೋ ಮುಂದಕೆ ಮುಂದೆ | ೧೫೧ |
| ೫. | ಅಂತರಂಗಾದಿ ರಕ್ಷಿಸೊ ನಿಂತು ಭಜಿಪೆನು | ೧೨೨ |
| ೬. | ಅಂದು ಇಂದು ಎಂದೆಂದಿಗೂ ಗೋವಿಂದನೆ ಗತಿ | ೧ |
| ೭. | ಅಂಬುಜಾಕ್ಷನೆ ಪಾಲಿಸೊ ಅಂಬುಜಾಕ್ಷನೆ ಕೇಳು | ೬೭ |
| ೮. | ಅಕ್ಷಯ ನೀನಾಮೃತಂ ಕುಕ್ಷಿಯೊಳಗೆ ಪೂರ್ಣವಾಗಿಹ | ೧೬೯ |
| ೯. | ಅಗಜೆ ನಿನ್ನೊಗೆತನಕೆ ಜಗ ನಗುವದೇ | ೩೯ |
| ೧೦. | ಅಗಣಿತ ಗುಣ ನಾ ಮುಗುವೆ ಕರಾ | ೧೨೩ |
| ೧೧. | ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಾಘವೇಂದ್ರನ | ೧೮೭ |
| ೧೨. | ಅಯ್ಯೋ ಸಾಕಿದೇನು ಚಂದಾ | ೨ |
| ೧೩. | ಅರ್ಜುನಗಾನಂದಾ ಮಾಡಿದ ಗೋವಿಂದಾ | ೧೦೫ |
| ೧೪. | ಅವನೆ ಧನ್ಯನೆಲಾ ಜಗದೊಳು ಇವನೆ ಮಾನ್ಯನೆಲಾ | ೩ |
| ೧೫. | ಅಷ್ಟಮಿ ನಿಶೆಯೊಳಾದರೂ ಉಷ್ಣವಲ್ಲವೆ ಕೃಷ್ಣಾ | ೧೨೪ |
| ೧೬. | ಆಂಜನೇಯ ರಾಮ ರಂಜನೇಯಾ | ೧೭೦ |
| ೧೭. | ಆಗದಿರುವಂಥ ಕೃತಿ ಆಗಿ ಹೋಗುವುದು | ೨೪೮ |
| ೧೮. | ಆಡ ಹೋಗೋಣ ಬಾರೊ ರಂಗ ಕೂಡಿ ಕಾಳಿಂದಿ | ೨೧ |
| ೧೯. | ಆದಿಕೇಶವಗರ್ಥಿಯಲಿ ನಾನಾರ್ತಿ ಮಾಡುವೆನು | ೧೨೫ |
| ೨೦. | ಆದಿ ಕೇಶವನ ಪಾಡಿ ಸುಜನರು ಮೋದದಿಂದಲಿ | ೨೨೩ |
| ೨೧. | ಆನಮಿಸುವೆ ಗುರುವಾ ಮಂತ್ರಾಲಯ ಸ್ಥಾನ | ೧೮೮ |
| ೨೨. | ಆರುಪೇಳಿದರೊ ಜೀವಾ ನಿನಗಾರು ಪೇಳಿದರು | ೩೦೫ |

## ಭೂಪತಿ ವಿಠಲರು

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**

**ಕರ್ನಾಟಕ ಸರ್ಕಾರ**
**ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ**
**ಕನ್ನಡ ಭವನ, ಜೆ.ಸಿ. ರಸ್ತೆ**
**ಬೆಂಗಳೂರು**